


ವಾಸುದೇವ ಸಾಹಿತ್ಯರತ್ನಮಾಲೆ—

ಮತ್ತು

ಮನೋಹರ ಗ್ರಂಥಮಾಲೆಯ ೧೧೪ನೆಯ ಕುಸುಮ

೨೦ನೆಯ ವರ್ಷದ ಮೊದಲ ಗ್ರಂಥ

# ತೊಳೆದ ಮುತ್ತು

( ಬೆಳ್ಳೀಚಿಕ್ಕೆ ಸಹಿತ )

( ಸಾಮಾಜಿಕ ಮತ್ತು ಪತ್ತೇದಾರಿ ಕಥೆಗಳು )

ಬರೆದವರು :

ಕೆರೂರ ವಾಸುದೇವಾಚಾರ್ಯರು.

ಅಗಸ್ಟ
೧೯೫೨

ಬೆಲೆ
೩-೨-೦

ಪ್ರಕಾಶಕರು :
ಧೀರೇಂದ್ರ ವಾಸುದೇವಾಚಾರ್ಯ ಕೆರೂರ
ಬಾಗಿಲುಕೋಟೆ.

ಸಂಪಾದಕರು :
**ಜಿ. ಬಿ. ಜೋಶಿ**

( ಮೊದಲನೆ ಆವೃತ್ತಿ ೨೫೦೦ ಪ್ರತಿಗಳು )

ಪುಸ್ತಕ ಮಾರಾಟಗಾರರು :

ವಾಸುದೇವ ಪುಸ್ತಕಾಲಯ
ಬಾಗಿಲುಕೋಟೆ.

ಮನೋಹರ ಗ್ರಂಥಮಾಲ
ಧಾರವಾಡ.

ಮುದ್ರಕರು :
ವಿ. ವಾಯ್. ಜಠಾರ
ಕರ್ನಾಟಕ ಪ್ರಿಂಟಿಂಗ್ ವರ್ಕ್ಸ್, ಧಾರವಾಡ.

# ಅರಿಕೆ

ವಾಸುದೇವಾಚಾರ್ಯರು ಆಗೀಗ ತಮ್ಮ 'ಸಚಿತ್ರಭಾರತ' ದಲ್ಲಿ ಈ ಕತೆಗಳನ್ನು ಬರೆದು ಪ್ರಕಟಿಸಿದರು. 'ಸಂಪೂರ್ಣಕಥೆ' ಎಂದು ಇವಕ್ಕೆ ಅವರೇ ನಾಮಕರಣ ಮಾಡಿದರು. ಅವುಗಳಲ್ಲಿ ಕಾಲ್ಪನಿಕ ಮತ್ತು ಐತಿಹಾಸಿಕ ಕಥೆಗಳದೊಂದು, ಚಾರಿತ್ರಿಕ-ಕಥೆಗಳದೊಂದು, ಸಾಮಾಜಿಕ ಮತ್ತು ಪತ್ರೀಪಾರಿ ಕಥೆಗಳದೊಂದು ಹೀಗೆ ಬೇರೆ ಬೇರೆ ಸಂಕಲನಗಳನ್ನು ಮಾಡಿ, ಪ್ರತಿಯೊಂದು ಸಂಕಲನಕ್ಕೂ ಬೇರೆ ಬೇರೆ ಹೆಸರಿಟ್ಟು ಪ್ರಕಟಿಸಲಾಗಿದೆ. 'ಪ್ರೇಮ-ವಿಜಯ' ಅವುಗಳಲ್ಲಿಯ ಮೊದಲನೆಯ ಸಂಕಲನ. 'ಬೆಳಗಿದ ದೀಪಗಳು' ಎರಡನೆಯದು. 'ತೊಳೆದ ಮುತ್ತು' ಮತ್ತು 'ಬೆಳ್ಳೀಚುಕ್ಕಿ' ಮೂರನೆಯದು.

ಏಕಸಮಯದಲ್ಲಿ ಈ ಗ್ರಂಥಗಳು ವಾಸುದೇವ ಸಾಹಿತ್ಯರತ್ನ ಮಾಲೆಯಲ್ಲಿ ಪ್ರಕಟವಾಗಿಯೂ, ಮನೋಹರ ಗ್ರಂಥಮಾಲೆಯಲ್ಲಿಯ ಗ್ರಾಹಕರಿಗೂ ದೊರೆಯುವಂತಾದುದು, ಮತ್ತು ಅದಕ್ಕೆ ಅನುಕೂಲ ಮಾಡಿ-ಕೊಟ್ಟದು ಶ್ರೀ. ಧೀರೇಂದ್ರ. ವಾ. ಕೆರೂರ ಅವರ ಸಹಕಾರ ಸಹಾಯದಿಂದ ಎಂಬದನ್ನು ಬೇರೆ ಹೇಳಬೇಕಾಗಿಲ್ಲ. ಅದಕ್ಕಾಗಿ ನಾನು ಅವರಿಗೆ ಕೃತಜ್ಞನಾಗಿದ್ದೇನೆ.

ಜಿ. ಬಿ. ಜೋಶಿ.

# ಪ್ರಕಾಶಕರ ಮಾತು

ನಾನು ಮನೋಹರ ಗ್ರಂಥಮಾಲೆಯ ಸಂಪಾದಕರಾದ ಶ್ರೀ. ಜಿ. ಬಿ. ಜೋಶಿಯವರ ಸಹಾಯದಿಂದ ದಿವಂಗತ ಕೆರೂರ ವಾಸುದೇವಾಚಾರ್ಯರು ಬರೆದ ಸಾಹಿತ್ಯವನ್ನೆಲ್ಲ ಒಂದು ಕ್ರಮಬದ್ಧವಾದ ರೀತಿಯಲ್ಲಿ ಪುಸ್ತಕರೂಪವಾಗಿ ಪ್ರಕಟಿಸಬೇಕೆಂದೆಣಿಸಿ ಈ "ವಾಸುದೇವ ಸಾಹಿತ್ಯರತ್ನಮಾಲೆ"ಯನ್ನು ಪ್ರಾರಂಭಿಸಿದ್ದೇನೆ. ಹನ್ನೆರಡು ಸಾಮಾಜಿಕ ಕಥೆಗಳ ಸಂಕಲನವಾದ "ತೊಳೆದ ಮುತ್ತು"ನೊಡನೆ ಬೇರೆಯಾಗಿ ಪ್ರಕಟಿಸಬೇಕೆಂದಿದ್ದ ಮೂರು ಪತ್ತೇದಾರಿ ಕಥೆಗಳು ಕೂಡಿದ "ಬೆಳ್ಳೀ ಚಿಕ್ಕೆ"ಯೂ ಕೂಡಿದ ಈ ಗ್ರಂಥವು ಆ ಮಾಲೆಯಲ್ಲಿಯ ಏಳನೆಯ ರತ್ನವಾಗಿದೆ.

ನಂಜನಗೂಡಿನ ಸತಿಹಿತೈಷಿಣೀ ಗ್ರಂಥಮಾಲೆಯ ಸಂಪಾದಿಕೆಯರಾದ ಶ್ರೀಮತಿ ತಿರುಮಲಾಂಬಾ ಅವರು ದಿವಂಗತ ವಾಸುದೇವಾಚಾರ್ಯರ ಮೇಲಿನ ತಮ್ಮ ಗೌರವದಿಂದ, ತಮ್ಮಲ್ಲಿದ್ದ 'ಸಚಿತ್ರಭಾರತ'ದ ಮೊದಲ ಸಂಪುಟವನ್ನು ಸಮಯಕ್ಕೆ ಒದಗಿಸಿಕೊಟ್ಟು ಸಹಾಯಮಾಡಿದ್ದಾರೆ; ಅದಕ್ಕಾಗಿ ನಾನು ಅವರಿಗೆ ಉಪಕೃತನಾಗಿದ್ದೇನೆ. ಅಲ್ಲದೆ ಈ ಮೊದಲೆ ಸಚಿತ್ರಭಾರತದ ಮೂರೂ ಸಂಪುಟಗಳನ್ನು ಕೊಟ್ಟು ಗ್ರಂಥಪ್ರಕಟನೆಗೆ ಸಹಾಯ ಮಾಡಿದ ಹುಬ್ಬಳ್ಳಿಯ ಶ್ರೀ. ಸರಸ್ವತಿ ವಿದ್ಯಾರಣ್ಯ ವಾಚನಾಲಯದ ಸಂಚಾಲಕರಿಗೂ ಮೂರನೆಯ ಸಂಪುಟವೊಂದನ್ನು ಕೊಟ್ಟ ಶ್ರೀ. ಮಂಗಳವೇಢೆ ಶ್ರೀನಿವಾಸರಾಯರಿಗೂ ನಾನು ಋಣಿಯಾಗಿದ್ದೇನೆ.

—ಧೀರೇಂದ್ರ ವಾ. ಕೆರೂರ

# ತೊಳೆದ ಮುತ್ತು

## ಸಾಮಾಜಿಕ ಕಥೆಗಳು

# ಪರಿವಿಡಿ

**ಸಾಮಾಜಿಕ-ಕಥೆಗಳು :**



**ಪತ್ತೇದಾರಿ-ಕಥೆಗಳು :**

# ಪ್ರಥಮ ದರ್ಶನದ ಪ್ರೇಮ

ಭಾಗೀರಥೀ ತೀರದಲ್ಲಿರುವದೊಂದು ಅತಿ ರಮಣೀಯವಾಗಿರುವ ಪ್ರದೇಶದಲ್ಲಿ ಕುಸುಮಪುರವೆಂಬ ಚಿಕ್ಕದಾದ ನಗರವಿತ್ತು. ಭೂಮಿಯ ಗುಣಕ್ಕಾಗಿ ಆ ಪ್ರದೇಶದಲ್ಲಿ ಬೆಳೆಯುವ ಬಕುಲ, ಚಂಪಕ, ಮಾಲತೀ, ಪುನ್ನಾಗ, ಗುಲಾಬ, ಸೇವಂತಿ ಮುಂತಾದ ಸಕಲ ಪುಷ್ಪಜಾತಿಗಳಿಗೂ ವಿಲಕ್ಷಣವಾದ ಸುಗಂಧವಿರುವದರಿಂದ ಆ ನಗರಕ್ಕೆ ಕುಸುಮಪುರವೆಂಬ ಹೆಸರು. ಈ ವಿಶೇಷವಾದ ಗುಣಕ್ಕಾಗಿಯೇ ಚಿತ್ರರಥಾದಿ ಗಂಧರ್ವರು ಮೆಚ್ಚಿ, ಆ ಸ್ಥಳದಲ್ಲಿ ಮನಸೋಯ ವಿಹಾರ ಮಾಡುತ್ತಿದ್ದರೆಂದು ಗ್ರಾಮ ಪುರೋಹಿತರು ಹೇಳುವದುಂಟು. ಆ ಕುಸುಮಪುರದ ಪೂರ್ವದಿಕ್ಕಿಗೆ ಗೋಪುರಾಕಾರದ ದಿನ್ನೆಯು ವಿವಿಧವಾದ ವೃಕ್ಷಲತೆಗಳಿಂದ ಆಚ್ಛಾದಿತವಾಗಿ ಅದೊಂದು ಪಚ್ಚಮಣಿಗಳ ಅಗಾಧವಾದ ರಾಶಿಯೇ ಆಗಿ ತೋರುತ್ತಿತ್ತು. ಆ ಮರಕತಗಿರಿಯ ತುದಿಯ ಮೇಲಿರುವ ವಿಸ್ತಾರವಾದ ತಪ್ಪಲಿನ ಮೇಲೆ ಶಾರದಾಪ್ರಸಾದ ಕಾಲೇಜದ ಶೋಭಾಮಯವಾದ ಮಂದಿರಗಳು ತಳಿರು ತೋರಣ ಬಾಳೆಗಂಬಗಳಿಂದ ಅಲಂಕೃತವಾದ ಹೆದ್ದೇರಿನ ತುದಿಗಿರುವ ಪ್ರೇಕ್ಷಣೀಯವಾದ ಕಳಸಗಳಂತೆ ಮೆರೆಯುತ್ತಿದ್ದವು. ಕಾಲೇಜದ ಮಂದಿರ ಗಳಿಂದ ದಿನ್ನೆಯನ್ನಿಳಿದು ಕೆಳಗೆ ಬರಬೇಕಾಗಿ ಮಲಸೂತ್ರದಾಕಾರವುಳ್ಳ ವಿಸ್ತಾರವಾದ ಬೀದಿಯಿದ್ದು, ಆ ಬೀದಿಗೆ ಕೆಂಪುಗರಸಿನ ನೆಲಗಟ್ಟು ಮಾಡಿರುವ ದರಿಂದ ಆ ಪ್ರದೇಶಕ್ಕೆ ಅದೊಂದು ವಿಲಕ್ಷಣವಾದ ಅಲಂಕಾರವೇ ಆಗಿ ತೋರುತ್ತಿತ್ತು. ಕಾಲೇಜದ ಉನ್ನತವಾದ ಮಂದಿರಗಳಲ್ಲಿ ನಿಂತು ನೋಡಿದರೆ ಅನೇಕ ಯೋಜನಗಳವರೆಗೆ ಹಬ್ಬಿಕೊಂಡಿರುವ ಭೂಶೋಭೆಯು ಜಗ್ಗನೆ ಹೊಳೆದು ತೋರಿ ಪ್ರೇಕ್ಷಕರ ಚಿತ್ತಗಳನ್ನು ಬಲವತ್ತರವಾಗಿ ಆಕರ್ಷಿಸಿ ಕೊಳ್ಳುತ್ತಿತ್ತು. ಎತ್ತ ನೋಡಿದತ್ತ ನೆಲ್ಲು ಹುಲ್ಲುಗಳ ಗದ್ದೆಗಳೂ ಹೂದೋಟ ಗಳೂ ಹಣ್ಣುಗಿಡಗಳ ತೋಪುಗಳೂ ಅವಿಚ್ಛಿನ್ನವಾಗಿ ಕಂಗೊಳಿಸುವವು. ಭೂವನಿತೆಯು ಉಟ್ಟಿರುವ ಮರಕತಮಯವಾದ ಮಹಾವಸ್ತ್ರದ ಮೇಲೆ ಚಿತ್ರವಿಚಿತ್ರವಾಗಿ ತೆಗೆದಿರುವ ಕಶೀದೆಗಳಂತೆ ಅಲ್ಲಲ್ಲಿ ಮೆರೆಯುವ ಹಳ್ಳಿಪಟ್ಟ

ಗಳೂ ಪುರಪತ್ತನಗಳೂ ಬಹು ಚಮತ್ಕಾರವಾಗಿ ತೋರುತ್ತಿದ್ದವು. ಧರ್ಮದ ಮಾರ್ಗವು ಪ್ರಶಸ್ತವಾಗಿಯೂ ನಿಷ್ಕಂಟಕವಾಗಿಯೂ ಸಮವಾಗಿಯೂ ಇರುವದಾಗಿ ಭಕ್ತಜನರಿಗೆ ತೋರಿಸಬೇಕೆಂದು ಗಂಗಾದೇವಿಯು ತಾನು ಪೂರ್ವಗಾಮಿನಿಯಾಗಿ ನಡೆದಿರುವ ಶೋಭೆಯಾದರೂ ಬಹು ಪ್ರೇಕ್ಷಣೀಯವಾಗಿತ್ತು. ಕಾಲೇಜದ ಉನ್ನತವಾದ ಪ್ರದೇಶದಲ್ಲಿರುವ ಹವೆಯು ನಿರ್ಮಲವಾಗಿಯೂ ಆರೋಗ್ಯಕರವಾಗಿಯೂ ಮಕರಂದಮಯವಾಗಿಯೂ ಇರುವದರಿಂದ ಅಲ್ಲಿಯ ವಿದ್ಯಾರ್ಥಿಗಳಿಗೆ ವಿದ್ಯಾಲಾಭದಿಂದ ಮನಸ್ತುಷ್ಟಿಯಾಗುವಂತೆಯೇ ದೇಹಪುಷ್ಟಿಯು ಕೂಡಾ ಆಗುತ್ತಿತ್ತು.

ಬ್ರಿಟಿಶ್ ಸಾಮ್ರಾಜ್ಯವು ನಮ್ಮಲ್ಲಿ ನೆಲೆಗೊಂಡಾಗಿನಿಂದ ಪಾಶ್ಚಾತ್ಯಪದ್ಧತಿಯ ವಿದ್ಯಾಭಿರುಚಿಯು ನಮ್ಮಲ್ಲಿ ಹಬ್ಬಿ ಅಲ್ಲಲ್ಲಿ ಹಾಯಸ್ಕೂಲುಗಳೂ ಕಾಲೇಜಗಳೂ ಸ್ಥಾಪಿತವಾದವು. ಸಹಸ್ರಾವಧಿ ಜನ ತರುಣರು ವಿಶ್ವವಿದ್ಯಾಲಯದ ಪದವೀಧರರಾದರು. ಯುರೋಪಿಯನ್ ಗುರುಗಳಿಗೆ ಬುದ್ಧಿಗಲಿಸುವಂಥ ಪಂಡಿತರೂ, ಮೆಕಾಲೇನಂಥ ದುರಭಿಮಾನ ದೃಪ್ತನ ಹೊಟ್ಟೆಯಲ್ಲಿ ಬೆಂಕಿಬೀಳುವಂತೆ ವಾಗ್ಚಾತುರ್ಯದಿಂದಲೂ ಪ್ರಮಾಣಶಾಸ್ತ್ರಕ್ಕನುಸರಿಸಿಯೂ ಪ್ರೌಢರಾದ ಬ್ಯಾರಿಷ್ಟರರು ನ್ಯಾಯಸಭೆಗಳಲ್ಲಿ ವಾದವಿವಾದಗಳನ್ನು ನಡಿಸಿದರು. ನ್ಯಾಯಾಧೀಶ, ಕೌನ್‌ಸಿಲರ, ಕಮಿಶನರ, ಕಲೆಕ್ಟರ ಮುಂತಾದ ಅಧಿಕಾರಗಳನ್ನು ನಮ್ಮವರು ಒಳ್ಳೇ ಚಾತುರ್ಯದಿಂದ ನಡಿಸಿದರು. ಕೌನ್‌ಸಿಲಿನಲ್ಲಿ ಹೊಕ್ಕರೆ ನಾವೇ ಪ್ರಬಲರು. ಯುನಿವ್ಹರ್ಸಿಟಿಗಳಲ್ಲಿ ಹೊಕ್ಕರೆ ನಾವೇ ಸೀನಿಯರ್ ರ‍್ಯಾಂಗ್ಲರರು. ಹೀಗೆ ವಿದ್ಯಾಪ್ರಸಾರಣವು ಪುರುಷರಲ್ಲಿ ಹಬ್ಬುತ್ತಲಿರಲು ನಮ್ಮ ಅರ್ಧಾಂಗಿಯರೂ ಅಕ್ಕತಂಗೆಂದಿರೂ ವಿದ್ಯೆಯಲ್ಲಿ ಹಿಂದುಳಿಯಲಾಗದೆಂದು ನೆನಿಸಿ ನಾವು ಸ್ತ್ರೀಶಿಕ್ಷಣವನ್ನು ಕೂಡ ಕೈಕೊಂಡೆವು. ಹೆಣ್ಣುಮಕ್ಕಳಿಗಾಗಿ ತಕ್ಕಮಟ್ಟಿಗೆ ಅಲ್ಲಲ್ಲಿ ಪ್ರಾಥಮಿಕ ಶಾಲೆಗಳಾದವು. ಆದರೆ ಉಚ್ಚಪ್ರತಿಯ ಶಿಕ್ಷಣದ ಸ್ವತಂತ್ರವಾದ ಸ್ತ್ರೀಶಾಲೆಗಳ ಸಂಖ್ಯೆಯು ಕಡಿಮೆ; ಕಾಲೇಜಗಳಂತೂ ಇಲ್ಲವೇ ಇಲ್ಲ. ಅಲ್ಪವಯಸ್ಸಿನಲ್ಲಿ ಹೆಣ್ಣು ಗಂಡುಮಕ್ಕಳು ಒತ್ತಟ್ಟಿಗೆ ಕಲೆತು ಶಿಕ್ಷಣವನ್ನು ಹೊಂದಬಹುದು; ಆದರೆ ತರುಣ ತರುಣಿಯರು ಒಂದೇ ಸಂಸ್ಥೆಯಲ್ಲಿರುವದು ವಿಹಿತವೋ ಅಲ್ಲವೋ ಎಂಬ ಮಾತಿನ ಬಗ್ಗೆ ಮತಭೇದವು. ಆದರೆ ಸ್ತ್ರೀಪುರುಷರ ಮಿಶ್ರಶಾಲೆಗಳು ಪ್ರಶಸ್ತ

ವಾದದ್ದೆಂಬ ಅಭಿಪ್ರಾಯವನ್ನು ತಳೆದ ಸುಧಾರಕರು ತೀರ ಕಡಿಮೆ. ಸ್ತ್ರೀಯರಿಗೆ ಸ್ವತಂತ್ರವಾದ ಕಾಲೇಜಗಳಿರಬೇಕೆಂಬ ಜನರೇ ಬಹಳ. ಹೀಗಿರಲು ಹೆಣ್ಣುಮಕ್ಕಳಿಗಾಗಿ ಕಾಲೇಜಗಳನ್ನು ಸ್ಥಾಪಿಸುವ ಸುಬುದ್ಧಿಯು ಇನ್ನೂ ನಮ್ಮ ಪುರಸ್ಕರ್ತರಲ್ಲಿ ಉಂಟಾಗಿಲ್ಲ. ಶಿಕ್ಷಣಾಭಿರುಚಿಯುಳ್ಳ ನವಯೌವನೆಯರು ಅನಿರ್ವಾಹಕ್ಕಾಗಿ ಗಂಡುಮಕ್ಕಳ ಕಾಲೇಜಗಳಿಗೆ ಹೋಗುತ್ತಿರುವರು.

ಗಂಡುಮಕ್ಕಳ ಕಾಲೇಜಗಳಲ್ಲಿ ಅನೇಕವಾದ ವಿದ್ಯಾಕಲೆಗಳ ಶಿಕ್ಷಣವು ಯಥೇಷ್ಟವಾಗಿ ದೊರಕುತ್ತಿದ್ದರೂ ಅಲ್ಲಿ ಧಾರ್ಮಿಕ ಹಾಗೂ ನೈತಿಕ ಶಿಕ್ಷಣಗಳ ಅಭಾವವೇ ಆಗಿರುವದರಿಂದ ಅನೇಕ ಜನ ತರುಣರು ಅನಾಚಾರಿಗಳಾಗುತ್ತಿರುವದನ್ನು ಕಂಡು, ಅತ್ಯಂತವಾಗಿ ಉದಾರರಾಗಿರುವ ರಾಜಾ ದೀನದಯಾಲರೆಂಬ ಧನವಂತರಾದ ಶ್ರೀಮಂತರು ಪರ್ವತಪ್ರಾಯವಾದ ಹಣ ವೆಚ್ಚಮಾಡಿ ಶಾರದಾಪ್ರಸಾದವೆಂಬ ಕಾಲೇಜವನ್ನು ಕುಸುಮಪುರದ ಸಮೀಪದಲ್ಲಿ ಸ್ಥಾಪಿಸಿದರು. ರಾಮಕಿಶೋರ ಆಚಾರ್ಯ ಚೌಧರಿ ಎಮ್. ಏ., ಎಲ್‌ಎಲ್. ಡೀ. ಎಂಬ ಅನೇಕ ಶಾಸ್ತ್ರಪಾರಂಗತರಾದ ಮಹಾಪಂಡಿತರ ಸೌಜನ್ಯ ಸದಾಚರಣಗಳನ್ನೂ ಅವರಲ್ಲಿರುವ ವಿದ್ಯಾಪ್ರದಾನ ಮಾಡುವ ಉತ್ಕಟವಾದ ಅಭಿಲಾಷೆಯನ್ನೂ ಕಂಡು ರಾಜಾ ದೀನದಯಾಲರವರು ಅವರನ್ನು ಬಹು ಸನ್ಮಾನದೊಂದಿಗೆ ಕರೆತಂದು ತಮ್ಮ ಕಾಲೇಜದ ಮುಖ್ಯ ನಿಯಾಮಕರನ್ನಾಗಿ ಮಾಡಿದರು. ಉಳಿದ ಶಿಕ್ಷಕವರ್ಗವಾದರೂ ಸಾಮಾನ್ಯವಾದದ್ದಲ್ಲ. ಈ ಅಲಭ್ಯಲಾಭಕ್ಕಾಗಿ ಶಾರದಾಪ್ರಸಾದ ಕಾಲೇಜದಲ್ಲಿ ಕಲಿಯುವದಕ್ಕಾಗಿ ಅನೇಕ ಪ್ರಾಂತಗಳಿಂದ ಬುದ್ಧಿವಂತರಾದ ವಿದ್ಯಾರ್ಥಿಗಳು ಬರುತ್ತಲಿದ್ದರು.

ಡಾಕ್ಟರ ಚೌಧರಿಯವರ ಧರ್ಮಪತ್ನಿಯಾದ ಜಾನಕೀದೇವಿಯರಾದರೂ ಕಲಕತ್ತಾ ವಿಶ್ವವಿದ್ಯಾಲಯದ ಪದವೀಧರೆಯರಾದ ವಿದುಷಿಯರು. ಪ್ರಚಲಿತವಾದ ಸ್ತ್ರೀಶಿಕ್ಷಣದ ಪದ್ಧತಿಯಲ್ಲಿರುವ ದೋಷಗಳನ್ನು ತೆಗೆದು ಭಾರತಭೂಮಿಗೆ ಭೂಷಣರಾಗತಕ್ಕ ಮಹಿಳೆಯರಿಗೆ ಉತ್ಕೃಷ್ಟತಮ ಶಿಕ್ಷಣವು ದೊರಕುವದಲ್ಲದೆ ಸ್ತ್ರೀಧರ್ಮ ನೀತಿಗಳು ಕೂಡಾ ಅವರಿಗೆ ಸಂಪೂರ್ಣವಾಗಿ ಪ್ರಾಪ್ತವಾಗಬೇಕೆಂಬ ಪ್ರಯತ್ನದಲ್ಲಿ ಜಾನಕೀದೇವಿಯರಿದ್ದರು. ಶಾಂಟಾ

ಪ್ರಸಾದ ಕಾಲೇಜದಲ್ಲಿ ಕಲಿಯಲಿಕ್ಕೆ ಬಂದ ಹೆಣ್ಣುಮಕ್ಕಳ ಶಿಕ್ಷಣಕ್ರಮದ ಮೇಲ್ವಿಚಾರಣೆಯನ್ನು ಆ ಸಾಧ್ವಿಯರು ಮನಃಪೂರ್ವಕವಾಗಿ ಅಂಗೀಕರಿಸಿದ್ದಲ್ಲದೆ, ಆ ವಿದ್ಯಾರ್ಥಿನಿಯರ ವ್ಯಾಯಾಮ ಮನೋರಂಜನ ಸ್ನಾನ ಭೋಜನಾದಿಗಳಲ್ಲಿಯಾದರೂ ಅವರು ದಕ್ಷತೆಯಿಂದ ಲಕ್ಷವನ್ನಿಟ್ಟಿದ್ದರು. ಗೃಹಿಣೀಜನೋಚಿತವಾದ ಕರ್ತವ್ಯಜಾಗ್ರತಿಯು ಅಲ್ಲಿಯ ವಿದ್ಯಾರ್ಥಿನಿಯರಲ್ಲಿ ಅಂಗಭೂತವಾಗಿರಬೇಕೆಂದು ನೆನಿಸಿ ಪ್ರತಿ ರವಿವಾರ ಇಬ್ಬರು ವಿದ್ಯಾರ್ಥಿನಿಯರನ್ನು ಜಾನಕೀದೇವಿಯರು ತಮ್ಮ ಮನೆಗೆ ಕರಿಸಿಕೊಂಡು ತಾವು ಮಾಡುತ್ತಿರುವ ಮನೆಕೆಲಸಗಳ ವ್ಯವಸ್ಥೆಯನ್ನೂ ಅತಿಥಿಗಳ ಆದರಾತಿಥ್ಯವನ್ನೂ, ಪತಿಶುಶ್ರೂಷೆಯ ಕ್ರಮವನ್ನೂ ನಿತ್ಯನಿಯಮ ದೇವತಾರಾಧನಗಳನ್ನೂ ಅವರಿಗೆ ತೋರಿಸಿಕೊಡುತ್ತಿದ್ದರು.

ಶಾರದಾ ಕಾಲೇಜದಲ್ಲಿ ಇಪ್ಪತ್ತು ಇಪ್ಪತ್ತೈದು ಜನ ಹೆಣ್ಣುಮಕ್ಕಳಿದ್ದರು. ಅವರಲ್ಲಿ ರಮಾಸುಂದರಿಯೂ ಓರ್ವಳಾಗಿದ್ದಳು. ರಮಾಸುಂದರಿಯು ದಕ್ಷಿಣ ದೇಶದಲ್ಲಿರುವ ಕನಕಗಿರಿಯೆಂಬ ಊರಿನ ಜಾಗೀರದಾರನ ಮಗಳು. ಅವಳ ತಂದೆಯು ಸುಸಂಸ್ಕೃತವಾದ ಆಚಾರ ವಿಚಾರಗಳುಳ್ಳವನೂ ವಿದ್ಯಾಪಕ್ಷಪಾತಿಯೂ ದೇಶಸಂಚಾರ ಮಾಡಿದವನೂ ಆಗಿರುವದರಿಂದ ಅವನು ರಮಾಸುಂದರಿಗೆ ಉಚ್ಚಪ್ರತಿಯ ಶಿಕ್ಷಣವನ್ನು ಕೊಡಿಸುತ್ತಿರುವದು ಆಶ್ಚರ್ಯವಲ್ಲ. ಉತ್ತರ ದೇಶದಲ್ಲಿ ಸಂಚಾರ ಮಾಡುತ್ತಿರುವಾಗ ಅವನು ಶಾರದಾ ಕಾಲೇಜದ ಖ್ಯಾತಿಯನ್ನು ಕೇಳಿ ಅದನ್ನು ನೋಡಹೋಗಿ, ಅಲ್ಲಿ ರಾಮಕಿಶೋರ ಜಾನಕೀದೇವಿಯರ ಪರಿಚಯವನ್ನು ಮಾಡಿಕೊಂಡು, ತನ್ನ ಪ್ರೀತಿಯ ಮಗಳಾದ ರಮಾಸುಂದರಿಯನ್ನು ಜಾನಕೀದೇವಿಯರ ಉಡಿಯಲ್ಲಿ ಹಾಕಿದಂತೆ ಮಾಡಿ ಆವಳನ್ನು ಶಾರದಾ ಕಾಲೇಜದಲ್ಲಿ ಕಲಿಯಲಿಕ್ಕೆ ಇಟ್ಟಿದ್ದನು.

ರಮಾಸುಂದರಿಯು ನಿರುಪಮವಾದ ರೂಪವತಿಯೂ, ವಿನಯಶೀಲೆಯೂ, ಪಾಪಭೀರುವೂ, ಬುದ್ಧಿಮತಿಯೂ ಆಗಿರುವದರಿಂದ ಆವಳು ಜಾನಕೀದೇವಿಯರ ಪ್ರೀತಿಪಾತ್ರಳಾಗಿದ್ದಳು. ಇಂದುಮತೀ ಬಾನರ್ಜೀ, ಚಂದ್ರಾವಲೀ ತ್ರಿವೇದಿ ಹಾಗೂ ರಮಾಸುಂದರಿಯರು ಎಫ್. ಎ. ತರಗತಿಯಲ್ಲಿ ಕಲಿಯುತ್ತಿರುವದರಿಂದ ಅವರೆಲ್ಲರೂ ಒತ್ತಟ್ಟಿಗೆ ಒಂದೇ ಕೋಣೆಯಲ್ಲಿ

ಇದ್ದು ಕೊಂಡು ಅಭ್ಯಾಸ ಮಾಡುತ್ತಿದ್ದರು. ಮೂವರೂ ತೀಕ್ಷ್ಣವಾದ ಬುದ್ಧಿಯುಳ್ಳವರೂ ನಿರ್ಮಲಾಂತಃಕರಣದವರೂ ವಿಶುದ್ಧವಾದ ಆಚರಣೆ ವುಳ್ಳವರೂ ಆಗಿದ್ದರು. ಇಂದುಮತಿಯ ವಿನೋದದ ನುಡಿಗಳೂ, ಚಂದ್ರಾವಲಿಯ ತಿದ್ದಿತೀಡಿದ ಉಡಿಗೆತೊಡಿಗೆಗಳೂ ರಮಾಸುಂದರಿಯ ಸ್ವಚ್ಛತೆ ಸುವ್ಯವಸ್ಥೆಗಳೂ ಆ ಮೂವರಲ್ಲಿ ಸರಿಯಾಗಿ ಕಲೆತು ಹೋಗಿ ಅವರು ನಾರೀ ಕುಲಕ್ಕೆ ಅಲಂಕಾರವಾಗಿ ಮೆರೆಯುತ್ತಿದ್ದರು.

ಪಾಠಶಾಲೆಯಲ್ಲಿ ನಡೆವ ವಿಷಯದ ಊಹಾಪೋಹವನ್ನು ಗಂಡು ಮಕ್ಕಳು ಮಾಡುತ್ತಿರುವದನ್ನೂ, ಅವರು ತೆಗೆವ ಕುಶಲವಾದ ಶಂಕೆಗಳಿಗೆ ಗುರುಗಳು ಹೇಳುತ್ತಿರುವ ಸಮರ್ಪಕವಾದ ಸಮಾಧಾನಗಳನ್ನೂ ಆ ಚತುರೆಯರು ಮನಸ್ಸುಕೊಟ್ಟು ಕೇಳುತ್ತಿದ್ದರು. ಆ ಮೂವರಿಗೂ ಭಾಷಾವಿಷಯಗಳಲ್ಲಿ ವಿಶೇಷವಾದ ಅಭಿರುಚಿಯಾಗಿರುವದರಿಂದ ಬಿ. ಎ., ಎಂ. ಎ. ವರ್ಗಗಳಲ್ಲಿ ಇಂಗ್ಲಿಶ್ ಸಂಸ್ಕೃತ ವಿಷಯಗಳು ನಡೆದಿರುವಾಗ ಒಮ್ಮೊಮ್ಮೆ ಹೋಗಿ ಅವರು ಕೇಳುತ್ತ ಕೂಡುವರು. ಪುರುಷ ವಿದ್ಯಾರ್ಥಿಗಳ ಪರಿಚಯವನ್ನು ಅವರು ಮಾಡಿಕೊಳ್ಳುತ್ತಿದ್ದಿಲ್ಲವಾದರೂ ಆ ಕಾಲೇಜದಲ್ಲಿ ಒಳ್ಳೇ ಬುದ್ಧಿಶಾಲಿಗಳಾದ ವಿದ್ಯಾರ್ಥಿಗಳಾರೆಂಬದು ಅವರಿಗೆ ಗೊತ್ತಾಗಿತ್ತು.

ವಿಜಯಪುರದ ಧ್ರುವರಾಯನೆಂಬ ಅದ್ವಿತೀಯನಾದ ಬುದ್ಧಿಶಾಲಿಯು ಬೀ. ಎ. ತರಗತಿಯಲ್ಲಿ ಉತ್ತಮ ಪರೀಕ್ಷೆಯನ್ನು ಕೊಟ್ಟಿದ್ದನಾದ್ದರಿಂದ ಆ ತರುಣನನ್ನು ಡಾಕ್ಟರ ಚೌಧರಿಯವರು ತಮ್ಮ ಕಾಲೇಜದ ಫೆಲೋ (ವಿದ್ಯಾರ್ಥಿಯಾಗಿದ್ದರೂ ಶಿಕ್ಷಕರ ಕೆಲಸವನ್ನು ಮಾಡುವವ)ನನ್ನಾಗಿ ಮಾಡಿ ಎಂ. ಎ. ತರಗತಿಯಲ್ಲಿ ಅಭ್ಯಾಸ ಮಾಡಲು ಆಸ್ಥೆಯಿಂದ ಇಟ್ಟುಕೊಂಡರು. ಧ್ರುವರಾಯನು ಸಂಸ್ಕೃತದಲ್ಲಿ ಅಸದೃಶನೂ ಇಂಗ್ಲಿಶದಲ್ಲಿಯೂ ಅತಿ ಪ್ರವೀಣನೂ ಆಗಿರುವದರಿಂದ ಎಫ್. ಎ. ತರಗತಿಯವರಿಗೆ ಆ ಎರಡು ವಿಷಯಗಳನ್ನು ಕಲಿಸಲು ಅವನನ್ನು ಆಯಾ ವಿಷಯಗಳ ಪಂಡಿತರ ಸಹಾಯಕಾರಿಯಾಗಿ ನಿಯಮಿಸಿದ್ದರು.

ಒಂದು ದಿವ ಡಾಕ್ಟರ ರಾಮಕಿಶೋರ ಆಚಾರ್ಯರವರು ಮೇಜಿನ ಮೇಲಿರುವ ಲೇಖಗಳಲ್ಲಿ ಒಂದನ್ನೆತ್ತಿಕೊಂಡು ನೆರೆದಿರುವ ವಿದ್ಯಾರ್ಥಿ ವಿದ್ಯಾರ್ಥಿನಿಯರನ್ನು ಕುರಿತು "ಇದು ನಮ್ಮ ಧ್ರುವರಾಯನು ಬರೆದಿರುವ 'ಶೇಕ್ಸ

ಪೀಯರ್ ಕಾಲಿದಾಸರ ಕವಿತಾಚಾತುರ್ಯದ ತುಲನೆ' ಎಂಬ ಸರಸವಾದ ಲೇಖವು. ಇದರಲ್ಲಿಯ ಭಾಷಾಸರಣಿಯೂ, ವಿಷಯನಿರೂಪಣಶಕ್ತಿಯೂ, ಮಾರ್ಮಿಕವಾದ ಪರೀಕ್ಷಣವೂ ಪಂಡಿತರಿಂದ ಕೂಡ ಅನುಕರಣೀಯ ವಾಗಿವೆ. ನೀವೆಲ್ಲರೂ ಈ ಲೇಖವನ್ನು ಮತ್ಸರವಿಲ್ಲದೆ ಓದಿಕೊಳ್ಳಬೇಕೆಂದು ನಾವು ಸೂಚಿಸುತ್ತೇವೆ. ಧ್ರುವರಾಯ, ನಿನ್ನನ್ನು ನಾವು ಮನಃಪೂರ್ವಕ ವಾಗಿ ಅಭಿನಂದಿಸುತ್ತೇವೆ. ಈ ಸುವರ್ಣಪದಕವನ್ನು ರಾಜಾ ದೀನದಯಾಲ ರವರು ಪರಮ ಸಂತುಷ್ಟರಾಗಿ ನಿನಗೆ ಕಾಣಿಯಾಗಿ ಕೊಟ್ಟಿರುವರು." ಎಂದು ಹೇಳಿ ಪದಕವನ್ನು ಧ್ರುವರಾಯನ ಅಂಗಿಗೆ ಕಟ್ಟಿದರು.

ಧ್ರುವರಾಯನು ಬರೆದ ಸ್ತುತ್ಯವಾದ ಲೇಖವನ್ನೋದಬೇಕೆಂಬ ಕುತೂ ಹಲವುಳ್ಳವಳಾಗಿ ರಮಾಸುಂದರಿಯು ಲಗುಬಗೆಯಿಂದ ಒಂದು ಪತ್ರವನ್ನು ಬರೆದು ಕಾಲೀಜದ ಜವಾನನ ಕೈಯಲ್ಲಿ ಕೊಟ್ಟು, ಧ್ರುವರಾಯರು ತಮ್ಮ ಲೇಖನವನ್ನು ಕೊಟ್ಟರೆ ತಂದುಕೊಡೆಂದು ಹೇಳಿದಳು. ಧ್ರುವರಾಯನು ಸಾಯಂಕಾಲದಲ್ಲಿ ತಿರುಗಾಡಿ ವಸತಿಗೃಹಕ್ಕೆ ಬರುವಷ್ಟರಲ್ಲಿ ಜವಾನನು ರಮಾಸುಂದರಿಯ ಪತ್ರವನ್ನು ತಂದುಕೊಟ್ಟನು. ಮುಕ್ತಾವಲಿಗಳಂತೆ ಮನೋಹರವಾಗಿರುವ ಸ್ತ್ರೀಹಸ್ತಾಕ್ಷರದಿಂದ ಬರೆದ ಮೇಲ್ವಿಳಾಸವನ್ನು ನೋಡಿ ಚಕಿತನಾಗಿ ಅವನು ಔತ್ಸುಕ್ಯದಿಂದ ಪತ್ರವನ್ನೊಡೆದು ಓದಿದನು. ಓದೋದುವಾಗ ಅವನ ಹೃದಯದಲ್ಲಿ ಅಭಿಮಾನ ಧನ್ಯತೆ ಸಂತೋಷ ಮುಂತಾದ ಮನೋವಿಕಾರಗಳು ಉಕ್ಕೇರಿಬಂದವು. ರಮಾಸುಂದರಿಯು ತನ್ನ ಲೇಖದ ಸ್ತುತಿಮಾಡಿರುವದು ಅವನಿಗೆ ರಾಜಾ ದೀನದಯಾಲರ ಸುವರ್ಣ ಪದಕಕ್ಕಿಂತಲೂ ಹೆಚ್ಚಿನ ಬೆಲೆಯುಳ್ಳದ್ದಾಗಿ ತೋರಿತು. "ರಮಾಸುಂದರಿ ಯಂತೆ ಆಸ್ಥೆಯಿಂದ ವಿದ್ಯಾಸಂಪಾದನ ಮಾಡಿಕೊಳ್ಳಲಿಚ್ಛಿಸುವಂಥ ಸ್ತ್ರೀಯರು ನಮ್ಮ ಸಮಾಜದಲ್ಲಿ ಹತ್ತೇ ಜನರು ಹುಟ್ಟಿದರೂ ನಮ್ಮ ಸಮಾಜವು ಉಚ್ಛ್ರಿತವಾಯಿತೆಂದೂ ನಮ್ಮ ಜಾತಿಕಾರ್ಯದವರು ಕೃತಾರ್ಥರಾದರೆಂದೂ ನಾನು ನಂಬುತ್ತೇನೆ. ನನ್ನ ಲೇಖವನ್ನು ಅನೇಕ ಜನರು ಬೇಡಿದ್ದಾರೆ. ಆದರೆ ನಾನದನ್ನು ಈ ಜಿಜ್ಞಾಸುವಾದ ವಧುವಿಗೆ ಮೊದಲು ಕೊಡುವೆನು." ಎಂದು ತನ್ನೊಳಗೆಯೇ ಚಿಂತಿಸಿ ಧ್ರುವರಾಯನು ಆ ಲೇಖವನ್ನು ತೆಗೆದು ಜವಾನನ ಕೈಯಲ್ಲಿ ಕೊಟ್ಟು ರಮಾಸುಂದರಿಗೆ

ಕೊಡಹೇಳಿದನು.

ಮಧ್ಯರಾತ್ರಿಯಾಗುತ್ತ ಬಂದಿದ್ದರೂ ಕಾಲೇಜದ ಸ್ತ್ರೀಶಾಖೆಯ ವಸತಿಗೃಹಗಳಲ್ಲಿಯ ಒಂದು ಕೋಣೆಯಲ್ಲಿ ಇನ್ನೂ ದೀಪವು ಜಗಜಗನೆ ಪ್ರಕಾಶಿಸುತ್ತಿತ್ತು. ರಮಾಸುಂದರಿಯು ಆರಾಮಕುರ್ಚಿಯಲ್ಲಿ ಕುಳಿತುಕೊಂಡು ಬೆನ್ನ ಹಿಂದೆಯೇ ಮೇಜಿನ ಮೇಲಿಟ್ಟಿರುವ ಬೆಳ್ಳಿಯ ದೀಪವೃಕ್ಷದಲ್ಲಿ ಉರಿಯುತ್ತಿರುವ ಮೇಣಬತ್ತಿಯ ಬೆಳಕಿನಲ್ಲಿ ಧ್ರುವರಾಯನ ಲೇಖವನ್ನು ಓದುತ್ತಿದ್ದಳು. "ಏನು ಮಾರ್ಮಿಕತೆಯಿದು! ಈ ತಾರ್ಕಿಕ ಭಾಷಾಸರಣಿಯು ಪ್ರತ್ಯಕ್ಷ ಮೆಕಾಲೇನದೇ. ಸ್ಟೀಲನ ಸದೃಶವಾದ ವಿನೋದಲಹರಿಯಿದು. ಇದು ಹೆನ್ರಿ ಮೋರ್ಲೇನ ಅರ್ಥಪ್ರಕಾಶವು. ಇವುಗಳು ಬೇಕನ್ನನ ವಿಚಾರತರಂಗಗಳು. ಸಾಧು! ಸಾಧು! ಈ ಹೊಸ ಪಂಡಿತರು ಬರೆದಿರುವ ಬೇರೆ ಲೇಖವನ್ನು ಓದಲನುಕೂಲವಾದರೆ ಎಷ್ಟು ಉಪಯೋಗವಾಗಬಹುದು!" ಎಂದು ಅವಳು ಆಗಾಗ್ಗೆ ಉದ್ಗಾರ ತೆಗೆಯುತ್ತಿದ್ದಳು. ವಾಚನದಲ್ಲಿ ನಿಮಗ್ನಳಾದ ಆ ತರುಣಿಯು ಹೊದ್ದುಕೊಂಡಿರುವ ಶಾಲು ಅಸ್ತವ್ಯಸ್ತವಾಗಿ ಜರಿದು ಬಿದ್ದಿತ್ತು. ಬಾಯಿಯಲ್ಲಿ ಹಿಡಿದಿರುವ ಪೆನ್ಸೀಲು ಅಲ್ಲಿಯೇ ಉಳಿದಿತ್ತು. 'ನನ್ನನ್ನು ಬಳಿಯಲ್ಲಿ ಇರಿಸಿಕೊಂಡಿದ್ದೇಕೆ? ಒಮ್ಮೆಯಾದರೂ ನನ್ನ ಮುಖವನ್ನು ನೋಡಬಾರದೆ?' ಎಂದು ಗಡಿಯಾರವು ಸಂತತವಾಗಿ ಕಿಟಕಿಟಿ ಹಚ್ಚಿದ್ದರೂ ರಮಾಸುಂದರಿಯು ಅದನ್ನು ಕಣ್ಣೆತ್ತಿ ನೋಡಿದ್ದಿಲ್ಲ.

ಅಷ್ಟರಲ್ಲಿ ಬಾಗಿಲವನ್ನು ನೂಕಿ ಒಳಗೆ ಯಾರೋ ಬಂದರು. ಆದರದೂ ಅವಳಿಗೆ ಲಕ್ಷ್ಯವಿಲ್ಲ. "ರಮಾಸುಂದರಿ!" ಎಂದು ಬಂದವರು ಎಚ್ಚರಗೊಳಿಸಿದರು.

ರಮಾಸುಂದರಿಯು ಆ ಧ್ವನಿಯಾದ ಕಡೆಗೆ ಮುಖ ತಿರುವಿ ನೋಡಿದ ವೇಳೆ ಆಶ್ಚರ್ಯಚಕಿತಳಾಗಿ ಎದ್ದು ನಿಂತು "ಅಪ್ಪಯ್ಯಾ! ಅಮ್ಮನವರೇಕೆ ಬಂದರು!" ಎಂದು ಉದ್ಗಾರ ತೆಗೆದಳು.

"ರಮಾಸುಂದರಿ, ಏನು ಮಾಡುತ್ತಲಿದ್ದಿ ನೀನು?" ಎಂದು ಜಾನಕೀದೇವಿಯರು ತುಸು ಕ್ರುದ್ಧರಾಗಿ ಕೇಳಿದರು.

"ಏನೂ ಇಲ್ಲ. ತಮ್ಮದೇಕೆ ಬರೋಣ?"

"ಇದಕ್ಕೂ ಹೆಚ್ಚಿನ ಕಾರಣವಿನ್ನೆಂತಿರಬೇಕು? ಸರಿರಾತ್ರಿಯಾಗಿ

ಹೋದರೂ ಮಲಗಿಕೊಳ್ಳುವ ವಿಚಾರವಿಲ್ಲವೆ? ಏನು ಓದುತ್ತಲಿದ್ದಿ ರಮಾ? ಕಾದಂಬರಿಯೇ ? "

" ಇಲ್ಲಾ. ತಮ್ಮ ಅನುಜ್ಞೆಯಿಲ್ಲದೆ ಕಾದಂಬರಿಯನ್ನು ಹೇಗೆ ಓದಲಿ? ಧ್ರುವರಾಯರು ಬರೆದಿರುವ ಲೇಖವನ್ನು ಪಂಡಿತವರ್ಯರು (ಡಾಕ್ಟರ ಚೌಧರಿ) ಬಹುಪರಿಯಾಗಿ ಕೊಂಡಾಡಿದ್ದರಿಂದ ಅದನ್ನು ತರಿಸಿ ಕೊಂಡು ನಾನು ಓದುತ್ತಲಿದ್ದೆನು."

" ಇದಕ್ಕೆ ನಮ್ಮ ಅಪ್ಪಣೆ ಬೇಡವೇನು ? " ಎಂದು ಜಾನಕೀದೇವಿ ಯರು ಮಂದಸ್ಮಿತೆಯರಾಗಿ ಕೇಳಿದರು.

" ನಿಯಾಮಕರೇ ಈ ಲೇಖದ ಪ್ರಶಂಸೆಯನ್ನು ಮಾಡಿರುವವರಿಂದ ಇದನ್ನು ಓದಲು ಪ್ರತ್ಯವಾಯ ತೋರಲಿಲ್ಲಾದ್ದರಿಂದ ಅಪ್ಪಣೆ ಕೇಳುವದನ್ನು ಬಿಟ್ಟೆನು."

" ಆ ಲೇಖವನ್ನು ಓದಿದ್ದರಲ್ಲಿ ದೋಷವಿಲ್ಲ ರಮಾ. ಆದರೆ ಅದನ್ನು ನೀನು ಸಂಪಾದಿಸಿದ್ದು ಹೇಗೆ ? "

" ಯಾಕೆ ? ಧ್ರುವರಾಯರಿಗೆ ಪತ್ರಬರೆದು ಈ ಲೇಖವನ್ನು ತರಿಸಿ ಕೊಂಡೆನು. "

" ಆಯಿತು. ಪುರುಷರೊಡನೆ ಪತ್ರವ್ಯವಹಾರ ಮಾಡಬೇಕಾದರೆ ನಮ್ಮ ಅಪ್ಪಣೆ ಆವಶ್ಯವಾಗಿ ಬೇಕಾಗಿತ್ತಷ್ಟೆ ? "

ಈ ಮಾತು ಕೇಳಿ ರಮಾಸುಂದರಿಯು ಕಚ್ಚನೆ ನಾಲಿಗೆಯನ್ನು ಕಚ್ಚಿ " ತಪ್ಪಾಯಿತು ಸರಿ ! ಆದರೆ ಅಮ್ಮನವರೆ, ನಾನು ಪತ್ರಬರೆದದ್ದು ಅನುಚಿತವಾಯಿತೇನು ? " ಎಂದು ಅಂಜಂಜುತ್ತ ಕೇಳಿದಳು.

ಈ ಮಾತಿನ ಚರ್ಚೆಯನ್ನು ವಿಶೇಷವಾಗಿ ಮಾಡಿದರೆ ಪುರುಷರ ವಿಷಯವಾಗಿ ನಾರಿಯರಲ್ಲಿ ಹೆಚ್ಚಾದ ಕುತೂಹಲವನ್ನು ಬೆಳಿಸಿದಂತಾಗುವ ದೆಂದು ತಿಳಿದು ನೋಡಿ ಜಾನಕೀದೇವಿಯರು ಆ ವಿಷಯವನ್ನು ಅಲ್ಲಿಯೇ ಮುರಿಯಬೇಕಾಗಿ—

" ಹೋಗಲಿ ಬಿಡು, ಅನುಚಿತವೇನೂ ಆಗಿಲ್ಲ. ಸಂಸ್ಥೆಯ ನಿಯ ಮದ ನೆನಪು ಕೊಟ್ಟೆನು ಹೊರತಾಗಿ ಇದರಲ್ಲಿ ಮತ್ತೇನಿಲ್ಲ. "

ಇನ್ನೊಮ್ಮೆ ಇಂಥ ಅವಿಚಾರದ ಕೆಲಸವನ್ನು ಮಾಡುವದಿಲ್ಲೆಂದು

ರಮಾಸುಂದರಿಯು ತನ್ನ ಧರ್ಮಮಾತೆಗೆ ಅಭಿವಚನವನ್ನಿತ್ತಳು.

"ಆಗಲಿ. ಓದುಬರಹಕ್ಕಾದರೂ ಸಮಯಾಸಮಯದ ವಿಚಾರವಿರ ಬೇಕು. ಮಗುವೆ, ಗಡಿಯಾರವನ್ನು ನೋಡಬಾರದೆ? ಸರಿರಾತ್ರಿ ಮೀರಿ ಹೋಗಿದೆ. ನೋಡು, ಹಾಸಿಗೆಯನ್ನು ಕೂಡ ಬಿಚ್ಚಿಲ್ಲ" ಎಂದು ಜಾನಕೀ ದೇವಿಯರು ರಮಾಸುಂದರಿಯ ಮಂಚದ ಮೇಲಿದ್ದ ಹಾಸಿಗೆಯನ್ನು ಉರುಳಿ ಸಿದರು.

"ಅಯ್ಯೋ ಪಾಪವೆ! ನನ್ನ ಕೈಗಳೇನು ಮುರಿದಿವೆಯೇನು? ತಾವೇಕೆ ಹಾಸಿಗೆಯನ್ನು ಉರುಳಿಸಿದಿರಿ?" ಎಂದು ರಮಾಸುಂದರಿಯು ಖಿನ್ನಳಾಗಿ ನುಡಿದಳು.

"ಮತ್ತೊಂದು ಮಾತಾಡದೆ ಮಲಗಿಬಿಡು ಇನ್ನು. ಇಂದಿನಿಂದ ರಾತ್ರಿಯ ಪತ್ತುಗಂಟೆಯ ತರುವಾಯದಲ್ಲಿ ನಿನ್ನ ಕೋಣೆಯಲ್ಲಿ ದೀಪವು ಉರಿದದ್ದಾದರೆ ನಾನು ನಿನ್ನನ್ನು ಕ್ಷಮಿಸಿದವಳಲ್ಲ!" ಎಂದು ಹೇಳಿ ಜಾನಕೀ ದೇವಿಯರು ಹೊರಟುಹೋದರು. ರಮಾಸುಂದರಿಯಾದರೂ ದೀಪಕ್ಕೆ ಅಪ್ಪಣೆಕೊಟ್ಟು ಮಲಗಿಕೊಂಡಳು.

ಮರುದಿವಸ ರಮಾಸುಂದರಿಯು ನಿನ್ನೆ ರಾತ್ರಿ ನಡೆದ ಸಂಗತಿಯನ್ನೆಲ್ಲ ಇಂದುಮತಿ ಚಂದ್ರಾವಲಿಯರಿಗೆ ತಿಳಿಸಿ ಜಾನಕೀದೇವಿಯರ ಶಿಷ್ಯವಾತ್ಸಲ್ಯ ವನ್ನು ಕೊಂಡಾಡಿದಳು.

"ಸರಿ ಸರಿ, ರಮಾಸುಂದರೀ, ನೀನು ಧ್ರುವರಾಯನಿಗೆ ಬರೆದ ಪತ್ರ ದಲ್ಲಿ ಲೇಖನವನ್ನು ಕಳಿಸಿಕೊಡೆಂದು ಇಷ್ಟೆಯೇ ಬರೆದಿದ್ದೆಯೋ ಮತ್ತೇನಾ ದರೂ ಬರೆದಿದ್ದೆಯೋ?"

"ತಲೆ ನಿನ್ನದು! ಮತ್ತೇನು ಬರೆಯುತ್ತಾರೆ?" ಎಂದು ರಮಾ ಸುಂದರಿಯು ಕ್ರುದ್ಧಳಾಗಿ ಕೇಳಿದಳು.

"ಇಲ್ಲವಾದರೆ ಇಲ್ಲವೆನ್ನು, ಕೋಪವೇಕೆ?" ಎಂದು ಚಂದ್ರಾ ವಲಿಯು ನಕ್ಕು ನುಡಿದಳು.

"ಸುಸ್ವಭಾವದವರಾದ ಸ್ತ್ರೀಪುರುಷರೀರ್ವರನ್ನು ಒತ್ತಟ್ಟಿಗೆ ಇಡ ಬಹುದಂತೆ. ಆದರೆ ಸಮಾನವಯಸ್ಕರಾದ ಮಿಂಡೆಯರೀರ್ವರನ್ನು ಒತ್ತ ಟ್ಟಿಗೆ ಇಡಕೂಡದೆಂದು ಹಿರಿಯರಾಡುವದು ಅನುಭವಸಿದ್ಧವಾದ ಮಾತು"

ಎಂದು ರಮಾಸುಂದರಿಯು ಜಿಗುಪ್ಸೆಯಿಂದ ತನ್ನ ಸಖಿಯರನ್ನು ನೋಡುತ್ತ ನುಡಿದಳು.

" ಅನುಭವಸಿದ್ಧವಾದ ಮಾತುಗಳನ್ನೇ ಹಿರಿಯರು ಹೇಳುತ್ತಿರುವದುಂಟು. ಇಬ್ಬರು ಹೆಂಡಿಯರು ನಿರಂತರವಾಗಿ ಒತ್ತಟ್ಟಿಗೆ ಇರಬಹುದಾದರೆ ಗಂಡಂದಿರಿಗೆ ನಮೋ ನಮೋ ಎಂದು ನಡಕೊಳ್ಳುವ ಹಣೇಬರಹವು ಹೆಣ್ಣುಮಕ್ಕಳ ಪಾಲಿಗೆಲ್ಲಿ ಬರುತ್ತಿತ್ತು ? " ಎಂದು ಇಂದುಮತಿಯು ವಿನೋದಗೈಯುತ್ತ ನುಡಿದಳು.

ಈ ಮಾತಿಗೆ ಚಂದ್ರಾವಲಿಯು ತಾನು ಒಳಿತಾಗಿ ನಕ್ಕರೂ " ಇಂದುಮತೀ, ಅತಿಕ್ರಮಣವಾಯಿತು, ಈ ವಿಷಯವು ಸಾಕಿನ್ನು." ಎಂದು ನಿಷೇಧಿಸಿ ರಮಾಸುಂದರಿಯನ್ನು ಕುರಿತು, "ರಮಾಸುಂದರಿ, ಧ್ರುವರಾಯರ ಲೇಖವನ್ನು ಮರಳಿ ಅವರಿಗೆ ಕಳಿಸಿದಿಯೋ ? " ಎಂದು ಕೇಳಿದಳು.

ರಮಾಸುಂದರಿಗಾದರೂ ಇಂದುಮತಿಯ ಚೇಷ್ಟೆಯ ಸರಣಿಯನ್ನು ನಿಲ್ಲಿಸಬೇಕಾದ್ದರಿಂದ ಅಂದದ್ದು : " ಇನ್ನೂ ಕಳಿಸಿಲ್ಲ ಚಂದ್ರಕ್ಕಾ, ಅದನ್ನು ನಮ್ಮ ಕನ್ನಡದಲ್ಲಿ ಭಾಷಾಂತರಿಸಬೇಕೆಂದು ಇಟ್ಟುಕೊಂಡಿದ್ದೇನೆ. "

ಕೆಲವು ದಿವಸಗಳಾದ ಮೇಲೆ ಒಂದುದಿನ ಸಂಸ್ಕೃತಾಧ್ಯಾಪಕರು ಎಫ್. ಏ. ತರಗತಿಯ ವಿದ್ಯಾರ್ಥಿಗಳ ವರ್ಗಕ್ಕೆ ಕಲಿಸಲು ಬರಲಿಲ್ಲ. ನಿಯಾಮಕರಾದ ಡಾಕ್ಟರ ಚೌಧರಿಯವರು ಧ್ರುವರಾಯನಿಗೆ ಅಂದು ಆ ಕೆಲಸ ಮಾಡೆಂದು ಆಜ್ಞಾಪಿಸಿದರು. ಧ್ರುವರಾಯನು ಬಂದಿರುವದನ್ನು ಕಂಡು ವಿದ್ಯಾರ್ಥಿಗಳು ಹೆದರಿಕೆಯಿಲ್ಲದೆ ತಲೆಗೊಂದೊಂದು ಪ್ರಶ್ನವನ್ನು ಮಾಡಿ ಅವನನ್ನು ಪೀಡಿಸಹೋದರು. ಆದರೆ ಆ ಚಿಕ್ಕ ಪಂಡಿತನು ನಿರಾಯಾಸವಾಗಿ ಅವರೆಲ್ಲರಿಗೆ ಸಮರ್ಪಕವಾದ ಉತ್ತರಗಳನ್ನು ಕೊಟ್ಟು ಮತ್ತೇನಾದರೂ ಪ್ರಶ್ನಗಳಿದ್ದರೆ ಕೇಳಿಕೊಳ್ಳಿರೆಂದು ಮುಂದಿಗೆಯೊಗೆದನು. ಬಳಿಕ ಕ್ಷುದ್ರವಾದ ಪ್ರಶ್ನಗಳೆಲ್ಲ ನಿಂತುಹೋದವು. ಒಂದೆರಡು ವ್ಯಾಕರಣ ಅಲಂಕಾರಗಳ ಮೇಲಿನ ಪ್ರಶ್ನಗಳ ಸಮಾಧಾನವಾದ ಮೇಲೆ ಆ ದಿವಸದ ವಿಷಯವು ನಡೆಯಿತು. **औत्सुक्यमात्रमवसादयति प्रतिष्ठा** ಎಂಬ ಶಾಕುಂತಲದಲ್ಲಿಯ ಶ್ಲೋಕದ ಅರ್ಥವು ನಡೆಯಿತು. ಅನೇಕವಾದ ಪಾಠಾಂತರಗಳ ವಿಚಾರವಾಯಿತು. ಸ್ವಹಸ್ತಧೃತವಾದ ದಂಡವುಳ್ಳ ಆತಪತ್ರಕ್ಕೂ ರಾಜ್ಯಕ್ಕೂ ಇರುವ ಸಾಮ್ಯ

ವನ್ನು ಕುರಿತು ವಿಶದವಾದ ಊಹಾಪೋಹವಾಯಿತು. ನಮ್ಮ ವಿದ್ಯಾರ್ಥಿನೀ ತ್ರಯರಿಗೆ ಸಂಶಯ ನಿವಾರಣವೇ ಬೇಕಾಗಿತ್ತು ಹೊರತಾಗಿ ಸ್ವಪಾಂಡಿತ್ಯದ ಪ್ರದರ್ಶನವು ಅವರಿಗೆ ಬೇಕಾಗಿದ್ದಿಲ್ಲ. ಶ್ಲೋಕಾರ್ಥವು ಮುಗಿದ ಬಳಿಕ ಮತ್ತೆ ಪ್ರಶ್ನೆಗಳ ಸುಗ್ಗಿಯೆದ್ದಿತು. ಆಗ ಚಂದ್ರಾವಲಿಯು ತನ್ನ ಸ್ತ್ರೀ ಸ್ವಭಾವಕ್ಕನುಸರಿಸಿ ಮೆಲ್ಲನೆ ಇಂದುಮತಿಯನ್ನು ಕುರಿತು "ಧ್ರುವರಾಯನು ವಿವಾಹಿತನೋ ಅವಿವಾಹಿತನೋ ? " ಎಂದು ಕೇಳಿದಳು.

" ಇದಕ್ಕಿಷ್ಟೊಂದು ವಿಚಾರವೇಕೆ ? ಕಾಲೇಜದ ವಿದ್ಯಾರ್ಥಿಗಳಲ್ಲಿ ವಿವಾಹಿತರಾದವರ ನಾಮಾವಲಿಯು ಪುಸ್ತಕವು ಒಂದು ಬೇರೆಯಾಗಿಯೂ, ಅವಿವಾಹಿತರ ನಾಮಾವಲಿಯ ಪುಸ್ತಕವು ಬೇರೆಯಾಗಿಯೂ ಸಿದ್ಧವಾಗಿಯೇ ಇವೆ. ಅವುಗಳನ್ನು ಬೇಕಾದವರು ಬೇಕಾದಾಗ ನೋಡಿಕೊಳ್ಳಬಹುದಷ್ಟೆ ? ಧ್ರುವರಾಯನ ಹೆಸರು ಅವಿವಾಹಿತರ ಪುಸ್ತಕದಲ್ಲಿ ಕಂಡುಬರುತ್ತದೆ" ಎಂದು ಇಂದುಮತಿಯು ಹೇಳಿದಳು.

" ಅಭ್ಯಾಸ ನಡೆದಿರುವ ಸಮಯದಲ್ಲಿ ಈ ಕುಚೋದ್ಯವೇಕೆ ಗೆಳತಿ ಯರೆ ? ಅಧ್ಯಾಪಕರು ಹೇಳುವದನ್ನು ಕೇಳಿಕೊಂಡರೆ ಹಿತವಾದೀತು. " ಎಂದು ರಮಾಸುಂದರಿಯು ಬುದ್ಧಿವಾದ ಮಾಡಿದಳು.

ಹೀಗೆ ಆ ಕಲಭಾಷಿಣಿಯರು ನಡಿಸಿರುವ ಕಲಕಲಾಟವನ್ನು ಕೇಳಿ ಧ್ರುವರಾಯನು ಅವರ ಕಡೆಗೆ ನೋಡಿ " ನಿಮ್ಮೊಳಗೆಯೇ ಗುಜುಗುಜು ನಡಿಸಿರುವದೇಕೆ? ನಿಮಗೇನಾದರೂ ಕೇಳುವದಿದ್ದರೆ ಸಂಕೋಚವಿಲ್ಲದೆ ನನ್ನನ್ನೇ ಕೇಳಿದರಾಯಿತು " ಎಂದು ಸುಮುಖವನ್ನು ತಾಳಿ ನುಡಿದರೂ ಕಲಕಲಾಟ ವನ್ನು ಮಾಡಬೇಡಿರೆಂದು ಆತನು ಪರ್ಯಾಯದಿಂದ ಸೂಚಿಸಿದನು. ಆದರೆ ಆ ಲಲನೆಯರು ಧ್ರುವರಾಯನ ವಿವಾಹ ಅವಿವಾಹವನ್ನು ಕುರಿತು ನಡಿಸಿದ ಹರಟೆಗೆ, ಆತನಾಡಿದ ಮಾತು ಕಾಕತಾಲೀಯವಾಗಿ ಸಮರ್ಪಕ ವಾದದ್ದು ಕಂಡು ಆ ಮಾನಿನಿಯರೆಲ್ಲರಿಗೆ ನಗೆ ಬಂದಿತು. ಅತಿ ಮರ್ಯಾದ ಶೀಲೆಯಾದ ರಮಾಸುಂದರಿಯು ಕೂಡ ನಕ್ಕದ್ದನ್ನು ಕಂಡು ಧ್ರುವರಾಯನು ತಾನು ಅಪಹಾಸಕ್ಕೆ ಪಾತ್ರನಾಗಿರುವೆನೇನೆಂದು ಶಂಕಿಸಿ " ಏನು ಸಮಾ ಚಾರವದು ರಮಾಸುಂದರೀಬಾಯೀ?" ಎಂದು ಮಂದಸ್ಮಿತನಾಗಿ ಕೇಳಿದನು. ಅವನ ಮಂದಹಾಸವು ಆ ಸುಂದರಿಯರ ವಿನೋದವನ್ನು ಕೊಂದಿತು. ಧ್ರುವ

ರಾಯನ ಪ್ರಶ್ನೆಗೆ ಏನು ಉತ್ತರವೆಂದು ಇಂದುಮತಿ ಚಂದ್ರಾವಲಿಯರು ಬೆದರಿ ನಿರುತ್ತರರಾಗಿ ಕುಳಿತರು. ರಮಾಸುಂದರಿಯೇ ಅನಿವಾರ್ಯಕಕ್ಕಾಗಿ ಲಜ್ಜೆಯಿಂದ ಆರಕ್ತವಾಗಿರುವ ತನ್ನ ಮುಖವನ್ನು ಬಾಗಿಸಿ "ಏನೂ ಇಲ್ಲ. ನಮಗೆಯೇ ಸ್ಪಷ್ಟವಾಗಿ ತಿಳಿಯುತ್ತಿರುವ ವಿಷಯದ ಮೇಲೆ ವ್ಯರ್ಥವಾಗಿ ಪ್ರಶ್ನೆ ಕೇಳುವದೇಕೆಂದು ನಾವು ಮಾತಾಡುತ್ತಿದ್ದೆವು. ಗಲಾಟೆಮಾಡಿದ್ದಕ್ಕೆ ಕ್ಷಮೆ ಇರಬೇಕು" ಎಂದು ಬಿನ್ನಯಿಸಿದಳು.

ರಮಾಸುಂದರಿಯೂ ಧ್ರುವರಾಯನೂ ಶಾರದಾ ಪ್ರಸಾದ ಕಾಲೇಜ ದಲ್ಲಿರಹತ್ತಿ ಏಳೆಂಟು ತಿಂಗಳು ಆಗಿಹೋಗಿದ್ದರೂ ಅವರವರಲ್ಲಿ ಪರಿಚಯು ವುಂಟಾಗಿದ್ದಿಲ್ಲ. ಮೊನ್ನೆಯೇ ಅವಳು ಅವನಿಗೆ ಪತ್ರ ಬರೆದು ಲೇಖವನ್ನು ತರಿಸಿಕೊಂಡಿದ್ದಳು. ಇಂದು ಅವರವರ ನಡುವೆ ಮೇಲೆ ವಿವರಿಸಿದ ಒಂದೇ ಒಂದಾದ ಪ್ರಶ್ನೋತ್ತರವು ನಡೆಯಿತು. ಚಕಮುಕಿ ಕಲ್ಲಿನ ಒಂದೇ ಹೊಡೆತ ದಿಂದ ಒಮ್ಮೊಮ್ಮೆ ಬೆಂಕಿಯ ಕಿಡಿಯು ಹೊರಡುವದುಂಟು. ಒಂದೇ ಬೆಂಕಿಯ ಕಿಡಿಯಿಂದ ಏನೇನು ಚಮತ್ಕಾರಗಳುಂಟಾಗಬಲ್ಲವೆಂಬುದನ್ನು ಯಾರು ಹೇಳಬಲ್ಲರು? ಕುಚೋದ್ಯ ಮಾಡಿದವರಾದ ಇಂದುಮತಿ ಚಂದ್ರಾ ವಲಿಯರೊತ್ತಟ್ಟಿಗೆ ಉಳಿದರು. ಧ್ರುವರಾಯನ ಪ್ರಶ್ನವು ರಮಾಸುಂದರಿಯು ಮೇಲೆ ಬಿದ್ದಿತು. ಆ ಚಮತ್ಕಾರವಾದ ಪ್ರಶ್ನಕ್ಕೆ ನಿವಾರ್ಯವಿಲ್ಲದೆ ಉತ್ತರ ವನ್ನು ಕೊಡುವಾಗ ರಮಾಸುಂದರಿಯು ಒಳಿತಾಗಿ ನಾಚಿಕೊಂಡಳು. ಆ ನಾಚಿಕೆಯ ಹಿಡಿತಕ್ಕಾಗಿ ಸಖಿಯರ ಮುಖವನ್ನು ನೋಡಲು ಅವಳಿಗೆ ಧೈರ್ಯಸಾಲಲಿಲ್ಲ. ಇತ್ತ ನೋಟಕ್ಕೆ ಹಾದಿ ಬಿಟ್ಟಿಗಿದ್ದು ಆ ನೋಟವು ಫಕ್ಕನೆ ಧ್ರುವರಾಯನ ಸುಂದರವಾದ ಮುಖದ ಕಡೆಗೆ ಧಾವಿಸಿತು. ಹಗಲು ಹಂಜಿನ ಚಮತ್ಕಾರವಾದ ಪ್ರಕಾಶದಲ್ಲಿ ವಸ್ತುಗಳ ಸೌಂದರ್ಯವು ಎದ್ದು ಕಾಣುವಂತೆ ರಮಾಸುಂದರಿಯ ಹೃದಯದಲ್ಲಿ ಉತ್ಪನ್ನವಾದ ಕೆಲವೊಂದು ವಿನೂತನವಾದ ಜ್ಯೋತಿಯ ಮೂಲಕ ಧ್ರುವರಾಯನ ಮುಖದ ಸೌಂದರ್ಯ ಆ ಕ್ಷಣದಲ್ಲಿ ಮನ್ಮಥನ ಸೌಂದರ್ಯವನ್ನು ಲಜ್ಜಿಸುವಂತೆ ಕಂಡಿತು. ಒಂದು ಪಳದ ಎಷ್ಟನೆಯ ಅಂಶವೋ, ಅಷ್ಟು ಅಲ್ಪಕಾಲ. ಮಾತ್ರ ರಮಾಸುಂದರಿಯು ದೃಷ್ಟಿಯು ಸಾಭಿಲಾಷವಾಗಿ ಧ್ರುವರಾಯನ ಮುಖಚಂದ್ರಮದಲ್ಲಿ ನೆಲಸಿ ದ್ದರೂ ಅಲ್ಪಾವಧಿಯಲ್ಲಿ ಅನುರಾಗಯುಕ್ತವಾದವುಗಳೆಂದ ಪರಸ್ಪರರ

ಮೂರ್ತಿಗಳು ಪರಸ್ಪರರ ಹೃದಯಪಟಗಳ ಮೇಲೆ ಬಿಂಬಿತವಾದವು (ಫೋಟೋ ಹೊರಟವು). ತತ್ಕ್ಷಣವೇ ರಮಾಸುಂದರಿಯು ಪ್ರಜ್ಞೆಯನ್ನು ತಾಳಿ ತನ್ನ ದೃಷ್ಟಿಯನ್ನು ಮರಳಿ ಎಳಕೊಂಡು ಇನ್ನು ಮೇಲೆ ಇಂಥ ಪ್ರಮಾದವಾಗಕೂಡದೆಂದು ನಿಶ್ಚಯಿಸಿಕೊಂಡಳು. ಪಾಪ, ಬಿಂಬನಿರ್ವೇಶದ ವಾರ್ತೆಯೇ ಆ ಸಮಯದಲ್ಲಿ ಅವಳಿಗಿರಲಿಲ್ಲ. ತಲೆನೋವಿನ ನೆವಮಾಡಿ ಕೊಂಡು ರಮಾಸುಂದರಿಯು ಅಲ್ಲಿಂದೆದ್ದವಳೇ ಮನೆಗೆ ಬಂದುಬಿಟ್ಟಳು.

ಈ ಸಂಗತಿಗಳೆಲ್ಲ ಮರೆಮಾತಿಗೆ ಬಿದ್ದುಹೋದವು. ಮತ್ತೆ ಆ ಸತಿಯರೆಲ್ಲರೂ ಯಾವ ಪ್ರಕಾರದ ವ್ಯವಧಾನವಿಲ್ಲದೆ ತಮ್ಮ ಅಭ್ಯಾಸಕ್ರಮವನ್ನು ನಡಿಸಿದರು. ಗಾನವಾದನ ಕಲೆಗಳ ಅಭಿವೃದ್ಧಿಯಾಯಿತು. ಸೂಪಶಾಸ್ತ್ರ ಪ್ರಾವೀಣ್ಯದ ಪ್ರಯೋಗಗಳಾದವು. ರಂಗವಲ್ಲಿ ಚಿತ್ರಕಲೆಗಳ ಪ್ರದರ್ಶನಗಳಾದವು. ಹೀಗೆ ವಿಲಾಸದಿಂದಲೂ ಉಲ್ಲಾಸದಿಂದಲೂ ಆಸ್ಥೆಯಿಂದಲೂ ಸ್ತ್ರೀ ಶಿಕ್ಷಣದ ಮಹತ್ಕಾರ್ಯವು ಯಶಸ್ಕರವಾಗಿ ನಡೆಯಿತು. ಹೀಗೆ ಕೆಲವು ದಿವಸಗಳು ಕಳೆದ ಬಳಿಕ ಒಂದು ರವಿವಾರ ದಿನ ರಮಾಸುಂದರಿಯು ಸಹಾಧ್ಯಾಯಿನಿಯರಾದ ಇಂದುಮತಿ ಚಂದ್ರಾವಲಿಯರು ಗೃಹವ್ಯವಸ್ಥೆಯ ಶಿಕ್ಷಣಕ್ಕಾಗಿ ಜಾನಕೀದೇವಿಯರ ಮನೆಯಲ್ಲಿ ಇರಹೋದರು. ರಮಾಸುಂದರಿಯು ಓರ್ವಳೇ ಬೇಸತ್ತು ಪೀಯಾನೋಪೇಟಿಯನ್ನು ತೆಗೆದು, ನಲದಮಯಂತೀನಾಟಕದೊಳಗಿನ "ಬಾಳಿದಿಯಾ ಮದನಾ, ನಮಗಾಗಿ" ಎಂಬ ಪದವನ್ನು ಬಾರಿಸುತ್ತಿದ್ದಳು. ಕರುಣಾರಸವ್ಯಂಜಕವಾದ ಸ್ವರಗಳು ಪಿಯಾನೋದಲ್ಲಿ ಬಹು ಮನೋವೇಧಕವಾಗಿ ಪರಿವರ್ತಿಸುತ್ತಿರಲು ಆ ನವಸುಂದರಿಯು ತಲ್ಲೀನಳಾಗಿ ಹೊರಗಿನ ಜಗತ್ತನ್ನು ಮರೆತು ಕುಳಿತಿದ್ದಳು. "ಬಾಳಿದಿಯಾ ಮದನಾ" ಎಂದು ಪುನರಾವರ್ತನವನ್ನು ಅವಳು ಮಾಡುವಷ್ಟರಲ್ಲಿ ಯಾವನೋ ಆವಳೆದುರಿನಲ್ಲಿ ಬಂದು ನಿಂತನು. ಮದನನೇ ಏನು? ಅಲ್ಲ, ಅವಳು ಅವನ ಪರಿಚಯದವನಾದ ಧ್ರುವರಾಯನೇ. ನೋಡನೋಡುವಷ್ಟರಲ್ಲಿ ಕಾಚಿಪಾತ್ರೆಯು ಒಡೆದು ಪುಡಿಪುಡಿಯಾಗುವಂತೆ ಧ್ರುವರಾಯನ ಪಾದಾಘಾತದಿಂದ ರಮಾಸುಂದರಿಯ ಉತ್ಸಾಹಭಂಗವಾದಂತಾಗಿ ಅವಳು ತಟಸ್ಥಳಾಗಿ ನಿಂತುಕೊಂಡಳು. "ಯಾಕೆ ಬಂದಿರುವನಾದೀತು?" ಎಂದು ಅವಳು ಮನಸ್ಸಿನಲ್ಲಿಯೇ ಚಿಂತಿಸಿದರೂ ಹಾಗೆ ಕೇಳಲು ಅವಳಿಗೆ ಬಾಯಿ ಬರಲೊ

ಲ್ಲದು. ಎದೆ ಡವಡವನೆ ಹಾರುತ್ತಿತ್ತು.

ಧ್ರುವರಾಯನ ಮನಸ್ಸಿನ ಸ್ಥಿತಿಯಾದರೂ ಹಾಗೆಯೇ ಆಗಿತ್ತು. ಈ ಸಮಯದಲ್ಲಿ ರಮಾಸುಂದರಿಯು ತನ್ನ ಮಂದಿರದಲ್ಲಿ ಓರ್ವಳೇ ಆಗಿರಬಹು ದೆಂದು ನೆನಿಸಿ ಅವನು ಸಮಯವನ್ನು ಸಾಧಿಸಿ ಅಲ್ಲಿಗೆ ಬಂದಿದ್ದನಾದರೂ ಅಲ್ಲಿ ಅವಳನ್ನೇಕಾಕಿನಿಯನ್ನು ಕಂಡಾಕ್ಷಣವೇ ಅವನೆದೆಯಲ್ಲಿ ವಿದ್ಯುದಾಘಾತ ವಾದಂತಾಯಿತು. ಉದ್ವೇಗದಿಂದ ಒಮ್ಮೆಲೆ ಎದೆಯುಬ್ಬಿ ಅವನ ಅಂಗಾಂಗ ಗಳಲ್ಲೆಲ್ಲ ಒಳಗಿಂದೊಳಗೆ ರಕ್ತವು ಚಿಮ್ಮಾಡಿ ಹರಿದಾಡಲಾರಂಭಿಸಿದ್ದರಿಂದ ಪಂಚೇಂದ್ರಿಯ ವ್ಯಾಪಾರಗಳೆಲ್ಲ ಕಟ್ಟಾಗಿ ನಿಂತವು. ಕೆಲವೊಂದು ಮನೋ ಗತವನ್ನು ಅವನು ರಮಾಸುಂದರಿಗೆ ಅರುಹಬೇಕೆಂದು ಬಂದದ್ದು ನಿಜ; ಆದರೆ ಒಡೆದುಹೋದ ಅವನ ಹೃದಯದೊಳಗಿನ ವಿಚಾರಗಳೆಲ್ಲ ಸೋರಿ ಹೋಗಿದ್ದವು. ಮೂಢನಂತೆ ನಿಂತುಕೊಂಡನು. ಮರ್ಯಾದಶೀಲೆಯಾದ ಆ ತರುಣಿಯೇ ಸಮಯವನ್ನರಿತು "ಬನ್ನಿರಿ, ಏನು ಸಮಾಚಾರ?" ಎಂದು ಹಾಗೂ ಹೀಗೂ ಮಾಡಿ ಶಿಷ್ಟಾಚಾರದ ಋಣದಿಂದ ಮುಕ್ತಳಾದಳು.

"ವಿಶೇಷವೇನೂ ಇಲ್ಲ. ಆ ನನ್ನ ಲೇಖವನ್ನು ಓದಿದ್ದಾಯಿತೇನು?" ಎಂದು ಧ್ರುವರಾಯನು ಅಸ್ವಾಧೀನಚಿತ್ತನಂತೆ ವಿಚಾರ ವಾಕ್ಯರಚನೆಗಳನ್ನು ಏಕೀಕರಿಸಲು ಪ್ರಯತ್ನ ಮಾಡುತ್ತ ಕೇಳಿದನು.

"ತಂದ ದಿವಸವೇ ಓದಿದೆನು. ಈಗಲೇ ಬೇಕಾಗಿರುವದೇನು? ಈ ಸುಲಲಿತವಾದ ಲೇಖವನ್ನು ಕನ್ನಡದಲ್ಲಿ ಭಾಷಾಂತರಿಸಬೇಕೆಂದು ಮಾಡಿ ದ್ದೇನೆ." ಎಂದು ಆ ಚಾರುಹಾಸೆಯು ಬಹು ವಿನಯದಿಂದ ನುಡಿದಳು.

"ಅವಶ್ಯ ಅವಶ್ಯ. ಬೇಕಾದಷ್ಟು ದಿವಸ ಇಟ್ಟುಕೊಳ್ಳಿರಿ. ಲೇಖವು ನಿಮ್ಮ ಮನಸ್ಸಿಗೆ ಬಂದಿರುವದೇನು?"

ರಮಾಸುಂದರಿಯು ಈಗ ಪ್ರಶಸ್ತವಾಗಿ ನಕ್ಕಳು. "ಧ್ರುವರಾವ್, ಪ್ರತ್ಯಕ್ಷ ಪಂಡಿತಜೀಯವರು (ಡಾಕ್ಟರ ಚೌಧರಿ) ತಲೆದೂಗಿದ ಲೇಖದ ವಿಷಯವಾಗಿ ನಾನು ಅಭಿಪ್ರಾಯವನ್ನು ಕೊಡಲು ಯೋಗ್ಯಳೆ? ಇದಕ್ಕೂ ದೊಡ್ಡ ದೊಡ್ಡವಾದ ಲೇಖಗಳನ್ನು ನೀವು ಬರೆದದ್ದು ನೋಡುವ ಭಾಗ್ಯವು ನನ್ನದಿರಲಿ!"

"ರಮಾಸುಂದರೀಬಾಯಿ, ನಿಮ್ಮ ಅಭಿಪ್ರಾಯವನ್ನು ಕೇಳಿ ನಾನು

ಕೃತಾರ್ಥನಾದೆನು. ನೀವು ಹೇಳಿದಂತೆ ಅನೇಕ ಲೇಖಗಳನ್ನು ಬರೆಯಬಹು ದಾದರೂ ಮನಸ್ಸಿಗೇಕೋ ಉತ್ಸಾಹವಿಲ್ಲದಂತಾಗಿದೆ." ಎಂದು ಧ್ರುವ ರಾಯನು ದೀನಮುಖನಾಗಿ ನುಡಿದನು.

"ಹಾಗೆ ಕಾಣುತ್ತದೆ. ನಿಮ್ಮ ಮುಖದ ತೇಜಸ್ಸು ಕಡಿಮೆಯಾಗಿದೆ. ಸೊರಗಿಯೂ ಇರುವಿರಿ. ಏನು ಚಿಂತೆಯಾಗಿದೆ? ಮನೆಯಲ್ಲಿ ಎಲ್ಲರೂ ಕ್ಷೇಮದಿಂದಿರುವರಷ್ಟೆ?"

ಧ್ರುವರಾಯನು ವಿಷಾದದಿಂದ ನಕ್ಕು "ದೇವರ ಕೃಪೆಯಿಂದ ಮನೆಯಲ್ಲಿ ಎಲ್ಲರೂ ಕ್ಷೇಮದಿಂದಿರುವರು." ಎಂದು ಹೇಳಿದನು.

"ಹಾಗಾದರೆ ಚಿಂತೆಗೆ ಮತ್ತಿನ್ನೇನು ಕಾರಣ?"

"ಚಿಂತೆಗೆ ಸಾವಿರ ಕಾರಣಗಳು. ಸೌಖ್ಯದ ಕಲ್ಪನೆಯನ್ನು ಏರಿಸಿ ಕಟ್ಟುತ್ತ ನಡೆದರೆ ಅಲ್ಲಿಯೇ ಚಿಂತೆಯು. ಮರದ ತುದಿಯಲ್ಲಿರುವ ಹಣ್ಣನ್ನು ಬಯಸಿದರೆ ಅದು ಹೇಗೆ ತಾನೆ ಸುಲಭವಾಗಿ ಸಾಧ್ಯವಾದೀತು?" ಎಂದು ಆ ತರುಣನು ರಮಾಸುಂದರಿಯ ಮುಖಾರವಿಂದವನ್ನು ಔತ್ಸುಕ್ಯದಿಂದ ನೋಡುತ್ತ ನುಡಿದನು.

ಚಿಂತೆಯ ಕಾರಣದ ಭಾಸವು ರಮಾಸುಂದರಿಯ ಮನಸ್ಸಿಗೆ ಅಕಸ್ಮಾತ್ತಾಗಿ ಜಗ್ಗನೆ ಹೊಳೆದಂತಾಯಿತು. ಧ್ರುವರಾಯನಿನ್ನು ಏನು ಹೇಳು ವನೋ ಏನು ಬಿಡುವನೋ ಹೇಗೆ ಮಾಡಲೆಂದು ಅವಳು ಕಾತರಳಾದಳು.

"ರಮಾಸುಂದರಿ, ಕಾತರಳಾಗಬೇಡ. ಅವಿಚಾರದ ಮಾತುಗ ಳನ್ನೇ ನಾನು ಆಡತಕ್ಕವನಲ್ಲ. ನನ್ನ ಚಿಂತೆಯ ಕಾರಣವನ್ನು ನಿನ್ನ ಮುಂದೆ ಹೇಳಿದರೆ ಪ್ರಯೋಜನವಾಗುವದೋ ಇಲ್ಲವೋ ಎಂಬ ಮಾತಿನ ಪೂರ್ವಾಪರ ವನ್ನು ಚೆನ್ನಾಗಿ ತೂಗಿ ನೋಡಿದ ಬಳಿಕ ನಿನಗೆ ತಿಳಿಸಬಹುದಾದರೆ ತಿಳಿಸು ವೆನು." ಎಂದು ಮುಗಿಸಿದವನೇ ಆ ಪಂಡಿತನು ಮೂಢನಂತೆ ಓಡಿ ಹೋದನು.

ದೇವರು ಹೇಳುವ ಪೂಜಾರಿಯ ಸಂದಿಗ್ಧವಾದ ನುಡಿಗಳಂತೆ ಧ್ರುವ ರಾಯನೇನೋ ಮಾತನಾಡಿ ಹೋದಬಳಿಕ ರಮಾಸುಂದರಿಗೆ ಒಳ್ಳೇ ವಿಚಾರ ಉಂಟಾಯಿತು. "ಅವನ ಮನಸ್ಸಿನೊಳಗಿನ ಭಾವವೇನಿರುವದೋ ಇರಲಿ. ಅವನ ಚಿಂತೆಯು ಚಿಂತೆ ನನಗೇಕೆ?. ಮನೋಜ್ಞನಾದ ತರುಣನ ನಡೆ

ನುಡಿಗಳನ್ನು ನಿರೀಕ್ಷಿಸುವದೂ, ಅವನ ಹಿತಾಹಿತಗಳ ವಿಷಯವಾಗಿ ವಿಚಾರ ಮಾಡುವದೂ ಸ್ತ್ರೀಯರಲ್ಲಿ ಪ್ರೇಮದ ಪ್ರಥಮ ಲಕ್ಷಣವೆಂದು ಅನುಭವಿಕರ ಅಭಿಪ್ರಾಯವು. ಇದೊಂದೇಕೆ, ಮೊನ್ನೇದಿನ ಆ ಗೈಯ್ಯಾಳಿಯಾದ ಇಂದುಮತಿಯು ಪ್ರೇಮದ ಮೀಮಾಂಸೆಯನ್ನು ಕುರಿತು ಹರಟೆ ಕೊಚ್ಚುತ್ತಿರುವಾಗ ಅಂದದ್ದು : 'ರಮಾಸುಂದರಿ, ಪ್ರಿಯನಲ್ಲಿ ನಿನ್ನ ಪ್ರೇಮವಿನ್ನೂ ನೆಲಿಸಿಲ್ಲವೆಂದು ತಿಳಿ; ಆದರೆ ನಿನ್ನ ತಂದೆಯವರು ನಿನ್ನನ್ನು ವಿಜಯಪುರದ ಧ್ರುವರಾಯನಿಗೆ ಕೊಡುವೆವೆಂದು ಸಂಕಲ್ಪ ಮಾಡಿದರೆ ಒಲ್ಲೆನೆನ್ನಲು ನೀನು ಸಿದ್ಧಳಾಗಿರುವೆಯೇನು? ಒಲ್ಲೆನೆಂದು ಸಹಸಾ ಹೇಳುವದಾಗದಿದ್ದರೆ ಅಲ್ಲಿಯೇ ಪ್ರೇಮದ ಉತ್ಪತ್ತಿಯು.' ಆ ಗೈಯಾಳಿಯ ವಾದವು ಇನ್ನೂ ನನ್ನ ಎದೆಯಲ್ಲಿ ಕಟಿಯುತ್ತಲಿದೆ. ವಿಚಾರ ಮಾಡಿಮಾಡಿದ ಹಾಗೆ ಪ್ರೇಮದ ಬೇರು ಹೆಚ್ಚು ಹೆಚ್ಚಾಗಿ ತಳವೂರಿಕೊಂಡಂತೆ ಕಾಣುತ್ತದೆ.''

''ಸಾಕು ಸಾಕು! ಈ ವಿಚಾರವೇ ಬೇಡ'' ಹೀಗೆ ಪ್ರತಿಜ್ಞೆ ಮಾಡಿಕೊಂಡು ರಮಾಸುಂದರಿಯು ಒಳ್ಳೇ ಆಪ್ಯತೆಯಿಂದ ತಲೆ ಎತ್ತಿ ಎಡೆಯಾಡಲಾರಂಭಿಸಿದಳು. ಒಳ್ಳೇ ವೇಗದಿಂದ ಭ್ರಮಿಸುತ್ತಿರುವ ವಿಚಾರಚಕ್ರವನ್ನು ತಟ್ಟನೆ ತಡೆದು ನಿಲ್ಲಿಸುವೆನೆಂದರೆ ಯೋಗಿಯಾದವನಿಗೂ ಅಸಾಧ್ಯವು. ರಮಾಸುಂದರಿಯ ಮನಸ್ಸು ಮತ್ತೆ ಆ ವಿಚಾರಚಕ್ರದ ಗಿರಕಿಗೆ ಸಿಕ್ಕಿ ಸುತ್ತಿಕೊಂಡು ನಡೆಯಿತು.

''ಇಲ್ಲಿಗೆ ಧ್ರುವರಾಯನು ಬಂದ ಉದ್ದೇಶವೇನು? ಲೇಖವನ್ನು ಮರಳಿ ತೆಗೆದುಕೊಳ್ಳಲಿಕ್ಕೆಯೆ? ಹಾಗೆ ತೋರುವದಿಲ್ಲ. ಕಾಲೇಜದಲ್ಲಿ ನನಗೆ ಸಮಕ್ಷಮವಾಗಿ ಹಾಗೆ ಹೇಳಿದ್ದರೆ ನಾನು ಅದನ್ನು ಕಳಿಸಿಕೊಡುತ್ತಿದ್ದೆನು; ಇಲ್ಲವೆ, ಜವಾನನೊಡನೆ ಹೇಳಿ ಕಳಿಸಿದ್ದರೂ ಆಗುವಂತಿತ್ತು. ಈ ಸಂಸ್ಥೆಯ ಕಾರ್ಯಕ್ರಮವನ್ನು ಓದಿದವರಿಗೆ ಇಂದು ಈ ಕೋಣೆಯಲ್ಲಿ ನಾನೋರ್ವಳೇ ಇರುವೆನೆಂಬ ಮಾತು ತಿಳಿಯದೆ ಇರದು. ಈ ಸಂಗತಿಯನ್ನರಿತು ಧ್ರುವರಾಯನು ಹೊತ್ತು ಸಾಧಿಸಿಕೊಂಡು ಬಂದಿದ್ದನೇನು? ಇರಬಹುದು. ಆದರೆ ಆ ಸುಶೀಲನು ದುರ್ವಿಚಾರಪ್ರೇರಿತನಾಗಿ ಬರಲಿಲ್ಲ. ಅವನ ಆಚರಣವೇ ತಾನಾಗಿ ಹೇಳುತ್ತದಲ್ಲ! ಹಾಗಾದರೆ ಆ ಅವಿವಾಹಿತನಾದ ತರುಣನು ಪ್ರೇಮಪರವಶನಾಗಿ ತನ್ನ ಮನೋಗತವನ್ನು ನನಗೆ ತಿಳಿ

ಸಲು ಬಂದಿದ್ದನೇನು ? ಆಗಿದ್ದೀತು. ನಾನೋರ್ವಳೇ ಸರ್ವಗುಣ ಸಂಪನ್ನೆಯಾದ ಚದುರೆಯೇನು ?" ಈ ಪ್ರಶ್ನಕ್ಕೆ ಅವಳ ಆತ್ಮವಿಶ್ವಾಸದ ನಗೆಯೇ ಸಮರ್ಪಕವಾದ ಉತ್ತರವಾಗಿತ್ತು.

ಪ್ರಾತಃಸ್ನಾನ, ಅಭ್ಯಾಸ, ಭೋಜನ, ಕಾಲೇಜದಲ್ಲಿಯ ಶಿಕ್ಷಣ, ಸಖೀ ಜನರ ಸಹವಾಸಗಳು ಚಕ್ರನೇಮಿಕ್ರಮದಿಂದ ನಡೆಯುತ್ತಿದ್ದರೂ ಧ್ರುವನ ನಿಶ್ಚಲವಾದ ಮೂರ್ತಿಯು ರಮಾಸುಂದರಿಯ ಕಣ್ಣುಮುಂದೆ ಕಟ್ಟಿಯೇ ಇರುತ್ತಿತ್ತು. ಏಕಾಂತವಾಸದಲ್ಲಿದ್ದರಂತೂ ಆ ವಿಚಾರದಲ್ಲಿ ಅವಳು ಸಮಗ್ರವಾಗಿ ಮುಳುಗಿಹೋಗುತ್ತಿದ್ದಳು. ಅದಕ್ಕಾಗಿ ಅವಳು ಸಹಸಾ ಏಕಾಕಿನಿಯಾಗಿರುತ್ತಲೇ ಇದ್ದಿಲ್ಲ. ಒಂದು ದಿನ ಅವಳ ಈ ಸ್ಥಿತಿಯಲ್ಲಿ ಅಂಚೆಯವನು ಅವಳ ಕೈಯಲ್ಲಿ ಒಂದು ಪತ್ರವನ್ನು ತಂದುಕೊಟ್ಟನು. ಮೇಲ್ವಿಳಾಸವು ಧ್ರುವರಾಯನ ಹಸ್ತಾಕ್ಷರದ್ದು. ಪತ್ರದ ಅಭಿಪ್ರಾಯವು ಆಗಲೆ ಅವಳಿಗೆ ವಿದಿತವಾಯಿತು. ಹುಟ್ಟಿನಲ್ಲಿ ಜೇನಿರುವದೆಂಬದನ್ನು ಹಿಂಡಿ ತೋರಿಸಲೆ ಬೇಕೆ ? ರಮಾಸುಂದರಿಯು ಆ ಪತ್ರವನ್ನು ಮೇಜಿನ ಮೇಲಿಟ್ಟು ಓದುವಷ್ಟು ಮನಃಸ್ವಾಸ್ಥ್ಯವಾಗಲೆಂದು ಎರಡೂ ಕೈಗಳಿಂದ ಕಣ್ಣುಮುಚ್ಚಿಕೊಂಡು ಒಳಿತಾಗಿ ಉಸುರಾಡಿಸುತ್ತ ಕುಳಿತುಕೊಂಡಳು.

ಅಂಥ ಪತ್ರವನ್ನು ಹಾಗೆ ಇಟ್ಟುಕೊಂಡರೆ ಅದು ಸುಮ್ಮನೆ ಕುಳ್ಳಿರಗೊಡಿಸುವದೆ? ಎರಡು ಮೂರು ನಿಮಿಷಗಳಲ್ಲಿಯೇ ಅವಳು ಅದನ್ನು ಒಡೆದು ಓದಿದಳು. ಓದುವಾಗಲೆ ಅವಳ ಸರ್ವಾಂಗವೆಲ್ಲ ಬೆವತಿತು. ಅವಳ ಮುಖದಲ್ಲಿ ಒಮ್ಮೆ ದರ್ಪವೂ ಒಮ್ಮೆ ಮಂದಹಾಸವೂ ಒಮ್ಮೆ ಲಜ್ಜೆಯ ರಕ್ತತೆಯೂ ಒಮ್ಮೆ ವಿಚಾರದ ಗಾಂಭೀರ್ಯವೂ ಕ್ರಮಕ್ರಮವಾಗಿಯೂ ಸಂಕುಲಿತವಾಗಿಯೂ ತೋರಿದವು. ಓದುವದಾದ ಕೂಡಲೆ ಅವಳು ಆ ಪತ್ರವನ್ನು ತನ್ನ ಉಡಿಯಲ್ಲಿಟ್ಟುಕೊಂಡು, ಉಪವನದಲ್ಲಿ ಅಡ್ಡಾಡಹೋದಳು. ಅಕೋ, ಅವಸರದಲ್ಲಿ ಆ ಪತ್ರವು ಇಲ್ಲಿ ಜಾರಿಬಿದ್ದಿದೆ. ಇದೇ ಸಮಯ, ಓದಿಕೊಳ್ಳಿರಿ.

ಪ್ರಿಯ ರಮಾಸುಂದರಿ,

ನನ್ನಲ್ಲಿ ಜನಿಸಿದ ಕೆಲವೊಂದು ಅಭಿಪ್ರಾಯವನ್ನು ನಿನಗೆ ನಿವೇದಿಸಲೆಂದು ಮೊನ್ನೆದಿನ ಬಂದಿದ್ದೆನು. ಆದರೆ ಆಗ ನನ್ನ ಮನಸ್ಸು ಯಾಕೋ

ಸಂಕೋಚಗೊಂಡಿದ್ದರಿಂದ ಹಾಗೆಯೇ ಹೊರಟುಹೋದೆನು. ನನ್ನ ಅಭಿಪ್ರಾಯವು ಚತುರೆಯಾದ ನಿನಗೆ ಅವಶ್ಯವಾಗಿ ವಿದಿತವಾಗಿರಲಿಕ್ಕೆಬೇಕು. ಸಂದೇಹಚ್ಛೇದವಾಗದಿದ್ದಲ್ಲಿ ಈ ಪತ್ರದ ಮೊದಲನೆಯ ವಳಿಯಲ್ಲಿಯ ಸಂಬೋಧನವು ಸೂಚಕವಾಗಿರುವದು. ನಾಳಿಗೆ ನಾನು ಮತ್ತೆ ನಿನ್ನ ಸನ್ನಿಧಾನಕ್ಕೆ ಬಂದು ನನ್ನ ಮನಸ್ಸನ್ನು ನಿನ್ನ ಮುಂದೆ ತೋಡಿಕೊಳ್ಳುವೆನು. ಇದು ನಾಳಿನ ಸಂದರ್ಶನದ ಪೂರ್ವಪೀಠಿಕೆಯು.

ನಿನ್ನ * * * ( ಯಾರೆಂದು ಹೇಳಲಿ ? )

ಧ್ರುವರಾಯ

ಭ್ರಮಿಷ್ಟಳಂತೆ ರಮಾಸುಂದರಿಯು ಉಪವನದಲ್ಲಿ ಅತ್ತಿತ್ತ ಅಡ್ಡಾಡಿದಳು. ಸ್ನಿಗ್ಧವಾದ ತರುಚ್ಛಾಯೆಯಲ್ಲಿರುವ ಶಿಲಾತಲದಲ್ಲಿ ವಿಶ್ರಮಿಸಿಕೊಳ್ಳಬೇಕೆಂದು ಹೊರಟವಳು ಅದನ್ನು ಮರೆತು ಕಾರಂಜಿಯು ಪುಟಿಯುತ್ತಿರುವ ಸ್ಥಳಕ್ಕೆ ಬಂದಳು. "ಈ ಸ್ಥಳಕ್ಕಾದರೂ ಏನಾಗಿದೆ ? " ಎಂದು ಸಮಾಧಾನ ಹೊಂದಿ ಆ ಸುಂದರಿಯು ಅಲ್ಲಿರುವ ಅಂದವಾದ ಚಿಕ್ಕ ಹೊಂಡದಲ್ಲಿ ಕೈಕಾಲು ಮೋರೆಗಳನ್ನು ತೊಳೆದು ಬಳಿಯಲ್ಲಿಯೇ ಇರುವ ಕಟ್ಟೆಯ ಮೇಲೆ ಕುಳಿತು ವಿಚಾರ ನಡಿಸಿದಳು.

"ಇದಕ್ಕೂ ವ್ಯಕ್ತವಾಗಿ ಅವರು ಇನ್ನೆಂತು ಬರೆಯಬೇಕು? ನಾಳಿಗೆ ಬಂದು ಎರಡರಲ್ಲಿ ಒಂದು ಹೇಳೆಂದರೆ ಏನು ಹೇಳಲಿ? ಅನುಮತಿಸಲೆ ? ಅನುಮತಿಸಲು ನಾನು ಸ್ವತಂತ್ರಳಲ್ಲ; ತಂದೆ ತಾಯಿಗಳು ಕೊಟ್ಟ ಮನೆಗೆ ಹೋಗತಕ್ಕವಳು. ಒಲ್ಲೆನೆಂದು ಹೇಳಲಿಕ್ಕಾದರೂ ನಾನೆಲ್ಲಿ ಸ್ವತಂತ್ರಳು ? ಮನಸ್ಸು ಮೊದಲೇ ಅವರ ಸ್ವಾಧೀನವಾಗಿ ಹೋಗಿದೆ," ಎಂದು ವಿಚಾರಿಸುತ್ತಿ ರಮಾಸುಂದರಿಯು ಫಕ್ಕನೆ ಎದ್ದು ಪ್ರಫುಲ್ಲಿತವಾದ ದವನದ ದಳವನ್ನು ಚಿವುಟಿ ಮೂಸಿನೋಡಿ "ದವನದ ಸುಗಂಧವೇ ಇದು. ನನಗೆ ಮತಿಭ್ರಮ ವಿನ್ನೂ ಆಗಿಲ್ಲ" ಎಂದು ಒಳಿತಾಗಿ ನಕ್ಕು, ಮತ್ತೇನೋ ವಿಚಾರಿಸುತ್ತ ಅಡ್ಡಾಡಿ ಮತ್ತೆ ಮೊದಲಿನ ಸ್ಥಳದಲ್ಲಿ ಬಂದು ಕುಳಿತಳು. "ಬ್ರಹ್ಮಾನುಕೂಲವಿದ್ದಂತೆ ಆದೀತು. ಆದರೆ ಇಂದಿಗೆ ನನ್ನ ವಿದ್ಯಾಭ್ಯಾಸಕ್ಕೆ ಕೃಷ್ಣಾರ್ಪಣವೆಂದಂತಾಯಿತು. ಗಡಿಯಾರದ ಅಂದೋಲನದಂತೆ ವಿಚಾರಗಳು ಸಂತತವಾಗಿ ನನ್ನ ತಲೆಯಲ್ಲಿ ಹೊಯ್ದಾಡುತ್ತಿರುವಾಗ ನಾನು ಓದುವದೇನು

ಬರೆಯುವದೇನು ?

ನನ್ನದೇನಾದರೂ ಆಗಲಿ, ಈ ಕಥಾನಾಯಕನ ಅವಸ್ಥೆಯೇನು ? ವೃದ್ಧಾಂಗರೂ ತೇಜಸ್ಸುಳ್ಳ ರಕ್ತದವರೂ ಆದವರ ವಿಕಾರವಶತೆಯು ಅಧಿಕವಾಗಿರಲೇಬೇಕು. ಅವರು ಅಂಥ ವಿಕಾರವಶತೆಯನ್ನು ವಿವೇಕದಿಂದ ದಬ್ಬಿಡಬಹುದು. ಆದರೆ ಆ ವಿವೇಕದ ಸಾಮರ್ಥ್ಯವೆಷ್ಟಿರಬೇಕು ಬಲ್ಲಿರಾ ? "ಧ್ರುವರಾಯನ ಬಲವು ಕುಂದಿಹೋಗಿದೆ. ಅವರ ಮುಖವು ಕಳೆಗುಂದಿ ಹೋಗಿದೆ. ಅವರ ಅಭ್ಯಾಸಕ್ರಮವು ನಿಂತುಹೋಗಿದೆ." ಎಂದು ಪ್ರತ್ಯಕ್ಷ ಪಂಡಿತಜಿಯವರು ಚಿಂತಾಕುಲರಾಗಿದ್ದಾರೆ. ಪಂಡಿತಜಿಯವರ ತರುವಾಯ ಈ ಕಾಲೇಜದ ಚಾಲಕರು ಧ್ರುವರಾಯರೇ ಎಂದು ರಾಜಾ ದೀನದಯಾಲರೇ ಮುಂತಾದ ಮಹಾತ್ಮರು ಆಶೆಯನ್ನು ತಳೆದಿರಲು ನನಗೋಸ್ಕರವಾಗಿ ಅಂಥ ಮಹತ್ಕಾರ್ಯದ ಹಾನಿಯಾಗುವ ಹೊತ್ತು ಬಂದೊದಗಿದಂತಾಗಿದೆ. ಏನು ಮಾಡಲಿ ? ಬಹಳೊತ್ತು ಅವಳು ಆಲೋಚಿಸಿದಳು. ಬಹಳೊತ್ತು ಅಡ್ಡಾಡಿದಳು. ಬಗೆ ಹರಿಯಲಿಲ್ಲ. "ಆಗಲಿ, ನಾಳಿನತನಕ ಅವಕಾಶವಿರುವದಲ್ಲ; ಅಷ್ಟರಲ್ಲಿ ದೇವರು ಬುದ್ಧಿ ಕೊಟ್ಟಂತೆ ಮಾಡಬಹುದು."

ಬೆಳಗಾಗುವದರೊಳಗಾಗಿ ಧ್ರುವರಾಯನ ಕೈಯಲ್ಲಿ ರಮಾಸುಂದರಿಯು ಬರೆದ ಕಾರ್ಡು :

ಶಾರದಾಪ್ರಸಾದ ಕಾಲೇಜದ "ಫೆಲೋ" ಇವರಿಗೆ ರಮಾಸುಂದರಿಯ ವಿನಂತಿ :

ಏನು ನಿಮಿತ್ತವೊ ತಲೆನೋವು ಜಾಸ್ತಿಯಾಗಿದೆ. ಅದಕ್ಕಾಗಿ ಇಂದು ವಿದ್ಯಾಮಂದಿರಕ್ಕೆ ಬರುವದಾಗುವದಿಲ್ಲ. ಕ್ಷಮಿತವಿರಬೇಕು.

ತಮ್ಮ ವಿಧೇಯಳಾದ,
ರಮಾಸುಂದರಿ.

ಧ್ರುವರಾಯನು ಆ ಕಾರ್ಡನ್ನು ಮೇಜಿನಮೇಲಿಟ್ಟು ಅದರ ಮೇಲೆ ತನ್ನ ಹಸ್ತವನ್ನು ಬಳಿತಾಗಿ ಅಪ್ಪಳಿಸಿದನು. ಆ ರಭಸದ ಹೊಡತಕ್ಕೆ ಮೇಜು ಒಳಿತಾಗಿ ಅದರಿತು. ಆಫೀಸದ ಕೋಣೆಯಲ್ಲೆಲ್ಲ "ಧಮ್ಮೆಂದು" ದನಿವು ಹಿಡಿಯಿತು. "ಏನು ಮಾಡಿದಳೀಕೆ ! ಇಂದು ನಾನು ಅವಳ ಸನ್ನಿಧಾನಕ್ಕೆ ಬರುವೆನೆಂದು ಬೇಡಿಕೊಂಡಿದ್ದೆನು. ನಾನು ಬರಬಾರದೆಂಬದೇ ಈ ಕಾರ್ಡಿನ

ಅರ್ಥವಿರಬಹುದೇನು?" ಮತ್ತೆ ಅಡ್ಡಾಡಿ ವಿಚಾರಿಸಿ "ಹೀಗೂ ಇರಬಹುದು: ಪ್ರಾತಃಕಾಲದಲ್ಲಿ ಹೋದರೆ ಆ ಚತುರೆಯು ಸಖಿಯರಾದ ಇಂದುಮತಿ ಮುಂತಾದವರು ಬಳಿಯಲ್ಲಿಯೇ ಇರುವರು. ಮಧ್ಯಾಹ್ನದಲ್ಲಿಯಂತೂ ಕಾಲೇಜಕ್ಕೆ ಬರತಕ್ಕದ್ದು. 'ಮಧ್ಯಾಹ್ನದಲ್ಲಿ ಮನೆಯಲ್ಲಿ ನಾನೊಬ್ಬಳೇ ಇರುತ್ತೇನೆ. ಆಗ ನೀವು ಬನ್ನಿರಿ' ಎಂಬದೇ ಈ ಕಾರ್ಡಿನ ನಿಜವಾದ ಅಭಿಪ್ರಾಯವು."ಎಂದವನೇ स्त्रीणामशिक्षितपटुत्वममानुषीषु संदृश्यते किमुतः याः प्रतिबोधवत्यः ಎಂದು ಕೂಗಿ ಹಾಡಿದನು.

ಆಮೇಲೆ ಅವನು ಆ ಕಾರ್ಡನ್ನು ಜೋಡಿಸಿ ಕಾಲೇಜದ ವೈದ್ಯರಾದ ಕವಿರಾಜ ನರೇಂದ್ರನಾಥ ಚತರ್ಜಿಯವರಿಗೆ ಒಂದು ಪತ್ರಬರೆದು "ಈ ವಿದ್ಯಾರ್ಥಿನಿಗೆ ಬೇಗನೆ ಆರೋಗ್ಯವಾಗುವಂತೆ ಮಾಡಬೇಕು." ಎಂದು ವಿಶೇಷ ಸೂಚನೆಯನ್ನು ಕೂಡಾ ಬರೆದನು. ಮಧ್ಯಾಹ್ನ ಮೀರುವದರೊಳಗಾಗಿ ಕವಿರಾಜರ ಉತ್ತರ ಬಂದಿತು. "ರಮಾಸುಂದರೀದೇವಿಯ ತಲೆನೋವಿಗೆ ಮನಸ್ತಾಪವೇ ಕಾರಣವು. ಮೇಲುಪಚಾರದಿಂದ ವಿಶೇಷವಾದ ಪ್ರಯೋಜನ ವಾಗದು. ಆದರೂ ನೋವು ಕಡಿಮೆಯಾಗುವಂತೆ ವ್ಯವಸ್ಥೆ ಮಾಡಿದೆ."

ಆಯತ್ತವಾಗಿ ನೆಟ್ಟಗಾಯಿತು. ರಮಾಸುಂದರಿಯ ಮನೆಗೇಕೆ ಹೋಗಿದ್ದೆಯೆಂದು ಯಾರಾದರೂ ಕೇಳಿದರೆ ರೋಗಿಯಾದ ವಿದ್ಯಾರ್ಥಿನಿಯ ಸಮಾಚಾರಕ್ಕೆ ವ್ಯವಸ್ಥಾಪಕನಾದ ನಾನು ಹೋಗಬೇಡವೆ? ಲಗಬಗೆಯಿಂದ ಪೋಷಾಕು ಮಾಡಿಕೊಂಡು ಅವನು ರಮಾಸುಂದರಿಯು ಇರುವ ಸ್ಥಳದ ಕಡೆಗೆ ಎಡವುತ್ತ ಮುಗ್ಗುತ್ತ ಓಡಿದನು. ಇವನು ಬರುವನೆಂದು ನಿಶ್ಚಯವಾಗಿ ತಿಳುಕೊಂಡು ಆ ರಮಣಿಯು ತನ್ನ ವ್ಯವಸ್ಥೆಯಲ್ಲಿಯೇ ಇದ್ದಳು. "ಕಲೋನ ವಾಟರ"ದಲ್ಲಿ ( ಒಂದು ಪ್ರಕಾರದ ಓಷಧಿಯ ನೀರು ) ತೋಯಿಸಿದ ವಸ್ತ್ರ ವನ್ನು ತಲೆಗೆ ಕಟ್ಟಿಕೊಂಡು ಅವಳು ಹಾಸಿಗೆಯಲ್ಲಿ ಮಲಗಿದ್ದಳು. ಸಮೀಪ ದಲ್ಲಿಯೇ ಧ್ರುವರಾಯನಿಗಾಗಿ ಒಂದು ಕುರ್ಚಿಯನ್ನೂ ಮೇಜಿನ ಮೇಲೆ ಚಿನೀ ಚಂಬುವಿನಲ್ಲಿ ತುಂಬಿಟ್ಟ ಹಾಲನ್ನೂ ಇರಿಸಿದ್ದಳು. ಬಾಗಿಲವು ತೆರೆದೇ ಇಟ್ಟಿತ್ತು.

ಧ್ರುವರಾಯನು ಬಂದವನೇ ಸಂತೋಷವ್ಯಂಜಕವಾಗಿ ಮಂದಹಾಸ ವನ್ನು ತಳೆದು "ಪ್ರಕೃತಿ ಹೇಗಿದೆ?" ಎಂದು ಕೇಳಿದನು.

"ಹೇಗೇನು? ನೆಗಡಿ ಕೆಮ್ಮುಗಳು ಬೇನೆಯಲ್ಲ, ನತ್ತು ಬುಗುಡಿ ಆಭರಣಗಳಲ್ಲವೆಂಬ ನಾಣ್ಣುಡಿ ಇರುವದಿಲ್ಲವೆ? " ಎಂದು ರಮಾಸುಂದರಿಯಾದರೂ ಅಹುದೋ ಅಲ್ಲವೋ ಎಂಬಷ್ಟು ನಗೆ ತಳೆದು ನುಡಿದಳು.

ಧ್ರುವರಾಯನು ನಾಲ್ಕಾರು ನಿಮಿಷದವರೆಗೆ ಕೆಳಗೆ ಮೋರೆಯನ್ನು ಮಾಡಿಕೊಂಡು ತನ್ನ ಕೈಯಲ್ಲಿರುವ "ಮಲಕ್ಕಾ" ಬೆತ್ತದಿಂದ ನೆಲವನ್ನು ಗೀಚುತ್ತ ವಿಚಾರಗೈದು ಮನಸ್ಸಿನ ನಿಶ್ಚಯವಾದ ಬಳಿಕ ರಮಾಸುಂದರಿಯ ಮುಖವನ್ನು ದಿಟ್ಟಿಸಿ ನೋಡಿ "ನಿನ್ನೆ ನಾನು ಬರೆದ ಪತ್ರವು ನಿಮಗೆ ತಲ್ಪಿರಬಹುದು?" ಎಂದು ಕೇಳಿದನು.

"ಅಹುದು ಧ್ರುವರಾವ್, ನಿಮ್ಮಂಥ ಸದಸದ್ವಿವೇಕವುಳ್ಳ ಪಂಡಿತರು ಅಂಥ ಅಪ್ರಯೋಜಕವಾದ ಪತ್ರವನ್ನು ಹೇಗೆ ಬರೆದಿರೋ ಏನೋ!" ಎಂದು ಆ ಧೀರೆಯು ಗಂಭೀರವಾದ ಮುಖಮುದ್ರೆಯನ್ನು ತಳೆದು ಕೇಳಿದಳು.

ಆ ಮಾತು ಕೇಳಿ ಧ್ರುವರಾಯನು ಸಿಡಿಲುಬಡಿದವನಂತೆ ಬೆರಗಾಗಿ ಬಾಯ್ದೆರೆದು ಕಲ್ಲುಮೂರ್ತಿಯಂತೆ ಕುಳಿತನು.

"ಏನೆಂದಿ ರಮಾಸುಂದರಿ?" ಎಂದಿಷ್ಟು ಕೇಳಬೇಕಾದರೆ ಅರ್ಧಾಂಗವಾಯುಗ್ರಸ್ತನಿಗಾಗುವಷ್ಟು ಶ್ರಮವು ಆ ಮದನಪೀಡಿತನಿಗಾಯಿತು.

"ನೀವು ನನ್ನನ್ನು ಏಕವಚನದಿಂದ ಸಂಭೋದಿಸಿದರೂ ನನಗೆ ಕೋಪವಿಲ್ಲ. ಆದರೆ ನೀವು ಆ ಪತ್ರವನ್ನು ಬರೆಯಲೇಬಾರದಾಗಿತ್ತು."

"ಕ್ಷಮಿಸಿರಿ! ಪ್ರೇಮಪರವಶನಾದ ನನಗೆ ಜೀವಿತಾಧಾರದ ಬೇರೆ ಉಪಾಯವು ತೋಚಲಿಲ್ಲಾದ್ದರಿಂದ ಹಾಗೆ ಬರೆದೆನು." ಎಂದು ಅವನು ಬಹು ದೀನನಾಗಿ ನುಡಿದನು.

"ಧ್ರುವರಾವ್, ನಾನು ಕಾಲೇಜವನ್ನು ಬಿಟ್ಟು ಹೋದ ಬಳಿಕ ನೀವು ಇಂಥ ವಿಚಾರಗಳನ್ನು ಪ್ರಕಟಗೊಳಿಸಿದ್ದರೆ ವಿಶೇಷವಾದ ಬಾಧಕವಿದ್ದಿಲ್ಲ. ನೀವಿಲ್ಲಿ ನಮ್ಮ ಅಭ್ಯಾಸದ ನಿಯಾಮಕರು. ನೀವೇ ಕರ್ತವ್ಯಪರಾಙ್ಮುಖರಾಗಿ ನಿಮ್ಮ ಅಭ್ಯಾಸಕ್ಕೆ ವ್ಯತ್ಯಯವನ್ನು ತಂದುಕೊಳ್ಳುವದಲ್ಲದೆ ನಮ್ಮಂಥ ಅಬಲೆಯರ ಮನಸ್ಸಿನಲ್ಲಿ ಚಂಚಲತೆಯನ್ನು ಉಂಟುಮಾಡಬಂದಿರುವಿರಿ. ವಿಹಿತವೇ ಇದು?"

"ಪ್ರಿಯೆ, ಇಂದು ಬೇಡ, ಇನ್ನು ಹತ್ತು ವರ್ಷಕ್ಕಾದರೂ ನನ

ಪ್ರಣಯವನ್ನು ನೀನು ಸ್ವೀಕರಿಸುವಿಯಾ? ” ಎಂದು ಭಕ್ತನು ಗುಡಿಯಲ್ಲಿಯ ಮೂರ್ತಿಯ ಮುಂದೆ ಕೈಜೋಡಿಸಿಕೊಂಡು ನಿಂತಂತೆ ನಿಂತು ಧ್ರುವರಾಯನು ಬೆಸಗೊಂಡನು.

ರಮಾಸುಂದರಿಗೆ ನಗೆ ತುಂಬಿ ಬಂದಿತು. ಅವಳು ತನ್ನ ಎರಡೂ ಕೈಗಳಿಂದ ಮೋರೆಯನ್ನು ಮುಚ್ಚಿಕೊಂಡು ನಗೆಯನ್ನು ಅಡಗಿಸಿಕೊಂಡಳು. ಧ್ರುವರಾಯನ ಪ್ರಾರ್ಥನೆಗೆ ಉತ್ತರವನ್ನು ಕೊಡುವ ಗೋಜಿಗೆ ಅವಳು ಹೋಗಲಿಲ್ಲ. ಮತ್ತೆ ಅವಳು ಗಾಂಭೀರ್ಯವನ್ನು ತಳೆದು, “ ಶಿಕ್ಷಕರೆ, ನೀವು ಸಂಬೋಧನಗಳನ್ನು ಉಪಯೋಗಿಸುವಾಗ ವಿಚಾರ ತಿಳಿದು ಉಪಯೋಗಿಸಿರಿ. ನಿಮ್ಮಂಥವರಿಗೆ ಅಬಲೆಯಾದ ನಾನು ಬುದ್ಧಿಯ ಮಾತು ಹೇಳಲು ವಿಷಾದಪಡುತ್ತೇನೆ. ”

ಧ್ರುವರಾಯನು ಚಟ್ಟನೆ ತನ್ನ ಆಸನವನ್ನು ಬಿಟ್ಟೆದ್ದು, “ ರಮಾಸುಂದರೀಬಾಯಿ, ನಿಮಗೆ ತೊಂದರೆ ಕೊಟ್ಟದ್ದಕ್ಕಾಗಿ ಕ್ಷಮಿಸಿರಿ. ಆದರೂ ಪ್ರೇಮನಿರ್ಜಿತನಾದ ನಾನು ಮರ್ಯಾದೆಯನ್ನು ಉಲ್ಲಂಘಿಸಲಿಲ್ಲವೆಂದು ನಂಬುತ್ತೇನೆ. ಇರಲಿ. ನಾಳೆನಿಂದ ನಾನು ಈ ಕಾಲೇಜದಲ್ಲಿರುವದರಿಂದ ನಿಮಗೆ ಸಂಕೋಚವಾಗುತ್ತಿದ್ದರೆ ಹಾಗೆ ಹೇಳಿರಿ; ನಾನು ಹೊರಟು ಹೋಗುತ್ತೇನೆ ” ಎಂದು ಸಂಕ್ಷುಬ್ಧನಾಗಿ ಕೇಳಿದನು.

“ ಹಾಗೆ ಮಾತ್ರ ಮಾಡಬೇಡಿರಿ. ಹೀನಸತ್ತ್ವರ ವಿಚಾರವಿದು. ನೀವು ಇಲ್ಲಿ ಇರುವದರಿಂದ ನನ್ನ ಸಮಭಾವವು ಕೆಡಲಾರದು. ಅಷ್ಟು ಮಾನಸಿಕ ಧೈರ್ಯವು ನನ್ನಲ್ಲಿದೆ ” ಎಂದು ಆ ಪ್ರೌಢೆಯು ತಾಳ್ಮೆಯಿಂದ ನಗುತ್ತ ನುಡಿದಳು.

ಮತ್ತೊಂದು ಮಾತಾಡದೆ ಧ್ರುವರಾಯನು ಆ ಸ್ಥಳವನ್ನು ಬಿಟ್ಟು ಶಭಸದಿಂದೆ ಹೊರಗೆ ನಡೆದನು. ಆ ಸುಂದರಾಂಗನ ಮೂರ್ತಿಯು ಕಣ್ಮರೆಯಾದ ಕೂಡಲೆ ರಮಾಸುಂದರಿಯ ಕಣ್ಣುಗಳೊಳಗಿಂದ ಅಶ್ರುಧಾರೆಗಳ ಚಿಲುಮೆಗಳು ಪುಟಿದವು. ಚಟ್ಟನೆ ಮಂಚದಿಂದಿಳಿದು ಅವಳು ಕಿಟಕಿಯಲ್ಲಿ ಬಂದು ನಿಂತು ತನ್ನ ಮನೋರಮಣನ ವ್ಯಾಪಾರಗಳನ್ನು ನೋಡುವ ಕುತೂಹಲವುಳ್ಳವಳಾಗಿ ನಿಂತುಕೊಂಡಳು. ಅಶ್ವತ್ಥಾಮನ ಸೆಟೆಯಿಂದ ಎದೆಯುಬ್ಬಿಸಿಕೊಂಡು ಅಡ್ಡಾಡುವ ಆ ತರುಣನು, ಈ ಸಮಯದಲ್ಲಿ ಮುಪ್ಪಿನಿಂದ

ಮುಟ್ಟಿಗೆಯಾದವನಂತೆ ಅಧೋಮುಖನಾಗಿ ಹೆಜ್ಜೆಗಳನ್ನೆಣಿಸುತ್ತ ನಡೆದಿದ್ದನು. ಅವನನ್ನು ಕಂಡು ರಮಾಸುಂದರಿಯು ಒಳಿತಾಗಿ ಬಿಸಿಸುಯ್ದು "ಅವರ ಹಿತಕ್ಕಾಗಿ ನನ್ನ ಕಾಲಮೇಲೆ ನಾನು ಕಲ್ಲು ಹಾಕಿಕೊಂಡೆನು. ಆಗಲಿ, ಅವರ ದಾದರೂ ಕಲ್ಯಾಣವಾಗಲಿ. ನನ್ನ ಕಥೆಯಂತೂ ಮುಗಿಯಿತು. ಮುಂದೆ ಈ ಕಾಲೇಜದಲ್ಲಿ ಜಾನಕೀದೇವಿಯರ ಸ್ಥಾನಾಪನ್ನಳಾಗತಕ್ಕವಳು ನಾನೇ ಎಂದು ತಿಳಕೊಂಡಿದ್ದೆನು." ಎಂದು ನುಡಿದು ಅವಳು ಮತ್ತೆ ಕಣ್ಣಿಗೆ ನೀರು ತಂದಳು.

"ನಡೆ ಧ್ರುವರಾಯ್, ನಿನಗಿನ್ನು ಸನ್ಯಾಸವು ಬಂದಡರಿತು. ಕರ್ಮಯೋಗಿಯಂತೆ ನೀನಿನ್ನು ನಿಷ್ಕಾಮವಾದ ಕರ್ಮವನ್ನು ಮಾಡು. ಅನೇಕ ಜನ ಮಹಾತ್ಮರು ಕೂಡಿ ಈ ಕಾಲೇಜ ಸಂಸ್ಥೆಯ ಭಾರವನ್ನು ನಿನ್ನ ತಲೆಯ ಮೇಲೆ ಹೊರಿಸಬೇಕೆಂದು ಮಾಡಿದ್ದಾರೆ, ಹೊರು ನಡೆ. ಆಯತ್ತವಾಗಿ ಸಂಸಾರದ ಭಾರವು ನಿನ್ನ ತಲೆಯ ಮೇಲಿಂದ ಇಳಿದಿದೆ" ಎಂದು ಉದ್ಗಾರ ತೆಗೆದು ಧ್ರುವರಾಯನು ಮನೆಗೆ ಬಂದವನೇ ಮನೋನಿಗ್ರಹದಿಂದ ಸಕಲ ವ್ಯಾಮೋಹಗಳನ್ನು ಮೆಟ್ಟಿ ಎಮ್. ಎ. ಪರೀಕ್ಷೆಯ ಸಿದ್ಧತೆ ಮಾಡಲುದ್ಯುಕ್ತನಾದನು.

ಧ್ರುವರಾಯನು ಹೋದನೋ ಇಲ್ಲವೋ ಅಷ್ಟರಲ್ಲಿ ಇಂದುಮತಿಯು ರಮಾಸುಂದರಿಯ ಎದುರಿನಲ್ಲಿ ಬಂದು ನಿಂತಳು.

"ಇಂದುಮತೀ, ಅಡ್ನಾಡಿ ಹೊತ್ತಿನಲ್ಲಿ ನೀನು ಕಾಲೇಜವನ್ನು ಬಿಟ್ಟು ಹೇಗೆ ಬಂದಿ ?"

"ಇದೊಂದು ವಿನೋದಾಸ್ಪದವಾದ "ಟ್ರ್ಯಾಜೆಡಿ" (ದುಃಖಪರ್ಯವಸಾಯಿ ನಾಟಕ) ಪ್ರಯೋಗವು. ಅದರಲ್ಲಿ ನನಗೂ ಒಂದು ಚಿಕ್ಕದಾದ ಭೂಮಿಕೆಯನ್ನು ಕೊಟ್ಟಿದ್ದಾರೆ. ಪಾಠ ಮಾಡುವದಕ್ಕಾಗಿ ಬಂದೆನು."

"ಏನೇನು ?" ಎಂದು ರಮಾಸುಂದರಿಯು ಚಕಿತಳಾಗಿ ಕೇಳಿದಳು.

"ಏನೇನೆಂದರೆ, ಧ್ರುವರಾಯರು ನಿನ್ನಲ್ಲಿಗೆ ಬಂದಿದ್ದರಲ್ಲ, ಅವರಿಗೆ ನೀನು ನಿಷ್ಠುರವಾದ ಉತ್ತರವನ್ನು ಕೊಟ್ಟಂತೆ ಕಾಣುತ್ತದೆ." ಎಂದು ಇಂದುಮತಿಯು ನಟಿಯಂತೆ ಹಾವಭಾವ ಮಾಡುತ್ತ ಕೇಳಿದಳು.

"ಅಂದರೆ ! ಧ್ರುವರಾಯರು ಇಲ್ಲಿಗೆ ಬಂದಿದ್ದರೆಂದು ಯಾರು ಹೇಳಿದರು ? ನಾನು ನಿಷ್ಠುರವಾದ ಉತ್ತರವನ್ನಾದರೂ ಕೊಟ್ಟದ್ದು ಯಾರು ಹೇಳಿ

ದರು ? ” ಎಂದು ರಮಾಸುಂದರಿಯು ಕ್ರುದ್ಧಳಾಗಿ ಪ್ರಶ್ನೆ ಮಾಡಿದಳು.

“ ಧ್ರುವರಾಯರಿಗೆ ನೀನು ಅನುಕೂಲವಾದ ಉತ್ತರವನ್ನು ಕೊಟ್ಟಿದ್ದರೆ ಅವರು ಉತ್ಸಾಹದಿಂದ ಹುಲಿಯಂತೆ ಹಾರುತ್ತ ಹೋಗುತ್ತಿದ್ದರು. ಈಗ ಹೋದಂತೆ ಅಳುಮೋರೆ ಮಾಡಿಕೊಂಡು ಹೆಜ್ಜೆಗಳನ್ನೆಣಿಸುತ್ತ ಉಶ್ ಉಶ್ ಎಂದು ಯಾಕೆ ಹೋಗುತ್ತಿದ್ದರು ? ”

“ ನಾನೇಕೆ ನಿಷ್ಠುರವಾಡಲಿ ಅವರಿಗೆ ? ಯಾವ ಸಂದರ್ಭದಿಂದ ನೀನು ಕೇಳುವಿ ಪ್ರಿಯ ಸಖಿ ? ”

“ ಸಂದರ್ಭವು ಈ ಪತ್ರದಲ್ಲಿ ಇದೆ ನೋಡಿದಿಯಾ ? ” ಎಂದು ಇಂದುಮತಿಯು ಧ್ರುವರಾಯನು ರಮಾಸುಂದರಿಗೆ ಬರೆದಿರುವ ಪತ್ರವನ್ನು ಅವಳ ಮುಖಕ್ಕೆ ಹಿಡಿದು ನುಡಿದಳು.

ರಮಾಸುಂದರಿಯು ಕಳ್ಳೆಯಂತಾಗಿ “ ಸಖಿ, ಇಂಥ ಪತ್ರಕ್ಕೆ ನಿಷ್ಠುರವಾದ ಉತ್ತರವೇ ತಕ್ಕದ್ದಲ್ಲವೆ ? ” ಎಂದು ನಾಚಿ ಸತ್ತವಳಾಗಿ ನುಡಿದಳು.

“ ವಾಸ್ತವ, ವಾಸ್ತವ ! ಆದರೆ ನನ್ನ ಜೀವದ ಗೆಳತಿಯೇ, ಈ ಪತ್ರದ ಬೆನ್ನುಮೇಲೆ ನೀನು ನಿನ್ನ ಸ್ವಹಸ್ತಾಕ್ಷರದಿಂದ ಏನು ಬರೆದಿರುವೆ ? ” ಎಂದು ಇಂದುಮತಿಯು ಆ ಪತ್ರವನ್ನು ರಮಾಸುಂದರಿಯ ಮುಂದೆ ತಿರುವಿ ಹಿಡಿದು ಖೊಳ್ಳನೆ ನಕ್ಕಳು.

“ ಏನು ಬರೆದಿದ್ದೇನೆ ? ” ಎಂದು ರಮಾಸುಂದರಿಯು ಆ ಪತ್ರವನ್ನು ಸೆಳಕೊಳ್ಳಹೋದಳು. ಇಂದುಮತಿಯು ಅದನ್ನು ಗಟ್ಟಿಯಾಗಿ ಹಿಡಿದುಕೊಂಡು “ ನೀನು ಬರೆದದ್ದು ಓದಿ ಹೇಳಲಿಯಾ ?

ವಿನತಿಯನಾಲಿಸೊ ಮನಮೋಹನಾ ॥ ಪಲ್ಲ ॥
ನಲಿನೀಯು ಸೀಳುತೆ ಬಿಸವ ಸಾರಸನು |
ಸೆಳೆವ ತೆರದಲೆನ್ನ ಮನವ ಸೆಳೆದಿ ರಾಜೇಂದ್ರ ॥ ೧ ॥ ”

ಎಂಬ ಪದವನ್ನು ಒಳ್ಳೇ ಸುಸ್ವರವಾಗಿ ಹಾಡಿ ತೋರಿಸಿದಳು

“ ಇಂದುಮತೀ, ನೀನು ಹೀಗೆ ಅನ್ಯರ ಪತ್ರಗಳನ್ನು ಕದ್ದು ಓದಬಹುದೆ ? ನಿನಗೆ ಕನ್ನಡವನ್ನು ಕಲಿಸಿದಾಕೆ ನಾನೇ ಮೂರ್ಖಳು. ”

“ ಮೂರ್ಖಳೋ ಆವಳೋ ನನಗೆ ಗೊತ್ತಿಲ್ಲ. ನೀನು ನನಗೆ ಕನ್ನಡ

ವನ್ನು ಕಲಿಸದಿದ್ದರೆ ನಾನು ಈ ಸಚಿತ್ರಭಾರತದ ಸಂಚಿಕೆಯನ್ನಾಗಲಿ, ಅದರಲ್ಲಿ ನೀನಿಟ್ಟಿರುವ ಈ ಪತ್ರವನ್ನಾಗಲಿ ಎತ್ತಿಕೊಂಡು ಹೋಗುತ್ತಿದ್ದಿಲ್ಲ ಸರಿ."

ಮುಂದೆ ಯಥಾಕಾಲವಾಗಿ ಯುನಿವ್ಹರ್ಸಿಟಿಯ (ವಿಶ್ವವಿದ್ಯಾಲಯದ) ಪರೀಕ್ಷೆಗಳಾದವು. ಒಟ್ಟಿನಲ್ಲಿ ಶಾರದಾ ಪ್ರಸಾದ ಕಾಲೇಜದ ಬೆಳಕು ಬಹಳಾಯಿತು. ಎಮ್. ಏ ಪರೀಕ್ಷೆ ಪಾಸಾದವರಲ್ಲಿ ಧ್ರುವರಾಯನಿಗೆ ಪ್ರಥಮ ಸ್ಥಾನವು. ಸ್ತ್ರೀ ವಿದ್ಯಾರ್ಥಿಗಳಲ್ಲಿ ನಾಲ್ವರು ಬೀ. ಏ. ಪಾಸಾಗಿದ್ದರು. ಇಂದುಮತಿ, ಚಂದ್ರಾವಲಿ, ರಮಾಸುಂದರಿಯರು ಎಫ್. ಎ. ದಲ್ಲಿ ಪಾಸಾದವರು. ಅಂದು ಡಾಕ್ಟರ ಚೌಧರಿಯವರಿಗೆ ಪರಮಾನಂದವು. ಜಾನಕೀದೇವಿಯರಾದರೂ ಪಾಸಾಗಿರುವ ತಮ್ಮ ಶಿಷ್ಯೆಯರನ್ನು ಕೂಡಿಸಿಕೊಂಡು ಸಂತೋಷಪ್ರದರ್ಶನವನ್ನು ಮಾಡಿದರು. ಧ್ರುವರಾಯನು ಸೊರಗಿದಂತೆ ತೋರಿದರೂ ಒಣಗಿದ ದ್ರಾಕ್ಷದಂತಿರುವ ಅವನ ಮುಖವು ಸ್ವಾದಿಷ್ಟವಾಗಿ ತೋರಿತು. ರಮಾಸುಂದರಿಯು ಮಾತ್ರ ಬಾಡಿದ ಕಲಿಕೆಯಂತೆ ವಿಷಾದಾಸ್ಪದಳಾಗಿ ಕಂಡಳು.

"ಹೀಗೇನು ? ಈ ಮಾತು ನನಗೆ ನೀನು ಮೊದಲೆ ಯಾಕೆ ತಿಳಿಸಲಿಲ್ಲ ? " ಎಂದು ಜಾನಕೀದೇವಿಯರು ಇಂದುಮತಿಯನ್ನು ಕುರಿತು ಮಾತಾಡಿದರು.

"ಆ ಮಾತಿಗೆ ನೀವು ಒಪ್ಪುವಿರೋ ಕೋಪಿಸಿಕೊಳ್ಳುವಿರೋ ನನಗೆಂತು ತಿಳಿಯಬೇಕು ? ಕೋಪಿಸಿಕೊಂಡರೆ ಅನರ್ಥವಾಗುವದೆಂದು ತಿಳಿದು ನಾನು ಹಲ್ಲಲ್ಲಿ ನಾಲಿಗೆಯನ್ನಿಟ್ಟುಕೊಂಡು ಸುಮ್ಮನಿದ್ದೆನು. "

"ಹಾ:! ಹಾ:! ಹಾ:! ರಮಾಸುಂದರಿಯು ಧ್ರುವರಾಯನ ಪ್ರಾಯಶ್ಚಿತ್ತವನ್ನು ಚನ್ನಾಗಿ ಮಾಡಿದಳು. " ಎಂದು ದೇವಿಯವರು ನಕ್ಕು ನುಡಿದರು.

"ಅಮ್ಮನವರೆ, ವಿನೋದವು ಹಾಗಿರಲಿ. ಇನ್ನು ಮೇಲೆ ಮಾಡುವ ಬಗೆಯೇನು ? ರಮಾಸುಂದರಿಯು ಎರಡು ಬಗೆಯ ಚಿಂತೆಯಿಂದ ಸೊರಗುತ್ತಿರುವಳು ಕಾಣಿರಾ ? "

"ಓಹೋ, ವೆಂಕಟೇಶ್ವರನಿಗೆ ಕಲ್ಲಿಲೊಗೆದ ಪದ್ಮಾವತಿಯು ಈಗ ಆತನ ಪಾದಗಳನ್ನು ನಂಬಲು ಒಪ್ಪಿರುವಳೆ ? "

"ಒಪ್ಪದೆ ಪದ ಹಾಡುವಳು."

ಜಾನಕೀದೇವಿಯರು ಗಂಟೆಯನ್ನು ಬಾರಿಸಿ ಜವಾನನನ್ನು ಕರೆದು "ಅಖಾಯ್, ಪ್ರೊಫೆಸರ್ ಧ್ರುವರಾಯರನ್ನು ನಾನೀಗಲೆ ಕರೆದಿರುವೆನೆಂದು ಹೇಳಿ ಬೇಗನೆ ಕರಕೊಂಡು ಬಾ" ಎಂದು ಆಜ್ಞಾಪಿಸಿದರು.

ಧ್ರುವರಾಯನು ಬಂದು ಆ ಮಾತೆಯ ಬಳಿಯಲ್ಲಿ ವಿನಯದಿಂದ ನಿಂತ ಬಳಿಕ,

"ಪಂಡಿತ ಮಹಾಶಯ, ನಿನ್ನ ಹಿತಕ್ಕಾಗಿ ನಿನ್ನ ಪತ್ನಿಯು ನಿನಗೊಂದು ಬಿರಿನುಡಿಯಾಡಿದರೆ ನೀನು ಅವಳನ್ನು ಕ್ಷಮಿಸುವಿಯಲ್ಲವೆ?" ಎಂದು ಜಾನಕೀದೇವಿಯರು ಕೇಳಿದರು.

"ಸಹಜವಾದ ಮಾತಿದು. ಆದರೆ ನನಗೆಲ್ಲಿಯ ಪತ್ನಿಯು?"

"ರಮಾಸುಂದರಿ, ಕೇಳಿದಿಯಾ ಈ ಪ್ರೊಫೆಸರರು ನಿನ್ನ ಅನುನಯವನ್ನು ಮನ್ನಿಸುವದಿಲ್ಲ. ನಿನಗಾದರೂ ಏನು ಅಡಗಾಣಿಸಿನೆ, ಅಷ್ಟೇಕೆ ಆತುರಳಾಗಿರುವಿ?" ಎಂದು ಜಾನಕೀದೇವಿಯರು ವಿನೋದ ಮಾಡಿ ನುಡಿದರು. ಧ್ರುವರಾಯನ ಮುಖವು ಸಂತೋಷದಿಂದ ಹಿಗ್ಗಿ ಇಮ್ಮಡಿಯಾಯಿತು. ಇಂದ್ರಜಾಲದ ಮಂತ್ರದಿಂದಲೋ ಎಂಬಂತೆ ರಮಾಸುಂದರಿಯ ಬಾಡಿದ ಮುಖವು ಪ್ರಫುಲ್ಲಿತವಾದ ಕಮಲದಂತೆ ಕಂಗೊಳಿಸಿತು.

"ಮಾತಾಜೀ, ರಮಾಸುಂದರೀಬಾಯಿಯವರು ಪದವೀಧರೆಯರಾಗಿ ಈ ಕಾಲೇಜವನ್ನು ಬಿಟ್ಟಬಳಿಕ ನನ್ನ ಪ್ರಾರ್ಥನೆಯ ವಿಚಾರ ಮಾಡುವರಂತೆ!" ಎಂದು ನುಡಿದು ಧ್ರುವರಾಯನು ಲಜ್ಜಾವನತಮುಖಿಯಾಗಿ ನಿಂತಿರುವ ತನ್ನ ರಮಣಿಯ ಮುಖವನ್ನು ನೋಡಿ ನಕ್ಕನು.

"ಅಹುದೇನು ರಮಾಸುಂದರೀ? ವಿವಾಹಿತರಾಗಿ ಕಾಲೇಜಗಳಲ್ಲಿ ಕಲಿಯುತ್ತಿರುವ ಪುರುಷರೆಷ್ಟಿರುವರು ನಿನಗೆ ಗೊತ್ತುಂಟೇನು? ಹೆಂಗಸರೇಕೆ ವಿವಾಹಿತರಾಗಿ ಕಾಲೇಜದಲ್ಲಿರಕೂಡದು?" ಎಂದು ಜಾನಕೀದೇವಿಯರು ಕೇಳಿದರು.

ಧ್ರುವ ರಮಾಸುಂದರಿಯರ ವಿವಾಹವು ಸಾರ್ವಜನಿಕ ಮಹೋತ್ಸವದಂತೆ ನ ಭೂತೋ ನ ಭವಿಷ್ಯತಿಯಾಗಿ ವಿಜೃಂಭಣಗೊಂಡಿತು. ಆ ಕಾಲೇಜದ ವ್ಹಾಯಿಸ್ ಪ್ರಿನ್ಸಿಪಲ್ಲರಾದ ಧ್ರುವರಾಯರ ಹೆಂಡತಿಯು ವಿದ್ಯಾಭ್ಯಾ

ಸಕ್ಕೆ ಆತಂಕವೆ? ಜೋಯಿಸನ ಮಗನ ಮದುವೆಗೆ ಮುಹೂರ್ತ ತೆಗೆದು ಕೊಡುವವರನ್ನು ಹುಡುಕಿದ್ದುಂಟೆ?

ಶಾರದಾಪ್ರಸಾದ ಕಾಲೇಜದ ಭಾವೀ ನಿಯಾಮಕರಾದ ಪ್ರೊಫೆಸರ್ ಧ್ರುವರಾವ್ ಹಾಗೂ ರಮಾಸುಂದರೀದೇವಿಯವರು ಡಾಕ್ಟರ್ ಚೌಧರಿ ಹಾಗೂ ಜಾನಕೀದೇವಿಯವರಿಗೆ ಸಮಾನಾಧಿಕಾರಿಗಳಾಗಿದ್ದುಕೊಂಡು ಆ ವೃದ್ಧ ದಂಪತಿಗಳ ಮೇಲಿನ ಭಾರವನ್ನು ಸಾವಕಾಶವಾಗಿ ಇಳಿಸುತ್ತಲೂ ಉಚ್ಚ ಪ್ರತಿಯ ಶಿಕ್ಷಣದೊಂದಿಗೆ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಉಚ್ಚ ಪ್ರತಿಯ ಧಾರ್ಮಿಕ ಹಾಗೂ ನೈತಿಕ ಬೋಧಾಮೃತವನ್ನು ನೀಡುತ್ತಲೂ ದೇಶದ ರಾಜಕೀಯ ಸಾಮಾಜಿಕ ಉನ್ನತಿಗಾಗಿ ಶ್ರಮಪಡುತ್ತಲೂ ಶಾರದಾ ಪ್ರಸಾದ ಕಾಲೇಜದ ಹೆಸರನ್ನು ಅಜರಾಮರವಾಗಿ ಮಾಡಿದರು.

# ಅಲಿಪ್ತವಾದ ಪ್ರೇಮಸಂಯೋಗ ೭ ೭ ೭

ಮಹಾಮಹೋಪಾಧ್ಯಾಯರಾದ ವಿದ್ಯಾಧೀಶ ಪಂಡಿತರು ಸ್ನಾನ ತೀರಿಸಿಕೊಂಡು ಇನ್ನು ದೇವತಾರ್ಚನಕ್ಕೆ ಕೂಡತಕ್ಕವರು. ದೇವತಾಯತನವನ್ನು ಪ್ರವೇಶ ಮಾಡುತ್ತ ಮಾಡುತ್ತ ಅವರು "ಪ್ರದ್ಯುಮ್ನನೆಲ್ಲಿ ಕಾಣುವದಿಲ್ಲ?" ಎಂದು ತಮ್ಮ ಪತ್ನಿಯಾದ ನರಸಮ್ಮನನ್ನು ಕೇಳಿದರು.

"ನಾನೇನು ಬಲ್ಲೆ? ಎಲ್ಲಿಗಾದರೂ ಮೆರೆಯಲಿಕ್ಕೆ ಹೋಗಿರುವನಾದೀತು," ಎಂದು ನರಸಮ್ಮನು ತಿರಸ್ಕಾರದಿಂದ ನುಡಿದಳು.

ಮಹಾಮಹೋಪಾಧ್ಯಾಯರ ಪೂಜೆಯು ಎರಡು ಗಳಿಗೆಯ ವರೆಗೆ ಒಳ್ಳೇ ವಿಧಾನಪೂರ್ವಕವಾಗಿ ನಡೆಯಿತು. ಒಬ್ಬ ಶಿಷ್ಯನು ಗಂಧಃ ತೇಯುತ್ತಿದ್ದನು, ಮತ್ತೊಬ್ಬನು ಸಾಲುದೀಪಗಳನ್ನು ಹಚ್ಚಿಡುತ್ತಿದ್ದನು. ಪಂಡಿತರು ದೇವರಿಗೆ ತುಲಸಿಯನ್ನು ಏರಿಸುವಾಗ ಮೂರನೆಯವನು ನಾಮಾವಲಿಯನ್ನು ಹೇಳುತ್ತಿದ್ದನು. ಜಾಂಗಟಿ, ಗಂಟೆ, ತಾಲಗಳ ಘನವಾದ ಸಪ್ಪಳದೊಂದಿಗೆ ದೇವರಿಗೆ ಮಂಗಲಾರತಿಯಾದ ಬಳಿಕ ವಿದ್ಯಾಧೀಶರು ಮತ್ತೆ "ಪ್ರದ್ಯುಮ್ನನೆಲ್ಲಿ?" ಎಂದು ಅಡಿಗೆಯವನನ್ನು ಕೇಳಿದರು.

"ಎಲ್ಲಿಗೆ ಹೋಗಿರುವರೋ ಕಾಣೆನು ಸ್ವಾಮಿ. ಪ್ರಹರ ಹೊತ್ತೇರಿದಾಗಿನಿಂದ ಪ್ರದ್ಯುಮ್ನ ಪಂಡಿತರು ಮನೆಯಲ್ಲಿಯೇ ಇಲ್ಲ" ಎಂದು ಅಡಿಗೆಯವನು ಬಹು ವಿನೀತನಾಗಿ ಹೇಳಿದನು.

"ಏನೇ?" ಎಂದು ಹೆಂಡತಿಯನ್ನು ಕುರಿತು "ಏತೇ, ಪ್ರದ್ಯುಮ್ನನ ಸ್ನಾನವಾದರೂ ಆಗಿರುವದೇನು?"

"ಏನಾಗಿದೆಯೋ, ಏನು ಬಿಟ್ಟಿದೆಯೋ. ಇಪ್ಪತ್ತು ವರ್ಷದ ಟೊಣಪನಾದ ನಿಮ್ಮ ಮಗನನ್ನು ಯಾರೂ ಓಡಿಸಿಕೊಂಡು ಹೋಗುವದಿಲ್ಲ ಕಂಡಿರಾ! ಯಾಕೆ ಹಾಗೆ ಸೊಲ್ಲಿಗೊಮ್ಮೆ ಪ್ರದ್ಯುಮ್ನ ಪ್ರದ್ಯುಮ್ನನೆಂದು ಕೂಗುವದು?" ಎಂದು ಪ್ರದ್ಯುಮ್ನನ ಮಲತಾಯಿಯಾದ ನರಸಮ್ಮನು ಕ್ರುದ್ಧಳಾಗಿ ನುಡಿದಳು.

ಪಂಡಿತರು ಸುಮ್ಮನಾದರು. ನೈವೇದ್ಯ ವೈಶ್ವದೇವಗಳಾದ ಬಳಿಕ

ಶಿಷ್ಯರು ಪುಸ್ತಕಗಳನ್ನು ತೆಗೆದುಕೊಂಡು ಪಾಠ ಹೇಳಿಸಿಕೊಳ್ಳಲಿಕ್ಕೆ ಸಿದ್ಧ ರಾಗಿ ಕುಳಿತರು. ಆದರೂ ಪ್ರದ್ಯುಮ್ನನು ಬರಲಿಲ್ಲ. ಪಂಡಿತರು ಚಿಂತಾ ಕುಲರಾಗಿ "ಮಹಿದಾಸ, ಪ್ರದ್ಯುಮ್ನನು ತನ್ನ ಸ್ನೇಹಿತನಾದ ವಿಜಯೀಂದ್ರನ ಮನೆಗೆ ಹೋಗಿರಬಹುದು; ನೋಡಿಕೊಂಡು ಬಾ" ಎಂದು ಓರ್ವ ಶಿಷ್ಯನಿಗೆ ಆಜ್ಞಾಪಿಸಿದರು. ಪ್ರದ್ಯುಮ್ನನು ವಿಜಯೀಂದ್ರನ ಮನೆಯಲ್ಲಿ ಭೋಜನ ತೀರಿಸಿಕೊಂಡು ಅವನೊಡನೆ ಎಲ್ಲಿಯೋ ಹೊರಗೆ ಹೋದನೆಂಬ ವರ್ತಮಾನ ವನ್ನು ಮಹಿದಾಸನು ತಂದನು. ಏನೋ ವ್ಯತ್ಯಾಸವಿರಬಹುದೆಂದು ನೆನಿಸಿ ಪಂಡಿತರು ವಿಷಣ್ಣರಾಗಿ ಹಾಗೂ ಹೀಗೂ ಪಾಠಪ್ರವಚನ ಭೋಜನಾದಿ ಗಳನ್ನು ತೀರಿಸಿಕೊಂಡವರೇ ವಿಜಯೀಂದ್ರನ ಮನೆಗೆ ಹೋದರು. ಅತಿ ತೇಜಸ್ವಿಗಳಾದ ಆ ಮಹಾಮಹೋಪಾಧ್ಯಾಯರು ಹೀಗೆ ತನ್ನ ಮನೆಗೆ ನಡೆದು ಬಂದಿರುವದನ್ನು ಕಂಡು ವಿಜಯೀಂದ್ರನು ಚಕಿತನಾಗಿ "ಮಹಾ ಸ್ವಾಮಿಯವರು ಹೀಗೆ ನನ್ನಂಥ ಅಲ್ಪನ ಮನೆಗೆ ದಯಮಾಡಿದ ಕಾರಣ ವೇನು ?" ಎಂದು ವಿಜಯೀಂದ್ರನು ವಿನಯದಿಂದ ನಮಸ್ಕರಿಸಿ ಬೆಸ ಗೊಂಡನು.

"ವಿಜಯೀಂದ್ರ, ನಮ್ಮ ಪ್ರದ್ಯುಮ್ನನ ಸಮಾಚಾರವೇನು ? ಇಂದು ನಿಮ್ಮಲ್ಲಿ ಯಾಕೆ ಭೋಜನ ಮಾಡಿದನು ? ಈಗೆಲ್ಲಿರುವನು ?" ಮುಂತಾದ ಅನೇಕ ಪ್ರಶ್ನಗಳನ್ನು ಪಂಡಿತರು ಕೇಳಿದರು.

"ಮಹಾತ್ಮರ ಮುಂದೆ ಸುಳ್ಳಾಡುವದು ಸರಿಯಲ್ಲ. ನರಸಮ್ಮನ ವರು ಪ್ರದ್ಯುಮ್ನನಿಗೆ ನಿತ್ಯದಲ್ಲಿಯೂ ಕಿಟಿಕಿಟಿ ಮಾಡುತ್ತಿರುವರು. ಪ್ರದ್ಯುಮ್ನ ನಂದೇ ಅದನ್ನೆಲ್ಲ ಸಹಿಸುತ್ತ ಬಂದನು. ಈವತ್ತಿನ ದಿವಸವಂತೂ ಅವರು ಪ್ರದ್ಯುಮ್ನನಿಗೆ ಮಾಡಿದ ಅಪಮರ್ಯಾದೆಯನ್ನು ನೋಡಿ ನನಗೆ ಕೂಡ ಅತಿ ಶಯವಾದ ಖೇದವಾಯಿತು."

"ಏನಾಯಿತು ವಿಜಯೀಂದ್ರ ?" ಎಂದು ವಿದ್ಯಾಧೀಶರು ವ್ಯಾಕುಲ ರಾಗಿ ಕೇಳಿದರು.

"ಉತ್ತಮ ತರಗತಿಯಲ್ಲಿ ಬೀ. ಏ. ಪರೀಕ್ಷೆ ಕೊಟ್ಟವನೂ, ಶ್ರೀಮಂ ತರೂ, ಪ್ರತಿಷ್ಠಿತರೂ ಆದವರ ಮಗನೂ ಆದ ಪ್ರದ್ಯುಮ್ನನಿಗೆ ನಿಷ್ಕಾರಣ ವಾಗಿ ಮಾಡಿದ ಅಪಮಾನದ ಸಹನವಾದೀತೇ ?"

"ಆದದ್ದಾದರೂ ಏನು ಹೇಳಬಾರದೆ ?"

"ಪ್ರಾತಃಕಾಲದಲ್ಲಿ ನಾನೂ ಪ್ರದ್ಯುಮ್ನನೂ ತಮ್ಮ ಮನೆಯಲ್ಲಿ ಕಾಫಿ ಮಾಡಿದೆವು. ಪ್ರದ್ಯುಮ್ನನು ಒಳಗಿನಿಂದ ಹಾಲು ತರುತ್ತಿರುವಾಗ 'ಯಾರನ್ನು ಕೇಳಿ ಹಾಲು ತೆಗೆದುಕೊಂಡೆ ?' ಎಂದು ಸರಸಮ್ಮನವರು ಗದ್ದರಿಸಿ ನುಡಿದವರೇ ಪ್ರದ್ಯುಮ್ನನ ಕೈಯಲ್ಲಿಯ ಹಾಲಿನ ಪಾತ್ರೆಯನ್ನು ಕಾಲಿಲೊದ್ದು ಕೆಡವಿದರು. ಪಾಪ, ಪ್ರದ್ಯುಮ್ನನು ಹಾಗೆಯೇ ಎದ್ದವನೇ ನನ್ನ ಮನೆಗೆ ಬಂದು ಭೋಜನ ತೀರಿಸಿಕೊಂಡ ಬಳಿಕ, ಅವನು ಕಲಕತ್ತೆಗೆ ಹೋಗುವ ಸಿದ್ಧತೆ ಮಾಡಿಕೊಳ್ಳುವ ಹವಣಿಕೆಯಲ್ಲಿರುವನು."

ಈ ಸಮಾಚಾರವನ್ನು ಕೇಳಿ ಪರಮ ಸಾತ್ವಿಕರೂ ಪುತ್ರವತ್ಸಲರೂ ಆದ ಆ ಮಹಾಮಹೋಪಾಧ್ಯಾಯರ ಕಣ್ಣುಗಳಲ್ಲಿ ದುಃಖಾಶ್ರುಗಳೊತ್ತಿ ಬಂದವು.

"ವಿಜಯೀಂದ್ರ, ಹೇಗಾದರೂ ಮಾಡಿ ಪ್ರದ್ಯುಮ್ನನನ್ನು ನಮ್ಮ ಮನೆಗೆ ಕರೆದುಕೊಂಡು ಬಾ. ನಾವು ನಾಲ್ಕು ಸಮಾಧಾನದ ಮಾತು ಹೇಳಿ ಆ ಮಗುವನ್ನು ಒಡಂಬಡಿಸುವೆವು."

"ತಮ್ಮ ಆಜ್ಞೆಯನ್ನು ಅವನಿಗೆ ತಿಳಿಸುವೆನು. ನನ್ನ ಮಾತಿಗೆ ಅವನು ತಮ್ಮ ಮನೆತನಕ ಬರುವನೋ ಇಲ್ಲವೊ ಹೇಳಲಾಗದು. ಪ್ರದ್ಯುಮ್ನನು ಅತಿಶಯವಾಗಿ ಸಂತಪ್ತನಾಗಿರುವನು."

"ಏನೇ ಆಗಲಿ, ನಮ್ಮನ್ನು ಕಾಣದೆ ಕಲಕತ್ತೆಗೆ ಹೋಗಬೇಡವೆಂದು ಅವನಿಗೆ ನೀನು ಹೇಳುವಿಯಷ್ಟೆ ?" ಎಂದು ಮಗನ ಮೇಲಿನ ವ್ಯಾಮೋಹಕ್ಕಾಗಿ ವಿದ್ಯಾಧೀಶರು ದೀನರಂತೆ ಕೇಳಿದರು.

ಮೂರನೆಯ ಪ್ರಹರವು ವಿಾರಿ ಹೋಗಿದ್ದರೂ ಬೇಸಿಗೆಯ ಬಿಸಿಲಿನ ಪ್ರಖರತೆಯು ಎಳ್ಳಷ್ಟಾದರೂ ಕಡಿಮೆಯಾಗಿದ್ದಿಲ್ಲ.........ಪುರ ಪಟ್ಟಣದ ರೇಲ್ವೇ ಸ್ಟೇಶನದ ಅಂಗಣದಲ್ಲಿ ಅಧಿಕಾರಿಗಳು ಒಳ್ಳೇ ಜೋಕೆಯಾಗಿ ಬೆಳಸಿದ ವೃಕ್ಷಗಳ ಛಾಯೆಯಲ್ಲಿದ್ದ ಬೆಂಚಿನ ಮೇಲೆ ಉದ್ವಿಗ್ನನಾದ ತರುಣನೋರ್ವನು ಹಣೆಗೆ ಕೈಯಿಟ್ಟುಕೊಂಡು ಕುಳಿತಿದ್ದನು. ಅವನು ಪ್ರದ್ಯುಮ್ನನೇ. ರೂಪಸಂಪನ್ನನೂ ದೃಢಾಂಗನೂ ತರುಣನೂ ಆಗಿರುವ ಪ್ರದ್ಯುಮ್ನನು ಮನಸ್ಸಿನ ಉದ್ವೇಗಕ್ಕಾಗಿಯೂ ಬಿಸಿಲಿನ ತಾಪಕ್ಕಾಗಿಯೂ ತ್ರಸ್ತನಾಗಿ ತಲೆ

ಹಿಡುಕೊಂಡು ಕುಳಿತಿದ್ದನು. ಪ್ರದ್ಯುಮ್ನನು ಎಂಟು ವರುಷದವನಿರುವಾಗಲೇ ಅವನ ತಾಯಿಯು ತೀರಿಕೊಂಡಿದ್ದಳು. ಅಪ್ರಬುದ್ಧನಾದ ಆ ಪೋರನಿಗೆ ಮಾತೃವಿಯೋಗದ ದುಃಖವೆಲ್ಲಿ? ಯಾರು ಏನು ಆಡಿದರೂ ಅದರ ವ್ಯತ್ಯಾಸವು ಅವನಿಗಿಲ್ಲ. ಒಳ್ಳೇ ಕೂಳು ನೀಡಿದರೂ ಅದು ಅವನಿಗೆ ಸ್ವಾದಿಷ್ಟವೇ, ಕೆಟ್ಟ ಕೂಳು ನೀಡಿದರೂ ಸ್ವಾದಿಷ್ಟವೇ. ಮಲತಾಯಿಯು ಕ್ರುದ್ಧಳಾಗಿ ನಾಲ್ಕು ಪೆಟ್ಟು ಹೊಡೆದರೂ ಅದರ ಲಕ್ಷ್ಯ ಅವನಿಗಿಲ್ಲ. ತಂದೆಯವರು ಪ್ರೇಮದಿಂದ ಅವನನ್ನು ಮುದ್ದಿಸಿದ್ದರ ಸ್ವಾರಸ್ಯವೂ ಅವನಿಗೆ ತಿಳಿಯುತ್ತಿದ್ದಿಲ್ಲ. ಈ ದಿವಸ ಮಾತ್ರ ವಿಶ್ವವಿದ್ಯಾಲಯದ ಪದವೀಧರನಾದ ಪ್ರದ್ಯುಮ್ನನಿಗೆ ಹಡೆದ ತಾಯಿಯ ನೆನಪಾಗಿ ಅವನು ಕಣ್ಣು ತುಂಬಾ ನೀರು ತಂದನು. ಅನೇಕರಿಗೆ ಆಶ್ರಯವನ್ನು ಕೊಡಲು ಸಮರ್ಥನಾಗಿದ್ದ ಆ ತರುಣನು ತಾಯಿ ಇಲ್ಲದ್ದಕ್ಕಾಗಿ ತಾನು ನಿರಾಶ್ರಿತನಾದೆನೆಂದು ವ್ಯಸನಪಟ್ಟನು. ತಂದೆಯವರು ವಿದ್ಯಾದಾತೃಗಳು, ಮಮತಾಳುಗಳು, ತನ್ನಭೀಷ್ಟೆಯನ್ನು ಯಥೇಷ್ಟವಾಗಿ ಪೂರೈಸುವರು ಸರಿ; ಆದರೆ ತಾಯಿಲ್ಲದವನಿಗೆ ಗೃಹಸುಖವಿಲ್ಲ. ಪ್ರದ್ಯುಮ್ನನು ಹೀಗೆ ವಿಚಾರದಲ್ಲಿ ನಿಮಗ್ನನಾಗಿರುವಾಗ ವಿದ್ಯಾಧೀಶ ಪಂಡಿತರು ಅತಿ ತರಾತುರಿಯಿಂದ ಮಗನನ್ನು ಹುಡುಕುತ್ತೆ ಹುಡುಕುತ್ತೆ ಅವನೆದುರಿನಲ್ಲಿ ಬಂದು ನಿಂತರು. ಪಿತಾಪುತ್ರರ ದೃಷ್ಟಿಯೊಂದಾದ ಕೂಡಲೆ ಉಭಯರ ಕಣ್ಣುಗಳಲ್ಲಿಯೂ ಅಶ್ರುಗಳು ತುಂಬಿಬಂದವು. ಪ್ರದ್ಯುಮ್ನನು ಚಟ್ಟನೆ ತನ್ನ ಸ್ಥಾನವನ್ನು ಬಿಟ್ಟೆದ್ದು ತಂದೆಯವರ ಕಾಲ್ಗೆರಗಿ ಅಧೋಮುಖನಾಗಿ ನಿಂತುಕೊಂಡನು. ವಿದ್ಯಾಧೀಶರು ಮಗನಿಗೆ ಮನೆಗೆ ಬಾರೆಂದು ಎಷ್ಟು ಹಿರಿಯಾಗಿ ಹೇಳಿದರೂ ಪ್ರದ್ಯುಮ್ನನು ಮಾತಾಡದೆ ಸುಮ್ಮನೆ ನಿಂತುಕೊಂಡನು.

"ಆಗಲಿ, ಇದೊಂದು ನೆವದಿಂದ ನೀನು ದೇಶಸಂಚಾರ ಮಾಡಿದೆಯಾದರೆ ನಿನಗೆ ಜಗತ್ತಿನ ಅನುಭವವು ಹೆಚ್ಚಾಗಿ ಬರುವದು. ಆದಷ್ಟು ಬೇಗನೆ ಮರಳಿ ಊರಿಗೆ ಬಾ. ನಿನ್ನ ಲಗ್ನಮಾಡಿ ನಿನ್ನನ್ನು ಪ್ರತ್ಯೇಕವಾಗಿ ಇಡುತ್ತೇವೆ. ನೀನು ಸಂಸಾರಸುಖದಲ್ಲಿದ್ದದ್ದು ಕಂಡರೆ ಸಾಕು. ಈ ಸಹಸ್ರ ರೂಪಾಯಿಗಳ ನೋಟು ತೆಗೆದುಕೋ. ಮತ್ತೆ ಬೇಕಾದರೆ ಪತ್ರ ಬರೆ, ಕಳಿಸಿಕೊಡುತ್ತೇವೆ. ನೀನು ಪರಮ ಸದ್ಗುಣಿಯೂ, ನಿರ್ವ್ಯಸನಿಯೂ, ವಿನೀತನೂ, ಸ್ವಕುಲಾಚಾರಗಳ ಅಭಿಮಾನಿಯೂ ಆಗಿರುವದರಿಂದ ನೀನೆಲ್ಲಿಗೆ

ಹೋದರೂ ಮಾನ್ಯನೇ ಆಗುವಿ. ನಿನ್ನ ವಿಷಯವಾಗಿ ನನಗೆ ಆಲೋಚನವಿಲ್ಲ. ವೃದ್ಧಾಪ್ಯದಲ್ಲಿ ನೀನಿಲ್ಲದೆ ನಮ್ಮ ಗತಿಯೇನಾಗುವದೋ ಕಾಣೆವು. ತಿಳಿದವನೇ ಇರುವಿ. ಹೆಚ್ಚಿಗೇನು ಹೇಳೋಣ? " ಎಂದು ನುಡಿದು ವರ್ಚಸ್ವಿಗಳಾದ ಆ ಪಂಡಿತರು ಮತ್ತೆ ಕಣ್ಣಿಗೆ ನೀರುತಂದರು.

ತೀರ್ಥರೂಪರ ನಿಃಸೀಮವಾದ ವಾತ್ಸಲ್ಯವನ್ನು ಕಂಡು ಪ್ರದ್ಯುಮ್ನನ ಅಂತಃಕರಣವಾದರೂ ಉಕ್ಕೇರಿ ಬಂದಿತು. ಕಂಠವು ಬಿಗಿದದ್ದರಿಂದ ಅವನ ಬಾಯಿಯಿಂದ ಮಾತುಗಳೇ ಹೊರಡಲೊಲ್ಲವು. ಪಳಪಳನೆ ಉದುರುತ್ತಿರುವ ಕಣ್ಣೀರಿನ ದೊಡ್ಡದೊಡ್ಡ ಹನಿಗಳೇ ಅವನ ಉತ್ತರಗಳಾದವು.

" ಪ್ರದ್ಯುಮ್ನ, ಯೋಚಿಸಬೇಡ. ನಾವು ಸಂತೋಷದಿಂದ ನಿನಗೆ ಸಂಚಾರಕ್ಕೆ ಹೋಗಲು ಅಪ್ಪಣೆ ಕೊಡುತ್ತೇವೆ. ಸದ್ಯಕ್ಕೆ ವರ್ಷಾರು ತಿಂಗಳ ನೀನು ಯಥಾಸುಖವಾಗಿ ತಿರುಗಾಡಿ ಬರುವದೇ ವಿಹಿತವು. ಹೋಗಿ ಬಾ" ಎಂದು ಹೇಳಿ ತಂದೆಯವರು ಮಗನನ್ನು ಹರಿಸಿದರು.

* * * *

" ಪ್ರದ್ಯುಮ್ನ ಪಂಡಿತ, ಮುಂಬಯಿ ಪ್ರೊಫೆಸರ್ ಎಸ್‌ಲಾಯಿಟನ್‌ಮೆಂಟ ಸಾಹೇಬರು ನಿಮ್ಮ ವಿಷಯವಾಗಿ ಒಳ್ಳೇ ಗೌರವದ ಅಭಿಪ್ರಾಯವನ್ನು ತಳೆದದ್ದು ಆಶ್ಚರ್ಯವಲ್ಲ. ನೀವು ನನ್ನ ಬಳಿಯಲ್ಲಿ ಅರ್ಥಶಾಸ್ತ್ರವನ್ನು ಕಲಿಯಲಾರಂಭಿಸಿ ನಾಲ್ಕೇ ತಿಂಗಳುಗಳಾಗಿದ್ದರೂ ಒಮ್ಮೊಮ್ಮೆ ನೀವು ಮಾಡುತ್ತಿರುವ ನೈಪುಣ್ಯದ ಪೂರ್ವಪಕ್ಷಗಳಿಗೆ ಸಮರ್ಪಕವಾದ ಉತ್ತರಗಳನ್ನು ಕೊಡಬೇಕಾದರೆ ನನಗೆ ಪರಿಶ್ರಮ ಮಾಡಬೇಕಾಗುತ್ತದೆ. ಈಗ ನೀವು ಗಳಿಸಿಕೊಂಡಷ್ಟು ಜ್ಞಾನದಿಂದೆ ಅರ್ಥಶಾಸ್ತ್ರ ಪ್ರವೀಣರೆಂದು ನಿಮ್ಮನ್ನು ಕರೆಯಲು ಅಭ್ಯಂತರವಿಲ್ಲ. ಇನ್ನು ಮುಂದೆ ನಾನು ನಿಮಗೆ ಅರ್ಥಶಾಸ್ತ್ರದ ಗುರುವೂ ನೀವು ನನಗೆ ಸಂಸ್ಕೃತಾಧ್ಯಾಪಕರೂ ಆಗಿರತಕ್ಕದ್ದು. ನಿಮ್ಮ ತಂದೆಯವರು ಅದ್ವಿತೀಯರಾದ ಪಂಡಿತರೆಂದು ತರ್ಕವಾಗೀಶರು ಹೇಳುತ್ತಿರುವರು. ಅವರಲ್ಲಿ ಕಲಿತವರಾದ ನೀವು ಕೂಡ ಸಂಸ್ಕೃತದಲ್ಲಿ ಒಳ್ಳೇ ಗಟ್ಟಿಗರೆಂದು ನಮ್ಮ ಕಾಲೇಜದ ಶಾಸ್ತ್ರಿಗಳು ಒಪ್ಪಿಕೊಂಡಿದ್ದಾರೆ" ಎಂದು ಕಲಕತ್ತಾ ಕಾಲೇಜದ ಪ್ರಿನ್ಸಿಪಾಲರೆಂದರು.

ಹೀಗೆ ಗುರುಶಿಷ್ಯರೀರ್ವರೂ ಪರಸ್ಪರರನ್ನು ಆದರಿಸುತ್ತ ತಮ್ಮ ತಮ್ಮ

ವ್ಯಾಸಂಗಗಳನ್ನು ನಡಿಸುತ್ತಿ ಆನಂದದಲ್ಲಿದ್ದರು. ಆದರೆ ಇನ್ನು ಮುಂದೆ ಪ್ರದ್ಯುಮ್ನನ ಆಯುಷ್ಯಕ್ರಮದಲ್ಲಿ ವಿಲಕ್ಷಣವಾದ ಕ್ರಾಂತಿಯಾಗತಕ್ಕದ್ದಿತ್ತು.

ತ್ರಿಗರ್ತ ಸಂಸ್ಥಾನಾಧಿಪತಿಗಳಾದ ಮಹಾರಾಜಾ ನಹುಷಸಿಂಹ ಬಹಾದ್ದರವರು ಕಲಕತ್ತೆಗೆ ಬಂದಿದ್ದು ಹಿಂದುಸ್ಥಾನದಲ್ಲಿಯ ಇತಿಹಾಸ ಪ್ರಸಿದ್ಧವಾದ ಸ್ಥಳಗಳನ್ನೂ, ಪರಮ ರಮಣೀಯವಾಗಿರುವ ಬೇರೆ ಅನೇಕ ಸ್ಥಾನಗಳನ್ನೂ ನೋಡುವದಕ್ಕಾಗಿ ಅವರು ಸಕುಟುಂಬವಾಗಿ ಹೊರಡಬೇಕಾದ್ದರಿಂದ ಒಬ್ಬ ಚತುರನೂ, ವಿನೀತನೂ, ಕಾರ್ಯದಕ್ಷನೂ, ಒಳ್ಳೇ ವಿಶ್ವಾಸದವನೂ ಆಗಿರುವ ವ್ಯವಸ್ಥಾಪಕನ ಅವಶ್ಯಕತೆ ಅವರಿಗಿತ್ತು. ಕಲಕತ್ತಾ ಕಾಲೇಜದ ಪ್ರಿನ್ಸಿಪಾಲರ ಬಳಿಗೆ ಹೋಗಿ ಮಹಾರಾಜರು ತಮಗೊಬ್ಬ ವ್ಯವಸ್ಥಾಪಕನನ್ನು ಗೊತ್ತುಮಾಡಿಕೊಡಿರೆಂದು ಕೇಳಲಾಗಿ, ಅವರು ಪ್ರದ್ಯುಮ್ನನ ಗುಣಾನುವಾದವನ್ನು ಬಹುಪರಿಯಾಗಿ ಮಾಡಿ ಅವನನ್ನು ಹೊರತುಪಡಿಸಿ ಇನ್ನೊಬ್ಬ ಯೋಗ್ಯನಾದ ವ್ಯವಸ್ಥಾಪಕನು ತಮಗೆ ಸಿಕ್ಕನೆಂದು ಪ್ರಿನ್ಸಿಪಾಲರು ಮಹಾರಾಜರಿಗೆ ಹೇಳಿದರು.

ಅನಾಯಾಸವಾಗಿ ದೇಶಸಂಚಾರ ಮಾಡುವ ಸುಖತರವಾದ ಸಾಧನವು ತನಗೆ ಪ್ರಾಪ್ತವಾಗಿರಲು ಪ್ರದ್ಯುಮ್ನನು ಸಂಡಲೆ ಒಪ್ಪಿಕೊಂಡು, ತ್ರಿಗರ್ತದ ಮುಖ್ಯ ಪಟ್ಟಣವಾದ ಶೃಂಗಾರಪುರಿಗೆ ಅವನು ಮಹಾರಾಜರೊಡನೆ ನಡೆದನು.

ಮಹಾರಾಜ ನಹುಷಸಿಂಹರ ಕುಟುಂಬದಲ್ಲಿ ಅವರ ರಾಣಿಯವರಾದ ಪ್ರಮಾದ ಹೃದಯಾದೇವಿಯರೂ, ನವತರುಣಳಾದ ರಾಜಕುಮಾರಿ ಪ್ರೇಮಸುಂದರಿಯೂ, ಹನ್ನೆರಡು ವರುಷದ ಚಿಕ್ಕ ಯುವರಾಜನಾದ ರಘುವೀರಸಿಂಹನೂ ಹೀಗೆ ನಾಲ್ಕೇ ಜನರಿದ್ದರು.

ಮಹಾರಾಜರಿಗೆ ಮಾತುಕಥೆಯಾಡುವಷ್ಟು ಮಾತ್ರಕ್ಕೆ ಇಂಗ್ಲಿಷ ಬರುತ್ತಿದ್ದರೂ ಅವರು ಬಹುಶ್ರುತರೂ, ಒಳ್ಳೇ ವ್ಯವಹಾರಜ್ಞಾನಿಗಳೂ, ಉದಾರವಾದ ಮನಸ್ಸಿನವರೂ, ವಿದ್ಯಾಭಿಮಾನಿಗಳೂ ಆಗಿದ್ದರು. ರಾಣಿಯವರಾದರೂ ಸುಸಂಸ್ಕೃತವಾದ ವಿಚಾರಗಳುಳ್ಳವರೂ, ಆದರಶೀಲರೂ ಹಿಂದೀ ಭಾಷೆಯಲ್ಲಿ ಓದುಬರೆಯಲು ಬಲ್ಲವರೂ ಆಗಿದ್ದರು.

ಕುಮಾರಿ ಪ್ರೇಮಸುಂದರಿಗೆ ಅವಳ ತೀಕ್ಷ್ಣವಾದ ಬುದ್ಧಿಗೆ ಉಚಿತ

ವಾದ ಶಿಕ್ಷಣವು ದೊರೆತಿತ್ತು. ಅಮೃತರಂಜನರಾಯನೆಂಬ ಪಂಡಿತನ ಮಗಳಾದ ಶಾರದಾರಂಜನೀ ಎಂಬ ವಿದುಷಿಯು ಪ್ರೇಮಸುಂದರಿಗೆ ಶಿಕ್ಷಕಳಾಗಿದ್ದು ಅವಳ ಕೈಯಲ್ಲಿ ಆ ರಾಜಕುಮಾರಿಯು ಇಂಗ್ಲಿಷ್, ಸಂಸ್ಕೃತ ಭಾಷೆಗಳ ಜ್ಞಾನವನ್ನು ಚನ್ನಾಗಿ ಮಾಡಿಕೊಂಡಿರುವದಲ್ಲದೆ ಗಾಯನ, ಚಿತ್ರ ಕಲೆಗಳನ್ನೂ ಇತಿಹಾಸ ನೀತಿಗಳನ್ನಾದರೂ ಚನ್ನಾಗಿ ಪೇಳಿಸಿಕೊಂಡಿದ್ದಳು. ಪ್ರೇಮಸುಂದರಿಯು ನಿಪುಣೆಯೂ ವಿನೋದಿನಿಯೂ ಮಹಾಪುರುಷರಲ್ಲಿ ಭಕ್ತಿಯುಳ್ಳವಳೂ ಆಗಿದ್ದಳು.

ಹೀಗೆ ಐಶ್ವರ್ಯಮಂಡಿತರೂ ವಿದ್ಯಾವಿಭೂಷಿತರೂ ಆಗಿರುವ ಆ ರಾಜಕುಟುಂಬದವರೊಡನೆ ದೇಶಸಂಚಾರವನ್ನು ಮಾಡುವಂಥ ಅಲಭ್ಯ ಲಾಭವು ಪ್ರದ್ಯುಮ್ನನಿಗೆ ದೊರಕಿತು. ಪ್ರದ್ಯುಮ್ನನಂಥ ಘನವಿದ್ವಾಂಸನಾದ ವ್ಯವಸ್ಥಾಪಕನ ಸಮಾಗಮದಿಂದ ರಾಜರ ಸಂಚಾರವು ಸೌಕರ್ಯವುಳ್ಳದ್ದೂ ಜ್ಞಾನಾನಂದಗಳನ್ನೀಯುವದಾಗಿಯೂ ಆಯಿತೆಂಬದರಲ್ಲಿ ಸಂದೇಹವಿಲ್ಲ.

ಇವರು ಅಯೋಧ್ಯಾ, ಪಾಟಲೀಪುತ್ರ, ಕೌಶಾಂಬೀ, ಹಸ್ತಿನಾಪುರ, ಪ್ರತಿಷ್ಠಾನ ಮುಂತಾದ ನಾಮಶೇಷಗಳಾದ ಪ್ರಾಚೀನ ರಾಜಧಾನಿಗಳಲ್ಲಿದ್ದ ಸ್ಥಳಗಳನ್ನೂ, ದಿಲ್ಲಿ, ಆಗ್ರಾ ಮುಂತಾದ ಗತವೈಭವಗಳಾದ ರಾಜಧಾನಿಗಳ ಅವಶೇಷವಾದ ಸೌಂದರ್ಯಗಳನ್ನೂ, ಗಯಾ, ಕಾಶೀ, ಮಥುರಾ ಮುಂತಾದ ಪವಿತ್ರವಾದ ಕ್ಷೇತ್ರಗಳನ್ನೂ, ಬಂಗಾಲ, ಕಾಶ್ಮೀರ ಮುಂತಾದ ಸೃಷ್ಟಿಸೌಂದರ್ಯಪೂರಿತವಾದ ದೇಶಗಳನ್ನೂ ನೋಡುತ್ತ ಸಾವಕಾಶವಾಗಿ ನಡೆದಿದ್ದರು. ಹೋದ ಹೋದ ಸ್ಥಳದ ಇತಿಹಾಸವನ್ನೂ, ಅಲ್ಲಿಯ ಮುಖ್ಯ ಘಟನೆಗಳ ಸಂಗತಿಗಳನ್ನೂ, ಜನರ ನಡೆನುಡಿಗಳ ಪ್ರಗತಿಗಳನ್ನೂ ಪ್ರದ್ಯುಮ್ನನು ಮೊದಲೇ ಸಂಕಲಿಸಿ ಇಟ್ಟು ನಾಳಿನ ಊರಿನ ಸಾಮಾನ್ಯವಾದ ವರ್ಣನೆಯನ್ನು ಇಂದೆಯೇ ತನ್ನ ಯಜಮಾನರ ಕುಟುಂಬದವರಿಗೆ ಹೇಳಿ ಇಡುತ್ತಿದ್ದನು.

ತಾಜಮಹಾಲಿನಂಥ ಅತಿ ರಮಣೀಯವಾದ ಮಹಾಮಂದಿರದ ಶೋಭೆಯನ್ನು ಅವಲೋಕಿಸುವಾಗ ಆಗಲಿ, ಪ್ರಯಾಗದಂಥ ಮಹಾನದಿಗಳ ಸಂಗಮದ ಅಲೌಕಿಕವಾದ ನೋಟವನ್ನು ನೋಡುವಾಗಲಾಗಲಿ, ಅಶೋಕ ಚಕ್ರ

ವರ್ತಿಯ ಶಿಲಾಶಾಸನಗಳನ್ನು ಒಡೆದು ಓದುವಾಗಲಾಗಲಿ ಪ್ರೇಮಸುಂದರಿಯು ಪ್ರದ್ಯುಮ್ನನ ಸಮೀಪದಲ್ಲಿ ನಿಂತು ಅನೇಕ ಪ್ರಶ್ನೆಗಳನ್ನು ಮಾಡಿ ತನ್ನ ಜಿಜ್ಞಾಸೆಯನ್ನು ತೃಪ್ತಿಪಡಿಸಿಕೊಳ್ಳುತ್ತಿದ್ದಳು. ಆಯಾ ಸ್ಥಳಗಳ ವರ್ಣನೆಯನ್ನು ಪೂರ್ವಕವಿಗಳಾದ ಕಾಲಿದಾಸ ಪ್ರಭೃತಿಗಳು ಮಾಡಿದ್ದಾಗಿದ್ದರೆ ಪ್ರದ್ಯುಮ್ನನು ಸಮಯೋಚಿತವಾಗಿ ಆ ಕಾವ್ಯಗಳಲ್ಲಿಯ ಶ್ಲೋಕಗಳನ್ನು ಉದಹರಿಸಿ ಬಹು ರಮ್ಯವಾಗಿ ವರ್ಣಿಸುತ್ತಿದ್ದನು. ಇತಿಹಾಸಕಾರರ ಗ್ರಂಥಗಳಲ್ಲಿಯ ಅವತರಣಿಕೆಗಳನ್ನು ಪ್ರಸಂಗಾನುಸಾರವಾಗಿ ಅವನು ಓದಿಹೇಳುತ್ತಿದ್ದನು. ಅಲ್ಲಲ್ಲಿ ಮೊದಲು ಆಳಿದವರಾದ ರಾಜರ ಚಿತ್ರಗಳುಳ್ಳ ಪುಸ್ತಕಗಳನ್ನು ತೆರೆದು ಅಕಬರ, ಜಹಾಂಗೀರ, ನೂರಜಹಾನ, ಶಿವಾಜಿ, ತೋಡರಮಲ್ಲ, ಜಯಸಿಂಹ ಮುಂತಾದ ಮಹಾತ್ಮರ ಚಿತ್ರಗಳನ್ನು ತೋರಿಸಿ ಅವರವರ ಜೀವನಚರಿತ್ರಗಳನ್ನು ಸಂಕ್ಷಿಪ್ತವಾಗಿ ಹೇಳುವನು.

ಪ್ರದ್ಯುಮ್ನನ ಜ್ಞಾನಭಾಂಡಾರವನ್ನೂ, ಅವನ ವಾಕ್ಚಾತುರ್ಯವನ್ನೂ, ಅವನ ವಿನಯವನ್ನೂ, ತಾರುಣ್ಯದ ಪ್ರಭೆಯಿಂದ ಕೂಡಿದ ಅವನ ಸುಂದರವಾದ ಮುಖದ ವರ್ಚಸ್ಸವನ್ನೂ ಕಂಡು ಅಬಲೆಯಾದ ಪ್ರೇಮಸುಂದರಿಯು ಆಗಾಗ್ಗೆ ಕೌತುಕಪಡುವಳು. ಈ ಅವಲೋಕನಾರ್ಥಿಗಳ ಮೇಳವು ಆಗ್ರಾ ಪಟ್ಟಣದಲ್ಲಿರುವ ಅಕಬರನ ದಿವಾನ್ ಈ ಆಮ್ ವೆಂಬ ಮಂದಿರದಲ್ಲಿ ನಿಂತು ನೋಡುತ್ತಲೂ ಮಾತಾಡುತ್ತಲೂ ಇರುವಾಗ ಪ್ರೇಮಸುಂದರಿಯು ಪ್ರದ್ಯುಮ್ನನನ್ನು ಕುರಿತು, “ ಪಂಡಿತಜೀ, ಈ ಮಂದಿರದಲ್ಲಿ ನಿಮ್ಮನ್ನು ಅಕಬರ ಬಾದಶಹರು ಕಂಡಿದ್ದಾಗಿದ್ದರೆ ಅವರು ನಿಶ್ಚಯವಾಗಿ ನಿಮ್ಮನ್ನು ತಮ್ಮ ವಜೀರನನ್ನಾಗಿ ಮಾಡಿಕೊಳ್ಳುತ್ತಿದ್ದರು, ” ಎಂದು ನುಡಿದು ವಿನೋದ ಮಾಡಿದಳು. ಈ ಚಮತ್ಕಾರವಾದ ಕಲ್ಪನೆಗೆ ಎಲ್ಲರೂ ನಕ್ಕರು. ಹೀಗೆ ಪ್ರದ್ಯುಮ್ನನು ಆ ರಾಜಮನೆತನದವರಿಗೆಲ್ಲರಿಗೂ ಬೇಕಾದವನೂ, ಅವರ ಆದರಕ್ಕೆ ಪಾತ್ರನೂ, ಅವರ ವಿಶ್ವಾಸನಿಧಾನನೂ ಆಗಿದ್ದರಿಂದ ಅವನು ಕಣ್ಣುಮರೆಯಾದರೆ ಅವರ ಮನಸ್ಸಿಗೆ ಸಮಾಧಾನವಿರುತ್ತಿದ್ದಿಲ್ಲ.

ಪ್ರವಾಸವು ತೀರಿದ ಬಳಿಕ ರಾಜಾ ನರಹರಸಿಂಹರು ಪ್ರದ್ಯುಮ್ನನನ್ನು ಅತ್ಯಾಗ್ರಹದಿಂದ ತಮ್ಮ ಕಾರ್ಯದರ್ಶಿಯನ್ನಾಗಿ ಮಾಡಿ ಇಟ್ಟುಕೊಂಡರು. ತಿಂಗಳಾ ಐನೂರು ರೂಪಾಯಿಯ ಸಂಬಳವುಳ್ಳ ಉದ್ಯೋಗವನ್ನು ಬಿಟ್ಟು

ಕೊಡುವದೂ, ರಾಜಕುಟುಂಬದವರೆಲ್ಲರೂ ತನ್ನ ಮೇಲೆ ಮಾಡುತ್ತಿರುವ ಮಮತೆಯನ್ನು ನೆನೆದು, ಅವರ ಮಾತು ಮುರಿಯುವದೂ ಪ್ರದ್ಯುಮ್ನನಿಂದ ಆಗಲಿಲ್ಲ. ಇತ್ತ ತಂದೆಯವರಾದ ವಿದ್ಯಾಧೀಶರು ಅಗ್ರಹದೊಂದಿಗೆ ಮಗನಿಗೆ ಊರಿಗೆ ಬಾರೆಂದು ಬರೆಯುತ್ತಿದ್ದರು. ಪ್ರದ್ಯುಮ್ನನ ವಿವಾಹವನ್ನು ಮಾಡುವ ಕರ್ತವ್ಯದ ಭಾರವು ಅವರ ಮೇಲೆ ದುಃಸಹವಾಗಿ ಕುಳಿತದ್ದರಿಂದ ಅವರು ಅನೇಕ ಜನ ವಧುಗಳ ಭಾವಚಿತ್ರಗಳನ್ನು ತೆಗಿಸಿ ಪ್ರದ್ಯುಮ್ನನ ಒಪ್ಪಿಗೆಗಾಗಿ ಕಳಿಸುತ್ತಿದ್ದರು. ಆದರೆ ಪ್ರಗತಿಯ ಮಾರ್ಗಾನುಗಾಮಿಯಾದ ಪ್ರದ್ಯುಮ್ನನು ತನ್ನ ವಿವಾಹದ ಭಾರವು ಕೇವಲ ತನ್ನ ತಂದೆಯವರ ಮೇಲೆ ಎಳ್ಳಷ್ಟಾದರೂ ಇರದೆ ಆ ಕಾರ್ಯವು ಕೇವಲ ತನ್ನದೇ ಎಂದೂ, ಅದನ್ನು ತನ್ನ ಇಷ್ಟವಿದ್ದಾಗ ತಾನು ನೆರವೇರಿಸತಕ್ಕವನೆಂದೂ ಅಭಿಪ್ರಾಯವನ್ನು ತಿಳಿಸಿದ್ದನು. ಆದಕ್ಕಾಗಿ ತಂದೆಮಕ್ಕಳ ನಡುವೆ ಅಂಚೆತಂತಿಗಳ ದ್ವಾರವಾಗಿ ವಾಗ್ಯುದ್ಧವು ನಡೆದು ಕಡೆಗೆ ವಿದ್ಯಾಧೀಶರೇ ಸೋತವರಾಗಿ ಮಗನೊಡನೆ ಒಪ್ಪಂದ ಮಾಡಿ ಕೊಂಡರು.

ಶೃಂಗಾರಪುರದ ಅರಮನೆಯ ಉಪ್ಪರಿಗೆಯ ಒಂದು ಭಾಗದಲ್ಲಿ ಕಾರ್ಯದರ್ಶಿಯಾದ ಪ್ರದ್ಯುಮ್ನನ ಕಚೇರಿಯಾಗತಕ್ಕದ್ದಾಯಿತು. ಅನಲಸನೂ, ದಕ್ಷನೂ, ಚತುರನೂ ಆದ ಆ ನವತರುಣನಿಗೆ ಕಾರ್ಯಭಾರದ ಬೇಸರವೆಷ್ಟು ಮಾತ್ರವೂ ಆಗಿರಲಿಲ್ಲ. ಬರೆಬರೆಯುವಾಗ ಅವನು ಉತ್ಸಾಹದಿಂದ ಒಮ್ಮೊಮ್ಮೆ ಮಧುರವಾದ ರಾಗ ಮಾಡುವನು. ಒಂದು ಪ್ರಕರಣವನ್ನು ಬರೆದು ಮುಗಿಸಿದ ಕೂಡಲೆ "ನಿಮಗಪ್ಪಣೆ!" ಎಂದು ಆ ಪ್ರಕರಣವನ್ನು ಒತ್ತಟ್ಟಿಗಿರಿಸಿಬಿಡುತ್ತಿದ್ದನು. ದಿನಾಲು ಒಂದು ಪ್ರಹರ ಮಾತ್ರ ದುಡಿದರಾಯಿತು, ಪ್ರದ್ಯುಮ್ನನ ಕೆಲಸವು ಮುಗಿದುಹೋಗುತ್ತಿತ್ತು. ಉಳಿದ ವೇಳೆಯಲ್ಲಿ ಅವನು ಕಾವ್ಯ, ನಾಟಕಗಳನ್ನು ಓದುವದರಲ್ಲಿಯೂ, ವರ್ತಮಾನಪತ್ರಗಳನ್ನು ನಿರೀಕ್ಷಿಸುವದರಲ್ಲಿಯೂ, ಹಾಡಿ ಬಾರಿಸುವದರಲ್ಲಿಯೂ ನಿರತನಾಗಿರುತ್ತಿದ್ದನು. ಆದರೂ ರಾಣಿಯವರು ಒಂದು ಕೆಲಸವನ್ನು ಹೇಳುವರೆ ಸಿದ್ಧನೇ; ಮಹಾರಾಜರೊಡನೆ ಆಲೋಚನೆಗೈಯುವದರಲ್ಲಿ ಅವನು ತತ್ಪರನೇ.

ಪ್ರೇಮಸುಂದರಿಯೂ ಅವಳ ಅಧ್ಯಾಪಕಳಾದ ಶಾರದಾರಂಜನಿಯೂ ತಮ್ಮ ತಮ್ಮ ವ್ಯಾಸಂಗಗಳಲ್ಲಿ ಆಗಾಗ್ಗೆ ಪ್ರದ್ಯುಮ್ನನ ಅಭಿಪ್ರಾಯವನ್ನು

ಕೇಳಿಕೊಳ್ಳುತ್ತಿದ್ದರು. ಗಾನಗಳ ಸ್ವರಸಂಯೋಗದಲ್ಲಿ ಆ ಗುರುಶಿಷ್ಯೆಯರಲ್ಲಿ ಮತಭೇದ ಬಂದಾಗ ಪ್ರದ್ಯುಮ್ನನೇ ನಿರ್ಣಯವನ್ನು ಕೊಡುವನು. ಹೀಗಾಗಿ ಯಾವ ನೀತಿನಲ್ಲಿಯಾಗಲಿ, ಯಾವ ವಿಷಯದಲ್ಲಿಯಾಗಲಿ ಆ ಅರಮನೆಯಲ್ಲಿ ಪ್ರದ್ಯುಮ್ನನ ಅಭಿಪ್ರಾಯವೇ ಪ್ರಮಾಣವಾಗಿತ್ತು.

ಪ್ರದ್ಯುಮ್ನನ ವಿದ್ಯಾಚಾತುರ್ಯಗಳನ್ನು ಕಂಡು, ಪ್ರೇಮಸುಂದರಿಗೆ ಕೌತುಕವಾಗಿತ್ತು. ಅವನ ವಿನಯಶಾಲೀನತೆ ಸೌಜನ್ಯಗಳನ್ನು ಕಂಡು ಆದರವೂ ಅವನ ಚತುರೋಕ್ತಿಗಳನ್ನು ಕೇಳಿ ವಿನೋದವೂ, ಅವನ ಅಪ್ರತಿಮವಾದ ಸೌಂದರ್ಯವನ್ನು ಕಂಡು ಹರ್ಷವೂ ಆ ನವತರುಣಿಗೆ ಆಗುತ್ತಿರುವದು ಸಹಜವೇ. ಆದರೆ ಬರಬರುತ್ತೆ ಪ್ರದ್ಯುಮ್ನನನ್ನು ತಾನು ಬಹಳೊತ್ತಿನ ವರೆಗೆ ಕಾಣದಿದ್ದರೆ ಅವಳ ಜೀವಕ್ಕೆ ಸಮಾಧಾನವಾಗದಂತಾಯಿತು. ಕೊಳ್ಳತಕ್ಕ ದುಕೂಲಗಳ ಜರತಾರಿಯನ್ನು ಪರೀಕ್ಷಿಸುವದಕ್ಕಾಗಲಿ, ತಾನು ತೆಗೆದಿದ್ದ ಚಿತ್ರಪಟದಲ್ಲಿಯ ದೋಷಗಳನ್ನು ತೋರಿಸಿಕೊಡುವದಕ್ಕಾಗಲಿ, ಇನ್ನೊಂದು ಸೇವಕ್ಕಾಗಲಿ, ಪ್ರೇಮಸುಂದರಿಯು ಪ್ರದ್ಯುಮ್ನನನ್ನು ತನ ಬಳಿಗೆ ಕರಿಸಿಕೊಂಡು ಆವನೊಡನೆ ನಾಲ್ಕು ಮಾತಾಡಿ ಕಳಿಸಿಕೊಡುತ್ತಿದ್ದಳು. ಇವೆಲ್ಲ ಪ್ರೇಮಸಮುದ್ಭೂತಿಯ ಚಿನ್ಹಗಳೇನು? ಇನ್ನು ಹೇಳಲಾಗದು. ಕಾಲ್ಪನಿಕವಾದ ಸಮಾಜಸ್ಥಿತಿಯ ಅತಿ ಶ್ರೇಷ್ಠವಾದ ಇರುವಿಕೆಯಲ್ಲಿ ವಿಹಾರಮಾಡುತ್ತಿರುವವನಾದ ಪ್ರದ್ಯುಮ್ನನ ಮನಸ್ಸಿನಲ್ಲಿ ಅನಂಗನ ಸಂಚಾರವು ಸಹಸಾ ಆಗುವಂತಿಲ್ಲವೆಂದಿಷ್ಟು ಮಾತ್ರ ಹೇಳಲು ನಾವು ಸಮರ್ಥರಿರುತ್ತೇವೆ.

ಈ ಪ್ರಕಾರವಾಗಿ ಕೆಲವು ದಿವಸಗಳು ಕಳೆದವು. ಬರಬರುತ್ತೆ ಪ್ರದ್ಯುಮ್ನನನ್ನು ಕಂಡರೆ ಪ್ರೇಮಸುಂದರಿಯ ಮನಸ್ಸಿನಲ್ಲಿ ಲಜ್ಜೆಯೂ, ಮುಖದಲ್ಲಿ ಈಷತ್ ಮಂದಹಾಸವೂ, ಅವನನ್ನು ಮಾತಾಡಿಸಲು ಹೃದಯದಲ್ಲಿ ಅಧೈರ್ಯವೂ ತೋರಲಾರಂಭಿಸಿದವು. ಆದರೆ ಈ ಹೆಚ್ಚು ಕಡಿಮೆಗಳಾಗಿರುವವನ್ನಾಗಲಿ, ಅವೇಕೆ ಉಂಟಾದವೆಂಬದರ ಕಾರಣಗಳ ವಿಚಾರವಾಗಲಿ ಕಲ್ಪನಾಸೃಷ್ಟಿಯಲ್ಲಿ ನಡೆದಾಡುವ ಪ್ರದ್ಯುಮ್ನನ ಅವಲೋಕನದಲ್ಲಿ ಬರಲಿಲ್ಲ.

ಪ್ರದ್ಯುಮ್ನನ ಗೌರವರ್ಣದ ಕಾಂತಿಯೂ, ಸೌಷ್ಟವವುಳ್ಳ ಅವನ ದೇಹದ ದಾರ್ಢ್ಯವೂ, ನಯನ ಮನೋಹರವಾಗಿರುವ ಅವನ ಸುಂದರವಾದ

ಮುಖವೂ, ಆ ಮುಖಕ್ಕೆ ಒಪ್ಪಿಗೆಯನ್ನೀಯುವ ಹೊಸಮಿಸೆಗಳ ಶೋಭೆಯೂ ಯಾವಾಗಲೂ ಪ್ರೇಮಸುಂದರಿಯ ಕಣ್ಣಿನಲ್ಲಿ ಕಟ್ಟಿದಂತಾಗಿದ್ದವು.

“ಇದೇನು ಮನಸ್ಸಿನ ಜಂಜಡವು! ಪ್ರದ್ಯುಮ್ನನೊಡನೆ ನಾಲ್ಕು ವಿನೋದದ ಮಾತುಗಳನ್ನಾಡುವೆನೆಂದರೆ ಮನಸ್ಸಿನ ಧೈರ್ಯ ಸಾಲದು! ಆನಂದದಾಯಕವಾದ ಅವನ ಮುಖವನ್ನು ನೋಡುವೆನೆಂದರೆ ಕಣ್ಣುಗಳಿಗೆ ನಾಚಿಕೆ. ಮನೆಯವರೆಲ್ಲರು ಬಳಿಯಲ್ಲಿದ್ದರೂ ಪ್ರದ್ಯುಮ್ನನ ಸಮೀಪದಲ್ಲಿ ಕುಳಿತರೆ ಮೈಯೆಲ್ಲ ರೋಮಾಂಚಗಳು. ಏನು ಕಾರಣ ಹೀಗಾಗಿರಬಹುದು?” ಎಂದು ಆ ಮುಗ್ಧೆಯು ಎಷ್ಟು ವಿಚಾರಗೈದರೂ ನಿಜವಾದ ಕಾರಣವು ಸ್ಪಷ್ಟವಾಗಿ ತೋರಲೊಲ್ಲದು.

ಮಹಾರಾಜರೊಡನೆ ಪ್ರದ್ಯುಮ್ನನು ಕಲಕತ್ತೆಗೆ ಹೋದವನು ಒಂದು ತಿಂಗಳವರೆಗೆ ಶೃಂಗಾರಪುರಕ್ಕೆ ಬರಲಿಲ್ಲ. ಒಂದೆರಡು ದಿವಸ ಮಾತ್ರ ಪ್ರೇಮಸುಂದರಿಯ ಮನಸ್ಸಿಗೆ ಸುಸು ಸಮಾಧಾನವಾದಂತಾಯಿತು. ಆದರೆ ಮೂರನೆಯ ದಿವಸ ಪ್ರದ್ಯುಮ್ನನನ್ನು ಕಾಣದೆ ಅವಳ ಮನಸ್ಸು ಕಳವಳಗೊಂಡಿತು. ಅವನ ಗಂಭೀರವಾದ ಧ್ವನಿಯಿಲ್ಲದೆ ರಾಜಮಂದಿರವೆಲ್ಲ ಪ್ರೇಮಸುಂದರಿಗೆ ನಿಃಶಬ್ದವಾಗಿ ತೋರಿತು. ಅವನ ಸುಂದರವಾದ ಮೂರ್ತಿಯಿಲ್ಲದೆ ಮನೆಯು ಅಲಂಕಾರರಹಿತವಾಯಿತು. ಅವನ ನಯನಮನೋಹರವಾಗಿರುವ ಮುಖವನ್ನು ಕಾಣದಿರುವ ಅವಳ ಕಣ್ಣುಗಳು ನಿಷ್ಫಲವಾಗಿ ತೋರಿದವು. ಮೆಲ್ಲನೆ ಅವಳು ಪ್ರದ್ಯುಮ್ನನ ಚಿತ್ರಪಟವಿದ್ದಲ್ಲಿಗೆ ಬಂದು ಅದನ್ನು ಚನ್ನಾಗಿ ದಿಟ್ಟಿಸಿ ನೋಡಿದಳು. ಚಿತ್ರಪಟದ ದೃಷ್ಟಿಯೂ ತನ್ನ ದೃಷ್ಟಿಯೂ ಏಕವಾದಂತೆ ಭಾಸವಾಗಲು ಆ ಮುಗ್ಧೆಯ ಮನಸ್ಸಿನಲ್ಲಿ ಪ್ರೇಮಾಂಕುರವು ಉದ್ಭವಿಸಿದಂತಾಗಿ ಅವಳ ಮುಖದಲ್ಲಿ ಮಂದಹಾಸವು ತೋರಿತು. ಚಿತ್ರಕಾರನು ಪ್ರದ್ಯುಮ್ನನನ್ನು ಹಾಸ್ಯಮುಖನನ್ನಾಗಿ ರೇಖಿಸಿದ್ದನು. ಆ ಸುಂದರನೇ ತನ್ನನ್ನು ಕಂಡು ಮೃದುಹಾಸಗೈದನೆಂದು ನಂಬಿ ಆ ರಮಣಿಯು ಲಜ್ಜೆಯಿಂದ ತಲೆಬಾಗಿ ನಿಂತು ಓರೆಗಣ್ಣಿನಿಂದ ಮೆಲ್ಲನೆ ಆ ಚಿತ್ರಪಟವನ್ನು ನೋಡಿದಳು. ಈ ಸಾರೆ ಮಾತ್ರ ಅದು ಚಿತ್ರವಲ್ಲದೆ ಆ ಹಾಸ್ಯಮುಖನು ನಿಜವಾದ ಪ್ರದ್ಯುಮ್ನನಲ್ಲವೆಂದರಿತು ತನ್ನ ಕಣ್ಣು ಮೋಸಕ್ಕೆ ತಾನೇ ಬೆರಗಾಗಿ

ಯಥೇಷ್ಟವಾಗಿ ನಕ್ಕಳು.

"ನಾನು ಯಾರು ? ಈ ಪ್ರದ್ಯುಮ್ನನಾರು ? ಕ್ಷತ್ರಿಯವಂಶದವರಾದ ಮಹಾರಾಜಾ ಪ್ರತಾಪಸಿಂಹರ ಮಗಳು ನಾನು. ಪ್ರದ್ಯುಮ್ನನು ಕರ್ಮನಿಷ್ಠರಾದ ಬ್ರಾಹ್ಮಣೋತ್ತಮನ ಮಗನು. ಇವನಲ್ಲಿ ಪ್ರೇಮವನ್ನಿಡುವದು ವಿಹಿತವೆ ? ಆಗದ ಮಾತು. ನಾನಿನ್ನು ಪ್ರದ್ಯುಮ್ನನನ್ನಾಗಲಿ, ಅವನ ಚಿತ್ರವನ್ನಾಗಲಿ ಕಣ್ಣೆತ್ತಿ ನೋಡಲಿಕ್ಕಿಲ್ಲ, ಇದೇ ನಿಶ್ಚಯ !" ಎಂದು ಪ್ರೇಮಸುಂದರಿಯು ಚಟ್ಟನೆ ಎದ್ದು ತನ್ನ ಮಂದಿರಕ್ಕೆ ಹೋದಳು. ಈ ವಿಚಾರಗಳನ್ನು ಹೋಗಲಾಡಿಸಲು ಅವಳು ಅನೇಕವಾದ ಉದ್ಯೋಗಗಳನ್ನು ಮಾಡಿನೋಡಿದಳು. ಸೂಕ್ಷ್ಮವಾದ ಕಸೂತಿಯ ಕೆಲಸವನ್ನು ಕೈಕೊಂಡು ಕಣ್ಣಲ್ಲಿ ಕಣ್ಣಿಟ್ಟು ಸೂಜಿಯನ್ನು ಎಳೆದಾಡಿದಳು. ಅದು ಬೇಸರಬರಲು ಭೂಮಿತಿಯ ಪ್ರಮೇಯಗಳನ್ನು ಬಿಡಿಸಲಾರಂಭಿಸಿದಳು. ಆದರೂ ಮನಸ್ಸು ಮನೋರಮಣನ ಸ್ವಾಧೀನದಲ್ಲಿಯೇ.

"ಬ್ರಾಹ್ಮಣನಾದರೆ ಕ್ಷತ್ರಿಯರ ಕನ್ಯೆಯನ್ನು ಮದುವೆಯಾಗಕೂಡದೇನು ? ಪೂರ್ವಕಾಲದಲ್ಲಿ ಅನೇಕ ಜನ ರಾಜರು ತಮ್ಮ ಕನ್ಯೆಯರನ್ನು ವಿಪ್ರೋತ್ತಮರಿಗೆ ಕೊಟ್ಟು ಮದುವೆಮಾಡಿಕೊಟ್ಟ ಉದಾಹರಣಗಳಿಗೇನು ಕಡಿಮೆಯೇ? ದಶರಥನು ತನ್ನ ಮಗಳಾದ ಶಾಂತಾದೇವಿಯನ್ನು ಋಷ್ಯಶೃಂಗ ಮುನಿಗೆ ಕೊಟ್ಟನು." ಈ ವಿಚಾರಸರಣಿಯನ್ನು ತಡೆದವಳೇ ಪ್ರೇಮಸುಂದರಿಯು ತನ್ನ ಹುಚ್ಚತನಕ್ಕೆ ತಾನೇ ನಕ್ಕು "ಪ್ರದ್ಯುಮ್ನನು ನನ್ನನ್ನು ಪ್ರೀತಿಸುವನೋ ಇಲ್ಲವೋ ಎಂಬದರಿಯದೆ ಅವನ ಪಾಣಿಗ್ರಹಣದ ವಿಚಾರವನ್ನು ನಾನು ನಡಿಸಬಹುದೆ?" ಎಂದು ಆಲೋಚಿಸಿ ಆ ಮುಗ್ಧೆಯು ಉಸುರ್ಗರೆದಳು.

ಒಂದೆರಡು ದಿವಸಗಳಲ್ಲಿಯೇ ಪ್ರೇಮಸುಂದರಿಯು ಮತ್ತೆ ತನ್ನ ಹೃದಯಚೋರನ ಪ್ರತಿಕೃತಿಯ ಮುಂದೆ ಬಂದು ನಿಂತಳು. ಬಹಳೊತ್ತು ತದೇಕಧ್ಯಾನಳಾಗಿ ಆ ಸುಂದರವಾದ ಮುಖವನ್ನು ನೋಡಿಕೊಂಡಳು. ಬಳಿಕ ಚಟ್ಟನೆ ಮುಖತಿರುವಿ ನಿಂತು "ನೋಡು, ಪ್ರೇಮಸುಂದರಿ, ಇನ್ನಾದರೂ ವಿಚಾರಿಸಿನೋಡು. ಈ ಮೋಹನಾಂಗನು ಬ್ರಾಹ್ಮಣನು; ನೀನು ಕ್ಷತ್ರಿಯವಂಶಸಂಭವಳು. ಅವಿಚಾರದ ರೂಢಿಯೇ ಆಗಲಿ, ಅದು ನಿಮ್ಮಿಬ್ಬರ ಸಂಯೋಗಕ್ಕೆ ವಿಘಾತಕವಾಗಿದ್ದರೆ ಈ ಹಂಬಲವೇಕೆ ? ಪ್ರದ್ಯುಮ್ನನಲ್ಲಿ ಸಿಲ್ಕಿರುವ

ಪ್ರದ್ಯುಮ್ನನ ಬಳಿಗೆ ಬಂದು "ಪಂಡಿತಜೀ, ವ್ಯಾಖ್ಯಾನದ ಕಾಲದಲ್ಲಿ ನೀವು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನೆಲ್ಲ ನಾನು ಕೇಳಿದೆನು. ಆದರೆ ನಿಮ್ಮ ಅಭಿಪ್ರಾಯಗಳು ತೋರಿಕೆಯವೋ ನಿಜವಾದವುಗಳೋ ಹೇಳಿರಿ." ಎಂದು ಒಳ್ಳೇ ದರ್ಪಯುಕ್ತವಾದ ಮುದ್ರೆಯನ್ನು ತಳೆದು ಕೇಳಿದಳು.

"ಈ ಪ್ರಶ್ನವನ್ನು ಮಾಡಬೇಕಾದರೆ, ನೀವೇಕೆ ಹೀಗೆ ಅತ್ತೆಯು ಸೊಸೆಯನ್ನು ಕೇಳಿದಂತೆ ಕೇಳುತ್ತಿರುವಿರಿ?"

"ಯಾಕಂದರೆ, ನಿಮ್ಮಂಥವರು ಹೊಟ್ಟೆಯಲ್ಲೊಂದು ಬಾಯಿಯಲ್ಲೊಂದು ಮಾಡಿದರೆ ಸಮಾಜವು ಪ್ರಗತಿಯನ್ನು ಹೊಂದುವದು ಹೇಗೆ?" ಎಂದು ಪ್ರೇಮಸುಂದರಿಯು ಮಂದಹಾಸದಿಂದ ಕೇಳಿದಳು.

"ನನ್ನ ಅಭಿಪ್ರಾಯವು ಹೊಟ್ಟೆಯೊಳಗಿಂದೇ ಹೊರತಾಗಿ ಅದರಲ್ಲಿ ದಂಭವೇನೂ ಇಲ್ಲ."

"ಹಾಗಾದರೆ ಚಿಂತೆಯಿಲ್ಲ," ಎಂದು ಹೇಳಿದವಳೇ ಹೊರಟು ಹೋಗಲು ಸಿದ್ಧಳಾದಳು.

"ತುಸು ತಡೆಯಿರಿ. ಮೊನ್ನೆ ಒಂದು ಪ್ರಶ್ನೆ ಕೇಳಿದಿರಿ. ಏಕೆಂದು ಕೇಳಿದರೆ, ಕಾರಣವನ್ನು ಇನ್ನೊಂದಾವರ್ತಿ ಹೇಳುವೆನೆಂದು ಹೇಳಿ ನೋದಿರಿ. ಈಗ ಹೇಳಬಹುದೇನು?"

"ಇಲ್ಲ. ಇನ್ನೂ ನನ್ನ ಮನಸು ಸಂಕೋಚಗೊಳ್ಳುತ್ತಲಿದೆ. ಆದರೂ ಇದೇ ಸಮಯದಲ್ಲಿ ಇನ್ನೊಂದು ಪ್ರಶ್ನೆ ಕೇಳಲೆ?"

"ಬೇಕಾದ ಪ್ರಶ್ನೆ ಕೇಳಿರಿ. ಬೇಸರಿಲ್ಲದೆ ಹೇಳುವೆನು." ಎಂದು ನಗುತ್ತ ಪ್ರದ್ಯುಮ್ನನು ಹೇಳಿದನು.

"ನಿಮ್ಮ ವಿವಾಹವಾಗಿಲ್ಲವಾಗಿ ತೋರುತ್ತದೆ." ಎಂದು ಪ್ರೇಮಸುಂದರಿಯು ಅಂಜುತ್ತ ಕೇಳಿದಳು.

"ಇಲ್ಲ!"

"ಯಾಕೆ?" ಎಂದು ಆ ಕುತೂಹಲಿನಿಯು ಬಹು ಮೆಲ್ಲಗೆ ಕೇಳಿದಳು.

"ನನಗೆ ಅನುರೂಪಳಾದ ವಧುವು ಸಿಕ್ಕದ ಹೊರತು ನಾನು ಮದುವೆಯಾಗುವದಿಲ್ಲ."

ಪ್ರೇಮಸುಂದರಿಯು ಹೊರಟುಹೋದಳು. ಪ್ರದ್ಯುಮ್ನನಿಗೆ ಈ ಪ್ರಶ್ನವನ್ನು ಕೇಳಿದ್ದೇ ತನ್ನಿಂದ ತಪ್ಪಾಯಿತೆಂದು ಅವಳು ತನ್ನ ಮಂದಿರದಲ್ಲಿ ಕುಳಿತು ಆಲೋಚಿಸಿದಳು. ನಾನು ನನ್ನ ಪ್ರಿಯತಮನಿಗೆ ಅನುರೂಪಳಾಗಿಲ್ಲವೇನು ? ಹೀಗೆ ನುಡಿಯುವಳೇ ಆ ಮುಗ್ಧೆಯು ಎದ್ದು ನಿಲುವುಗನ್ನಡಿಯ ಮುಂದೆ ನಿಂತು, "ಅನೇಕ ಜನ ಸುಂದರಿಯರ ಚಿತ್ರವನ್ನು ನಾನು ನೋಡಿದ್ದೇನೆ. ಆದರೆ ಈ ಕನ್ನಡಿಯಲ್ಲಿರುವ ನನ್ನ ಬಿಂಬವು ಆ ಚಿತ್ರಗಳಿಗಿಂತ ಕಡಿಮೆಯಾದವಲ್ಲ. ನಾನು ಸರ್ವಥಾ ಅಶಕ್ತಳಲ್ಲ. ನನಗಿಂತ ಹೆಚ್ಚಿಗೆ ಕಲಿತವಳಾದ ತರುಣಿಯು ಈ ಚಕ್ರವರ್ತಿಗೆಲ್ಲಿಂದ ದೊರೆಯುವಳು ? ಅಂತರ್ಗತವಾದ ಪ್ರೇಮಕ್ಕೂ ಬಹಿರಂಗವಾಗಿರುವ ರೂಪಕ್ಕೂ ಸಂಬಂಧವಿರುವದಿಲ್ಲವೇನು ? ಏನು ? ನಾನು ಆಪ್ತಳೆಂದು ತಿಳಿದು ನನ್ನ ಮನೋರಮಣನು ನನ್ನ ಹೃದ್ಗತವನ್ನು ಚೆನ್ನಾಗಿ ಪರೀಕ್ಷಿಸಲೊಲ್ಲನೋ ? ಎಷ್ಟೆಂದು ವಿಚಾರ ಮಾಡಲಿ ?" ಎಂದು ಚಿಂತಾಕುಲಳಾಗಿ ಹೊರಟುಹೋದಳು.

ಯುವರಾಜ ರಘುವೀರಸಿಂಹನ ಹುಟ್ಟಿದ ದಿವಸವು. ಅರಮನೆಯಲ್ಲಿಯೂ ರಾಜಧಾನಿಯಲ್ಲೆಲ್ಲ ಕಡೆಗೂ ಉತ್ಸವವು. ಪ್ರದ್ಯುಮ್ನನಿಗೆ ಆ ದಿವಸ ಕೆಲಸವಿಲ್ಲ. ಅವನು ಉಪಹಾರ ತೀರಿಸಿಕೊಂಡು ಬಹು ರಮ್ಯವಾಗಿ ಹಾಡುತ್ತ ಕುಳಿತಿದ್ದನು. ಜರದ ಧೋತರವನ್ನುಟ್ಟು ಮೈಮೇಲೆ ಜರದ ಶಲ್ಯವನ್ನು ಹಾಕಿಕೊಂಡು ಕುಳಿತ ಪ್ರದ್ಯುಮ್ನನ ಸುಂದರವಾದ ಮೂರ್ತಿಯು ಬಹು ರುಚಿಕರವಾಗಿ ಕಾಣುತ್ತಿತ್ತು. ಪ್ರೇಮವಶಳಾದ ಪ್ರೇಮಸುಂದರಿಗೆ ಅದೆಷ್ಟೆಂದು ಮೋಹಕವಾಗಿ ಕಂಡಿತೆಂಬದನ್ನು ಅವಳೇ ಹೇಳಬೇಕಲ್ಲವೆ ? ಅವಳು ಮೆಲ್ಲನೆ ಕಿಟಕಿಯ ಬಳಿಯಲ್ಲಿ ಬಂದು ನಿಂತು ಅವನ ರೂಪವನ್ನು ಅರೆದು ಕುಡಿಯುವಳೋ ಎಂಬಂತೆ ಬಲು ಅಭಿಲಾಷೆಯಿಂದ ನೋಡುತ್ತಿದ್ದಳು. ಮೊದಲೆ ಮನಸ್ಸಿಗೆ ಹುಚ್ಚು ಹಿಡಿಸುವಂಥ ಶ್ರುತಿಮನೋಹರವಾದ ಗಾನವು. ಮದನಸಂತಾಪದಿಂದ ವಿಹ್ವಲಳಾದಳು.

"ಪ್ರೇಮಸುಂದರಿ, ಈ ಮದನಸುಂದರನಲ್ಲಿ ನಿನ್ನ ಪ್ರೇಮವು ಸಂಪೂರ್ಣವಾಗಿ ಆಸಕ್ತವಾಯಿತು. ಇವನು ನಿನ್ನ ಪ್ರಣಯವನ್ನು ಅಂಗೀಕರಿಸದಿದ್ದರೆ ನಿನ್ನವಸ್ಥೆಯೇನು ? ಅನ್ಯರ ಸ್ತ್ರೀಯಾಗಬಲ್ಲೆಯಾ ? ಛೀಃ ಎಂದೂ ಇಲ್ಲ. ಸನ್ಯಾಸಿನಿಯಾಗುವಿಯಾ ! ಮತ್ತಿನ್ನೇನು ಮಾಡುವದು?

ಇನ್ನೊಬ್ಬರ ಸತಿಯಾಗುವೆನೆ? ಅವನಿಗೆಲ್ಲಿಂದ ಪ್ರೇಮವನ್ನು ತರಲಿ? ಪ್ರೇಮಾಸ್ಪದನೊಬ್ಬನಾಗಿರಲು ಇನ್ನೊಬ್ಬನು ಪತಿಯಾಗಬಲ್ಲನೆ? ಇಂಥ ವಿಚಾರವೇ ಪಾಪಕರವಾದದ್ದು. ಕಡೆಯ ಉಪಾಯವನ್ನು ಮಾಡಿ ನೋಡಿಯೇ ಬಿಡಬೇಕು. ನಿರಾಶೆಯೇ ನನ್ನ ಪಾಲಿಗಿದ್ದರೆ ನಾಳೆನಿಂದಲೇ ಪ್ರಶಾಂತವಾದ ಮನಸಿನವಳಾಗುವೆನು. ತಡವೇಕೆ?" ಎಂದವಳೇ ಅವಳು ಪ್ರದ್ಯುಮ್ನನ ಮಂದಿರದಲ್ಲಿ ಬಂದು ನಿಂತಳು.

"ಪ್ರದ್ಯುಮ್ನರೆ, ಕ್ಷತ್ರಿಯ ಕನ್ಯೆಯರು ಪುರಾಣ ಕಾಲದಲ್ಲಿ ಬ್ರಾಹ್ಮಣರನ್ನು ಮದುವೆಯಾಗುತ್ತಿದ್ದರೆಂದು ನೀವು ಹೇಳಿದಿರಿ. ಇದು ಪ್ರಗತಿಯ ಮಾರ್ಗಗಾಮಿಗಳಾದ ಈಗಿನ ಪಂಡಿತರ ಅಭಿಪ್ರಾಯಕ್ಕೆ ವಿರುದ್ಧವಾಗಿಲ್ಲವಷ್ಟೆ?"

"ಎಷ್ಟು ಮಾತ್ರವೂ ಇಲ್ಲ. ಯಾಕೆ?"

"ಓರ್ವ ಕ್ಷತ್ರಿಯ ಕನ್ಯೆಯು ನಿಮ್ಮನ್ನು ವರಿಸಲು ಸಿದ್ಧಳಾಗಿದ್ದರೆ ಅವಳ ಪಾಣಿಗ್ರಹಣವನ್ನು ಮಾಡಲು ನೀವು ಸಿದ್ಧರಷ್ಟೆ?"

"ಅವಳು ನನಗೆ ಅನುರೂಪಳಾಗಿದ್ದರೆ ನಾನು ಸಿದ್ಧನೆ"

"ಅನುರೂಪಳೆಂದರೆ, ನನ್ನಷ್ಟು ಸುಂದರಿಯಿದ್ದರೆ ಆಯಿತೆ?"

"ನಿಮ್ಮ ಸೌಂದರ್ಯದ ಅರ್ಧವಿದ್ದರೂ ಸಾಕು. ಆದರೆ ಇವೆಲ್ಲ ಪ್ರಶ್ನೆಗಳೇಕೆ?" ಎಂದು ಪ್ರದ್ಯುಮ್ನನು ಚಕಿತನಾಗಿ ಕೇಳಿದನು.

"ಪ್ರಗತಿಯಗೋಸ್ಕರವಾಗಿ ನಿಮ್ಮ ನಿಷ್ಠೆ ಎಷ್ಟಿದೆಯೆಂಬುದನ್ನು ಪರೀಕ್ಷಿಸಿದೆನು; ಮತ್ತೇನಿಲ್ಲ...."

"ನಿಮಗೆ ಅನುರೂಪಳಾದವಳು ಬ್ರಾಹ್ಮಣಿಯೇ ಇರಲಿ, ಕ್ಷತ್ರಿಯಳೇ ಇರಲಿ, ಅವಳ ವಿದ್ಯಾಕಲಾಕೌಶಲ್ಯಗಳೆಷ್ಟಿರಬೇಕು? ನನಗೆ ಬರುವಷ್ಟು ಬಂದರಾಯಿತೆ?"

"ಯಾಕೆ ಕೇಳುವಿರೋ ಏನೋ!" ಎಂದು ಪ್ರದ್ಯುಮ್ನನು ಪ್ರೇಮಸುಂದರಿಯ ಸುಂದರವಾದ ಮುಖವನ್ನು ನಿರೀಕ್ಷಿಸುತ್ತ ಉದ್ಗಾರ ತೆಗೆದು "ಸಾಕು ಸಾಕು, ಅಷ್ಟು ವಿದ್ಯೆ ಸಾಕು. ನನಗೊಂದು ಕನ್ಯೆಯನ್ನು ತಂದಿರುವಿರೇನು?" ಎಂದು ಅವನು ಮಂದಹಾಸಗೈದು ಕೇಳಿದನು.

"ಇದಕ್ಕೂ ಹೆಚ್ಚಿನ ಗುಣಗಳೇನಾದರೂ ಇರಬೇಕೇನು?" ಎಂದು

ಅವನತಮುಖಿಯಾಗಿ ಪ್ರೇಮಸುಂದರಿಯು ಕೇಳಿದಳು

"ಹೆಚ್ಚಿಗಿದ್ದರೆ ಬೇಡವೇಕೆ? ನೀವು ಹೇಳಿದಷ್ಟು ಗುಣಗಳಿದ್ದರೆ ಸಾಕು" ಎಂದು ಆ ಭೂಮದನನು ಪ್ರೇಮಸುಂದರಿಯ ಮುಖವನ್ನು ಒಳಿತಾಗಿ ಪರೀಕ್ಷಿಸುತ್ತ ಹೇಳಿದನು.

"ಇನ್ನೊಂದು ಪ್ರಶ್ನವನ್ನು ಕೇಳಿದರೆ ನೀವು ಕೋಪಿಸಿಕೊಳ್ಳಲಿಕ್ಕಿಲ್ಲವಷ್ಟೆ?" ಎಂದು ಆ ನವತರುಣಿಯು ಬಹು ಮೋಹಬರುವಂತೆ ಮಂದಹಾಸವನ್ನು ಬೀರಿ ಕೇಳಿದಳು.

ಈ ಮೃದುಹಾಸದ ತೀಕ್ಷ್ಣತೆಯನ್ನು ಆ ಯೌವನೋದ್ರಿಕ್ತನಾದ ಪ್ರದ್ಯುಮ್ನನು ಹೇಗೆ ತಡೆಕೊಂಡನೋ ಹೇಳಲಾಗದು. ಸ್ವಸ್ಥ ಚಿತ್ತದವನಂತೆ ಅವನು ಅಂದದ್ದು: "ಕೇಳಿರಿ, ಅವಶ್ಯ ಕೇಳಿರಿ, ಕೋಪವೇತರದು!"

"ಕೇಳಲಿಯಾ?" ಎಂದು ಲಜ್ಜಾಗ್ರಸ್ತಳಾಗಿ ಪ್ರೇಮಸುಂದರಿಯು ಕೆಳಗೆ ಮೋರೆ ಮಾಡಿಕೊಂಡು ನಿಂತಳು.

"ಇಂದು ನಿಮ್ಮ ಚಿತ್ತವೃತ್ತಿಯು ಚಮತ್ಕಾರವಾಗಿರುವಂತೆ ಕಾಣುತ್ತದೆ. ಪ್ರಶ್ನೆ ಕೇಳುವದಿದ್ದರೆ ಹಾಗೆ ತಡೆಯುವದೇಕೆ?"

"ಹಾಗಾದರೆ ನನ್ನ ಪಾಣಿಗ್ರಹಣವನ್ನು ಮಾಡಲಿಕ್ಕೆ ನೀವು ಸಿದ್ಧರಾಗುವಿರೇನು?" ಎಂದು ಕೇಳಿದವಳೇ ಪ್ರೇಮಸುಂದರಿಯು ತನ್ನ ಎರಡೂ ಕೈಗಳಿಂದ ಮುಖವನ್ನು ಗಟ್ಟಿಯಾಗಿ ಮುಚ್ಚಿಕೊಂಡಳು.

"ಪ್ರೇಮಸುಂದರೀ ದೇವಿ! ನಿನ್ನ ಚಿತ್ತಕ್ಕೆ ಭ್ರಮವಾಗಿಲ್ಲವಷ್ಟೆ?" ಎಂದು ಪ್ರದ್ಯುಮ್ನನು ಜರಿದು ನುಡಿದನು.

ಪ್ರೇಮಸುಂದರಿಯ ಕಣ್ಣುಗಳಲ್ಲಿ ಅಶ್ರುಗಳು ಧಾರೆಯಿಟ್ಟು ಹರಿದವು. ಅವಳ ಕೋಮಲವಾದ ದೇಹವು ಕಂಪಿಸಿತು. ಅವಳು ಉತ್ತರವನ್ನೇನು ಕೊಡುವಳು?

"ಪ್ರೇಮಸುಂದರಿ, ನಮ್ಮ ನಿಮ್ಮ ಸ್ಥಿತಿಗಳಲ್ಲಿರುವ ಮಹದಂತರದ ವಿಚಾರ ಮಾಡಿದಿಯೇನು?"

"ಸ್ಥಿತ್ಯಂತರದ ವಿಚಾರವನ್ನು ಆಗಲೇ ಮಾಡಿರುವೆನು. ಅದನ್ನು ಕಟ್ಟಿಕೊಂಡಿನ್ನೇನು ಮಾಡುವದು? ನಾಳಿನಿಂದ ನಾನು ಸನ್ಯಾಸಿನಿಯಾಗುವದನ್ನು ಈಗಲೇ ನಿಶ್ಚಯಿಸಿಕೊಂಡಿರುವೆನು."

"ಹಾಗಂದರೇನು ಪ್ರೇಮಸುಂದರಿ ?" ಎಂದು ಪ್ರದ್ಯುಮ್ನನು ವಿಚಾರ ಮೂಢನಾಗಿ ಕೇಳಿದನು.

ಪ್ರೇಮಸುಂದರಿಯು ಮಾತಾಡಲಿಲ್ಲ.

"ಪ್ರೇಮಸುಂದರಿ, ನಿನ್ನ ಅನುನಯವನ್ನು ನಾನು ಅನಾದರಿಸಿದೆನೆಂದು ತಿಳಿಯಬೇಡ. ನಿನ್ನಂಥ ವಿದುಷಿಯೂ, ನಿನ್ನಂಥ ಚತುರೆಯೂ, ನಿನ್ನಂಥ ಸುಶೀಲೆಯೂ, ನಿನ್ನಂಥ ಅಪ್ರತಿಮ ಸುಂದರಿಯೂ ಆದ ಸವತರುಣಿಯ ಪ್ರೇಮಪಾತ್ರನು ನಾನಾದದ್ದು ಕಂಡು ಸರ್ವಥಾ ಧನ್ಯನಾಗಿರುವೆನು. ಆದರೆ ಮಹಾರಾಜರು ನಮ್ಮ ವಿವಾಹಕ್ಕೆ ಒಪ್ಪಿಗೆಯನ್ನು ಕೊಡುವದು ಅಸಂಭವವಾದ ಮಾತು. ಮೇಲಾಗಿ ಈ ಮಾರ್ಗಮಾನವು ಅವರಿಗೆ ತಿಳಿದರೆ ನಿನ್ನನ್ನು ನಾನೇ ಮೋಹಗೊಳಿಸಿದೆನೆಂದು ತಿಳಿದು ನನ್ನನ್ನು ಅಯೋಗ್ಯನೆಂದೂ ವಿಶ್ವಾಸಘಾತಕಿಯೆಂದೂ ದೂಷಿಸದಿರರೆ ? ಲಭ್ಯಾಂಶವಿಷ್ಟದೆ ದೋಷಿಯೆಂಬ ಕಲಂಕವು ನನಗೆ ತಗಲುವದು; ನಿನಗೆ ಮನಸಿನ ತಾಪವಾಗುವದು. ಆದಕ್ಕಾಗಿ ಸುಂದರಿ, ಈ ವಿಚಾರವನ್ನು ಬಿಟ್ಟುಕೊಡೆಂದು ನಾನು ಪ್ರಾರ್ಥಿಸುತ್ತೇನೆ."

"ಪ್ರಿಯರೆ, ಮಹಾರಾಜರೊಪ್ಪಿದರೂ ನನ್ನ ಪ್ರೇಮವು ನಿಮ್ಮಲ್ಲಿ ದೃಢವಾಗಿ ಉಳಿಯುವದು; ಒಪ್ಪದಿದ್ದರೂ ಆ ಪ್ರೇಮವನ್ನು ನಿಮ್ಮಿಂದ ತೆಗೆಯುವದು ಬ್ರಹ್ಮದೇವರಿಂದಾಗದು. ಆದರೂ ಮಹಾರಾಜರೊಪ್ಪಿದ ಪಕ್ಷದಲ್ಲಿ ನೀವು ನನ್ನ ಪಾಣಿಗ್ರಹಣವನ್ನು ಮಾಡುವಿರಷ್ಟೆ ?"

"ಹಾಗಾದ ಪಕ್ಷದಲ್ಲಿ ಪ್ರೇಮಸುಂದರಿಯ ಪಾಣಿಗ್ರಹಣವನ್ನು ಮಾಡದಿದ್ದರೆ ಇನ್ನಾರ ಪಾಣಿಗ್ರಹಣವನ್ನು ಮಾಡಲಿ ? ಆದರೆ ಮಹಾರಾಜರ ಸಮ್ಮತಿಯು ಶಶವಿಷಾಣದಂತೆ ಅಸಂಭವವೇ."

"ಅಸಂಭವವೆಂದು ಕಲ್ಪಿಸಿ ನೀವು ನನ್ನ ಪಾಣಿಗ್ರಹಣ ಮಾಡುವ ವಚನವನ್ನು ಈಗಲೇ ಕೊಡಬೇಕು. ಇಲ್ಲದಿದ್ದರೆ ಈ ಪ್ರೇಮಸುಂದರಿಯು ನಾಳಿಗೆ ಬದುಕಿದ್ದಾದರೆ ಸನ್ಯಾಸಿನಿಯೇ ಆಗುವಳು."

"ಪ್ರಿಯಳೆ, ಈ ಶಸ್ತ್ರವನ್ನು ತೆಗೆದುಕೊಂಡು ಮೊದಲು ನನ್ನ ಎದೆಯಲ್ಲಿ ಹೊಡೆ; ಮುಂದೆ ಬೇಕಾದದ್ದು ಮಾಡುವಿಯಂತೆ !" ಎಂದು ಪ್ರದ್ಯುಮ್ನನು ಅಶ್ರುಗಳನ್ನು ತಳೆದು ಪ್ರೇಮಸುಂದರಿಯ ಮುಖವನ್ನು ನೋಡಿ ನುಡಿದನು.

"ಇದಕ್ಕಾದರೂ ಸಿದ್ಧರಿರುವಿರಾ? ನೋಡಿರಿ!" ಎಂದು ಪ್ರೇಮ ಸುಂದರಿಯು ವಿಲಾಸದಿಂದ ನುಡಿದು ನಕ್ಕಳು.

"ಸಿದ್ಧನೆಂಬದಕ್ಕೆ ಸಂದೇಹವೇನು? ಇದ್ದ ಮಹಾರಾಜರಿಗೂ ರಾಣಿ ಯವರಿಗೂ ನನ್ನ ಪಂಚಪ್ರಾಣಗಳಾದ ನಿನಗೂ ವ್ಯಸನವನ್ನೀಯುವದಕ್ಕಿಂತ ನಿನ್ನ ಪ್ರೇಮುಲವಾದ ಕರಗಳಿಂದ ಅಸುವನ್ನು ನೀಗುವದು ಸುಖವಲ್ಲವೆ? ಪ್ರಿಯೆ, ನಾನು ನಿನ್ನ ಮೇಲೆ ಪ್ರೇಮವನ್ನಿಟ್ಟದ್ದು ಇಂದಲ್ಲ ನಿನ್ನೆಯಲ್ಲ. ನಿನ್ನ ಮನೋಹರವಾದ ರೂಪವು ಪ್ರಥಮ ದರ್ಶನದಲ್ಲಿ ನನ್ನನ್ನು ಜಯಿಸಿತು. ನಿನ್ನ ಹೃದ್ಯವಾದ ಗುಣಗಳೆಲ್ಲವೂ ನನ್ನನ್ನು ಸಂಪೂರ್ಣವಾಗಿ ಪರಾಧೀನ ನನ್ನಾಗಿ ಮಾಡಿಬಿಟ್ಟಿರುತ್ತವೆ. ನಾನು ಪ್ರೇಮವನ್ನು ಎಷ್ಟು ಬಿಗಿದು ಕಟ್ಟಿದ್ದೆ ನೆಂಬದನ್ನು ದೇವರೇ ಬಲ್ಲ. ಬದುಕಿದ್ದರೂ ನಾನು ವಿವಾಹಿತನಾಗಿ ಸಂಸಾರ ಸುಖವನ್ನು ಕಾಣುವಂತಿಲ್ಲ. ಅಂದಮೇಲೆ ಮರಣದ ಭಯವೇಕೆ? ತೆಗೆದು ಕೊಳ್ಳು ಆ ಶಸ್ತ್ರವನ್ನು."

ಪ್ರೇಮಸುಂದರಿಯು ಒಯ್ಯಾರದಿಂದೆ ಆ ಶಸ್ತ್ರವನ್ನು ತೆಗೆದುಕೊಂಡು ಮೇಲಕ್ಕೆತ್ತಿ ಕಸುವಿನಿಂದ ಹೊಡೆದಳು. ಹೊಡೆದಳೆ! ಇಲ್ಲ. ಅವಳು ಶಸ್ತ್ರ ವನ್ನು ಬದಿಗೆ ಮಾಡಿ ಪ್ರದ್ಯುಮ್ನನ ಸುಂದರವಾದ ಮುಖವನ್ನು ಪ್ರೇಮ ನಿರ್ಭರದಿಂದ ಚುಂಬಿಸಿದಳು.

ಪ್ರದ್ಯುಮ್ನನು ಸಂಕ್ಷುಬ್ಧನಾಗಿ "ಇದೇನನರ್ಥ ಮಾಡಿದಿ, ಪ್ರೇಮ ಸುಂದರಿ?" ಎಂದು ಕೇಳಿ ಹಿಂದಕ್ಕೆ ಸಿಡಿದು ನಿಂತನು.

"ಪ್ರಾಣಕಾಂತರೆ, ಇದು ಅನರ್ಥವಲ್ಲ, ಸರ್ವಾರ್ಥವು. ಈ ಚುಂಬ ನವೇ ನಮ್ಮ ವಿವಾಹದ ಪವಿತ್ರವಾದ ಸಂಸ್ಕಾರವು. ಈ ಚುಂಬನವೇ ನಮ್ಮ ಸಂಸಾರ ಸುಖದ ಇತಿಶ್ರೀಯು. ಪ್ರಿಯರೆ, ನನಗಿನ್ನು ಐಹಿಕ ಸುಖದ ಇಚ್ಛೆ ಯಿಲ್ಲ. ಒಂದೇ ನಿಮಿಷವಾದರೂ ಈ ಪಾದಗಳ ದಾಸಿಯಾದೆನೆಂಬ ಬಿರುದು ನನಗೆ ಸಾಕು. ನೀವಿನ್ನು ದ್ವಿತೀಯ ವಿವಾಹವನ್ನು ಮಾಡಿಕೊಂಡು ಸಂಸಾ ರದ ಪರಮಾವಧಿಯ ಸುಖವನ್ನು ಅನುಭವಿಸುತ್ತಿರುವ ವಾರ್ತೆಯನ್ನು ಕೇಳಿ ನಾನು ಪರಮ ಸಂತುಷ್ಟಳಾಗಿರುವೆನು."

ಪ್ರದ್ಯುಮ್ನನು ಪ್ರೇಮಸುಂದರಿಯನ್ನು ಭರದಿಂದ ಅಪ್ಪಿಕೊಂಡು ಕಮಲದಂತಿರುವ ಅವಳ ಸುಂದರವಾದ ಮುಖವನ್ನು ಯಥೇಷ್ಟವಾಗಿ

ಚುಂಬಿಸಿ "ಪ್ರಾಣೇಶ್ವರಿ, ನನ್ನ ಪ್ರೇಮದ ಬೆಲೆಯು ನಿನಗೆ ಚನ್ನಾಗಿ ತಿಳಿದಿಲ್ಲವಾಗಿ ತೋರುತ್ತದೆ. ನಿನ್ನನ್ನು ಬಿಟ್ಟು ನಾನು ಅನ್ಯಳೊಡನೆ ಸಂಸಾರ ಮಾಡಬಲ್ಲೆನೇ? ಮಹಾರಾಜರೂ ರಾಣಿಯವರೂ ಅಪ್ಪಣೆ ಕೊಟ್ಟರೆ ನಾವು ಸಂಸಾರಿಗಳಾಗತಕ್ಕವರು. ಇಲ್ಲದಿದ್ದರೆ ಬ್ರಾಹ್ಮಣನಾದ ನಾನು ಇನ್ನು ಮೇಲೆ ಸನ್ಯಾಸಿಯೇ ಆಗಿರುವೆನು."

ತತ್‌ಕ್ಷಣವೇ ಆ ಪ್ರಣಯಿಗಳು ಅಗಲಿದರು. ವಧೂವರಗಳ ತಂದೆತಾಯಿಗಳ ಅಪ್ಪಣೆಯು ಕೊಡದಲೆ ಹಾಗೆಯೇ ಉಳಿಯಿತು; ಈ ಪ್ರಣಯಿಗಳ ಸಂಸಾರ ಸುಖವು ಅನುಭವಿಸದಲೆಯೇ ಉಳಿದುಹೋಯಿತು.

ಪ್ರದ್ಯುಮ್ನನು ಆರ್ಯಧರ್ಮ ಪ್ರಸಾರಣದ ಬೋಧಕನಾಗಿ ಅಮೇರಿಕಾ, ಜಪಾನ ಮುಂತಾದ ದ್ವೀಪಗಳಲ್ಲಿ ಸಂಚರಿಸುತ್ತಿರುವನು. ಪಾಪ, ಕೋಮಲೆಯಾದ ಪ್ರೇಮಸುಂದರಿಯು ವ್ರತಸ್ಥಳಾಗಿ ಬಾಡಿದ ಮಾಲತೀ ಪುಷ್ಪದಂತೆ ಅರಮನೆಯಲ್ಲಿಯೇ ಉಳಿದಳು

# ಪ್ರಕೃತಿಬಲ

ಮಕರ ಸಂಕ್ರಮಣದ ಮಹೋತ್ಸವದ ದಿವಸವದು. ಸೂರ್ಯನಾರಾಯಣನು ಉತ್ತರಾಯಣನಾಗಿ ಸೃಷ್ಟಿಶೋಭೆಯೆಂಬ ಮಹಾಪ್ರದರ್ಶನ ಸಮಾರಂಭವನ್ನು ಜಗತ್ತಿಗೆ ತೋರಿಸುವನಾದನು. ಈ ಅದ್ವಿತೀಯವಾದ ಪ್ರದರ್ಶನವನ್ನು ನೋಡಲಪೇಕ್ಷಿಸುವವರು ಪರಮ ರಮಣೀಯವಾದ ಬೆಂಗಳೂರು ಪಟ್ಟಣಕ್ಕೆ ಬಂದು ನೋಡತಕ್ಕದ್ದು. ನಿಮ್ನೋನ್ನತಾಂಗಿಯಾದ ಆ ನಗರಲಕ್ಷ್ಮಿಯು ಪುಷ್ಪಹಾಸೆಯಾದ ವನದೇವತೆಯಿಂದ ಸಮೇತಳಾಗಿ ಅನೇಕ ಪ್ರಕಾರದ ಅಲಂಕಾರಗಳನ್ನು ಧರಿಸಿ ದಕ್ಷಿಣದ ರಾಣಿ ತಾನೆಂಬ ಬಿಂಕಗಿಂದ ಮೆರೆಯುತ್ತಿದ್ದಳು. ಸಂಪಿಗೆ, ಬಕುಲ, ಪಾರಿಜಾತಾದಿ ಮಕರಂದಮಯವಾದ ವೃಕ್ಷಗಳಿಂದ ಮರ್ಯಾದಿತವಾದ ಸುಮನೋಹರವಾದ ಬೀದಿಗಳ ಎರಡೂ ಮಗ್ಗಲಿಗೂ, ಸೌಂದರ್ಯದಲ್ಲಿ ಪರಸ್ಪರರನ್ನು ಸ್ಪರ್ಧಿಸುತ್ತಿರುವ ಸುಶೋಭಿತವಾದ ಪ್ರಾಸಾದ ಹರ್ಮ್ಯ ಮಂದಿರಗಳು ಅವಲೋಕನಾರ್ಥಿಗಳ ವಿಡಂಬನೆಯನ್ನು ಮಾಡುವಂತೆ ಅವರ ದೃಷ್ಟಿಗಳನ್ನು ಸುತ್ತಿಮುತ್ತಿ ಹಿಡಿದೆಳೆಯುತ್ತಿದ್ದವು. ಮಹಾರಾಜರ ಪ್ರೇಮಕಟಾಕ್ಷದಿಂದ ಸಂವರ್ಧಿತಳಾದ ವನಶ್ರೀಯ ವಿಲಾಸವತಿಯರಾದ ತನುಜೆಯರು ಲಾಲಬಾಗ, ಕಬನಪಾರ್ಕ ಮುಂತಾದ ಉಪವನಗಳ ಮರ್ಯಾದೆಯಲ್ಲಿ ನಿಂತುಕೊಂಡು ಸ್ವೇಚ್ಛೆಯಿಂದ ಲೀಲಾವಿಲಾಸಗಳನ್ನು ವ್ಯಕ್ತಪಡಿಸಿ ನರ್ತಿಸುತ್ತಿದ್ದರು. ಚಮತ್ಕಾರವಾಗಿ ತೋರುವ ಈ ನಗರಶೋಭೆಯನ್ನು ಕಂಡು ತಟಾಗ ಸರಸಿಯರು ಬೆರಗಾಗಿ ಅಲ್ಲಲ್ಲಿ ತಟಸ್ಥರಾಗಿ ನಿಂತುಕೊಂಡಿದ್ದರು. ಸ್ವಾತಂತ್ರ್ಯಾಧಿಕ್ಯದ ಜಂಬದಿಂದ ಮೆರೆಯುತ್ತಿರುವ ಶುಕ ಪಿಕ ಮಯೂರಾದಿ ವಿಹಂಗಮಗಳು ಬೆಂಗಳೂರಿನ ಸಿರಿದೇವಿಯ ವೈಭವವನ್ನು ಕಂಡು ಮನಸೋತು ಆ ನಗರಿಯ ಸ್ತುತಿಪಾಠವನ್ನು ಮಾಡುತ್ತ ಮತ್ತೆಲ್ಲಿಗೂ ಹೋಗಲರಿಯದೆ ಅಲ್ಲಿಯೇ ಉಳಿದವು.

ಅಭ್ಯಂಗಯುತವಾದ ತಿಲಸ್ನಾನವನ್ನು ಮಾಡಿ ಉತ್ತಮೋತ್ತಮವಾದ ವಸ್ತ್ರಾಲಂಕಾರಗಳನ್ನು ಧರಿಸಿ ದೇವತಾಗುರುವಂದನಗಳನ್ನು ಮಾಡಿಕೊಂಡು ಮುದಾನ್ವಿತರಾಗಿ ಆಪ್ತರಿಷ್ಟರನ್ನು ಕಾಣಿಸಿಕೊಳ್ಳಲು ಬೀದಿಬೀದಿಗಳಗುಂಟ

ನಡೆದಿರುವ ನರನಾರಿಯರ ಮೇಳಗಳು ಬಹು ಶುಭಮಯವಾಗಿ ಕಂಡವು. ಸುಂದರಾಂಗಿಯರಾದ ಯುವತಿಯರು ಬಹು ಪರಿಷ್ಕಾರವಾದ ಉಡಿಗೆ ತೊಡಿಗೆಗಳನ್ನು ಮಾಡಿಕೊಂಡು, ಪರಿಮಳಯುತವಾದ ತಾಂಬೂಲ ರಾಗದಿಂದ ತಮ್ಮ ಬಿಂಬಾಧರಗಳನ್ನು ರಂಜಿಸಿ, ಎಳೆನಗೆಯಿಂದ ಕೂಡಿದ ಮಧುರಾಲಾಪಗಳನ್ನು ಮಾಡುತ್ತ, ಕೈಯಲ್ಲಿ ಎಳ್ಳು ಸಕ್ಕರೆ ಕಬ್ಬು ಹಣ್ಣುಹಂಪಲಗಳಿಂದ ತುಂಬಿದ ತಟ್ಟೆಗಳನ್ನು ತೆಗೆದುಕೊಂಡು, ಮೆಲ್ಲಡಿಗಳನ್ನಿಕ್ಕುತ್ತ ವಿಸ್ತಾರವಾದ ರಾಜಮಾರ್ಗದಲ್ಲಿ ಬರುತ್ತಿರುವದನ್ನು ಕಂಡು, ಗಗನ ಮಾರ್ಗದಲ್ಲಿ ಮೆರೆಯುತ್ತಿರುವ ತಾರಾಸುಂದರಿಯರೇ ಇವರೆಂಬ ಭ್ರಮವಾಗುವಂತಿತ್ತು. ಈ ದಿವಸ ಎಲ್ಲರ ಮನೆಗಳಲ್ಲಿಯೂ ಸುಶೋಭೆ, ಎಲ್ಲರ ಮನಸ್ಸಿನಲ್ಲಿಯೂ ಆನಂದ, ಎಲ್ಲಿ ಹೋದಲ್ಲಿ ಉತ್ಸವ.

ತನ್ನ ತಂದೆಯ ಸ್ನೇಹಿತರೂ ದೂರಿನ ಆಪ್ತರೂ ಆದ ಮಾಧವರಾಯರ ಮನೆಗೆ ತರುಣನಾದ ಆನಂದರಾಯನು ಎಳ್ಳುಸಕ್ಕರೆಗಳನ್ನು ಕೊಡುವ ನಿಮಿತ್ತವಾಗಿ ಸಂಕ್ರಾಂತಿಯ ದಿನ ಸಾಯಂಕಾಲಕ್ಕೆ ಹೋದನು. ಮನೆಯವರೆಲ್ಲರೂ ಆನಂದರಾಯನನ್ನು ಆದರದಿಂದ ಕರೆದೊಯ್ದು ಕುಶಲ ಪ್ರಶ್ನಗಳನ್ನು ಮಾಡಿ ಸತ್ಕರಿಸಿದರು. ಆನಂದರಾಯನು ಅತ್ತಿತ್ತ ನೋಡಿ "ವತ್ಸಲೆಯೆಲ್ಲಿ?" ಎಂದು ಅವಳ ಸೋದರತ್ತೆಯಾದ ತಾರಮ್ಮನನ್ನು ಕೇಳಿದನು. ಸಮೀಪದಲ್ಲಿ ಇರುವದೊಂದು ಕೋಣೆಯ ಕಡೆಗೆ ತಾರಮ್ಮನು ಕೈಮಾಡಿ ತೋರಿಸಿದಳು. ಪಿಯಾನೋ ಪೇಟಿಯ ಸ್ವರದೊಂದಿಗೆ ವತ್ಸಲೆಯು ಬಹು ಮಂಜುಲವಾಗಿ ಹಂಸಧ್ವನಿರಾಗದಲ್ಲಿ—

ಮನಸು ಕರಗದೇಮಿ ಶ್ರೀ
ಮಾನಿನೀ ಮನೋಹರನೆ ||

ಎಂಬ ಪದವನ್ನು ಹಾಡುತ್ತಿದ್ದಳು. ಆನಂದರಾಯನು ಒಳಕ್ಕೆ ಪ್ರವೇಶ ಮಾಡಿದವನೇ ತಾಲ ಹಿಡಿದು "ಮನಸು ಕರಗದೇಮಿ ಶ್ರೀ" ಎಂದು ಹಾಡಿದನು. "ಆನಂದ! ಬಂದೆಯಾ? ಒಳ್ಳೇ ಸಮಯಕ್ಕೆ ಬಂದಿ. ಈ ಪದವನ್ನು ನೀನು ಸಂಪೂರ್ಣವಾಗಿ ಹಾಡಿತೋರಿಸಬಾರದೆ? ನನಗೆ ಮರೆತಂತಾಗಿದೆ." ಎಂದು ವತ್ಸಲೆಯು ತನ್ನ ಕಮನೀಯವಾದ ಕರಾಂಗುಲಿಗಳನ್ನು ಪೇಟಿಯಿಂದ ತೆಗೆದು ಕೊಂಚ ಮಂದಹಾಸಗೈದು ಕೇಳಿದಳು.

"ಇಂದು ನನ್ನ ಕಂಠವು ಚನ್ನಾಗಿಲ್ಲ. ವತ್ಸಲಾ, ನೀನೇ ಹಾಡು ತಪ್ಪಿದಲ್ಲಿ ಹೇಳಿಕೊಡುವೆನಂತೆ."

ವತ್ಸಲೆಯು ಹಾಡಲು ನಾಚಿಕೊಂಡವಳಾಗಿ ವಿಷಯಾಂತರವನ್ನು ಮಾಡಬೇಕೆಂದೆಣಿಸಿ, ಒಯ್ಯಾರದಿಂದೆದ್ದು ಮಾಡದೊಳಗಿನ ಬೆಳ್ಳಿಯ ಕರಡಿಗೆಯನ್ನು ತೆಗೆದು ಅದರೊಳಗಿಂದೆ ಸೆರೆ ಕುಸುರೆಳ್ಳು ತೆಗೆದುಕೊಂಡು ಬೆಳ್ಳಿಯ ಬಟ್ಟಲಿನಲ್ಲಿ ಹಾಕಿ ಅದನ್ನು ಆನಂದರಾಯನ ಮುಂದಿರಿಸಿ "ಆನಂದ, ಇಂದು ಸಂಕ್ರಮಣ. ಮೇಲೆ ಮಾಧುರ್ಯವುಳ್ಳದ್ದಾಗಿಯೂ ಒಳಗೆ ಸ್ನೇಹಯುತವಾಗಿಯೂ ಇರುವ ಈ ಎಳ್ಳುಸಕ್ಕರೆಯನ್ನು ತಿಂದು ಒಳ್ಳೇ ಮಧುರವಾದ ಮಾತಾಡುವವನಾಗು" ಎಂದು ಹೇಳಿದಳು.

ಆ ಚಾರ್ವಂಗಿಯು ಆದರದಿಂದ ಕೊಟ್ಟ ಎಳ್ಳುಸಕ್ಕರೆಯನ್ನು ಸಂತೋಷದಿಂದ ಸ್ವೀಕರಿಸಿ "ವತ್ಸಲೆ, ಇದನ್ನು ತಿನ್ನುವದರಿಂದ ಮಧುರವಾಗಿ ಮಾತಾಡಲು ಬರುತ್ತಿದ್ದರೆ, ಮಧುರಾಲಾಪೆಯಾದ ನೀನು ನಿತ್ಯದಲ್ಲಿಯೂ ಇದನ್ನೇ ಸೇವಿಸುತ್ತಿರುವೆಯಾಗಿ ತೋರುತ್ತದೆ." ಎಂದು ಆನಂದರಾಯನು ನಗುನಗುತ್ತ ನುಡಿದು ಆ ಎಳ್ಳು ಸಕ್ಕರೆಯನ್ನು ಬಾಯಲ್ಲಿ ಹಾಕಿಕೊಂಡನು.

"ಅರ್ಥಕ್ಕೆ ಅನರ್ಥವೆ? ಆನಂದರಾವ, ನಾನೆಂದು ಮಧುರಭಾಷಿಣಿಯಾಗಿದ್ದೆನು? ನಾಳೆ ನಿನ್ನ ಅರ್ಧಾಂಗಿಯಾಗಿ ಬರುವಾಕೆ ಮಧುರವಾದ ನುಡಿಗಳನ್ನಾಡಿ ನಿನ್ನ ಮನವನ್ನು ರಂಜಿಸುವಳು" ಎಂದು ನುಡಿದು ವತ್ಸಲೆಯು ನಕ್ಕಳು.

"ಎಂಥವಳು ಬಂದರೂ ಈ ಜಾಣ್ಮೆಯನ್ನು ನಿನ್ನ ಬಳಿಯಲ್ಲಿಯೇ ಕಲಿತುಕೊಂಡು ಹೋಗಬೇಕಲ್ಲದೆ ಮತ್ತೊಂದು ಮಾರ್ಗವಿಲ್ಲ."

ಈ ಸಂವಾದವನ್ನು ಬಾಗಿಲಲ್ಲಿ ನಿಂತು ಕೇಳುತ್ತಲಿದ್ದ ತಾರಮ್ಮನು ಒಳಕ್ಕೆ ಬಂದು ಆನಂದರಾಯನ ಭುಜದ ಮೇಲೆ ಕೈಯಿಟ್ಟು ವಿನೋದದಿಂದ "ಆನಂದ, ನಿನ್ನ ತಂದೆಯವರ ಪ್ರಮಾದಕ್ಕಾಗಿ ಈ ಮಧುರಭಾಷಿಣಿಯನ್ನು ನಿನ್ನ ಅರ್ಧಾಂಗಿಯನ್ನಾಗಿ ಮಾಡಿಕೊಳ್ಳುವ ಸಮಯವನ್ನು ಕಳಕೊಂಡು ಬಿಟ್ಟೆ. ಈ ರತಿದೇವಿಗೆ (ವತ್ಸಲೆಯ ಗದ್ದವನ್ನು ಹಿಡಿದು) ಏನಾಗಿತ್ತೆಂದು ನಿಮ್ಮ ತಂದೆಯವರು ನಿರಾಕರಿಸಿದರೋ ಕಾಣೆನು." ಎಂದು ನುಡಿದಳು.

ತಾರಮ್ಮನ ಮಾತು ಕೇಳಿ ಆನಂದರಾಯನ ಎದೆಯಲ್ಲಿ ಒಮ್ಮೆಲೆ ಅಲಗಿಕ್ಕಿ ಹೊಡೆದಂತಾಯಿತು. ಚಮತ್ಕಾರವಾದ ಮನೋವಿಕಾರಕ್ಕಾಗಿ ಅವನು ಭ್ರಮಿಷ್ಟನಂತೆ ದೇಹವ್ಯಾಪಾರಗಳನ್ನು ಮರೆತು ಶೂನ್ಯದೃಷ್ಟಿಯಾಗಿ ಕುಳಿತುಕೊಂಡನು. ತನ್ನ ಸೋದರತ್ತೆಯ ವಿಪರೀತವಾದ ವಿನೋದವನ್ನು ಕೇಳಿ ವತ್ಸಲೆಯು ಈಷನ್ಮಂದಸ್ಮಿತೆಯಾದರೂ ಕೂಡಲೆ ಬಲವತ್ತರವಾದ ಲಜ್ಜೆಯು ಅವಳ ನಗೆಯನ್ನೂ ಮುದವನ್ನೂ ಕೂಡಿಯೇ ತಗ್ಗಿಸಿಬಿಟ್ಟಿತು. ತಾರಮ್ಮನ ಮುಖವನ್ನಾಗಲಿ ಆನಂದರಾಯನ ಮುಖವನ್ನಾಗಲಿ ಕಣ್ಣೆತ್ತಿ ನೋಡಲು ಅವಳು ಅಸಮರ್ಥಳಾದಳು. ಆ ಸ್ಥಳದಲ್ಲಿ ಕುಳ್ಳಿರಲು ಕೂಡ ಧೈರ್ಯಸಾಲದೆ ವತ್ಸಲೆಯು ಮೆಲ್ಲನೆ ಹೊರಗೆ ನಡೆದಳು.

* * * *

ಆನಂದರಾಯನ ತಂದೆಯವರಾದ ರಘುನಾಥರಾಯರೂ ವತ್ಸಲೆಯ ತಂದೆಯವರಾದ ಮಾಧವರಾಯರೂ ಬಾಲ್ಯದ ಸ್ನೇಹಿತರು. ಇಬ್ಬರೂ ಒಂದೇ ಕಾಲೇಜದಲ್ಲಿ ವಿದ್ಯಾರ್ಜನವನ್ನು ಮಾಡಿ ಇಬ್ಬರೂ ಮೈಸೂರ ಸಂಸ್ಥಾನದಲ್ಲಿ ದೊಡ್ಡ ಅಧಿಕಾರಿಗಳಾದರು. ಪೂರ್ವಕಾಲದ ಕೆಲವೊಂದು ಶರೀರಸಂಬಂಧಕ್ಕಾಗಿಯೂ ಕಾಲೇಜದ ಸ್ನೇಹಕ್ಕಾಗಿಯೂ ರಘುನಾಥರಾಯರೂ ಮಾಧವರಾಯರೂ ಒಂದೇ ಮನೆಯವರಂತೆ ನಡಕೊಳ್ಳುತ್ತಿದ್ದರು. ಮಾಧವರಾಯರೂ ಅವರ ಮನೆಯವರೂ ವತ್ಸಲೆಯನ್ನು ಚಪಲನೂ ಸುಂದರನೂ ಆಗಿರುವ ಆನಂದರಾಯನಿಗೆ ಕೊಡುವ ವಿಚಾರವನ್ನು ಮಾಡಿದ್ದರು. ಆ ವಿಚಾರವು ರಘುನಾಥರಾಯರಿಗೂ ಸಮ್ಮತವಾಗಿತ್ತು. ಎಲ್ಲರೂ ವತ್ಸಲೆಗೆ ಆನಂದನ ಹೆಂಡತಿಯೆಂದು ಕರೆಯಲಾರಂಭಿಸಿದರು. ಅತೀವ ಸುಂದರಿಯಾಗಿದ್ದ ಆ ಮುದ್ದುಮಗುವು ಈ ಮಾತು ಕೇಳಿ ನಕ್ಕು ಗಂಡನೆಂದರೆ ಯಾವ ಸಂಬಂಧಿಕನೆಂಬದನ್ನರಿಯದಿದ್ದರೂ ಆನಂದನನ್ನು ಕಂಡು ನಾಚಿ ಓಡಿಹೋಗಲಾರಂಭಿಸಿದಳು. ಆನಂದನಾದರೂ ವತ್ಸಲೆಯನ್ನು ಕಂಡು ಮಾತಾಡಿಸಲರಿಯದೆ ಅವಳಿಂದ ದೂರದಲ್ಲಿಯೇ ಇರುವನು. ಇದಕ್ಕೇನು ಕಾರಣ? ಪ್ರೇಮವೆ? ಛೇ! ಎಳೆಮಕ್ಕಳವರು. ಜನರು ತಮಗೆ ಗಂಡಹೆಂಡರೆಂದು ಕರೆಯುತ್ತಾರೆಂಬ ಸಂಗತಿಯೇ ಅವರ ಈ ಆಚರಣಕ್ಕೆ ಕಾರಣವಾಗಿತ್ತು.

ಬರಬರುತ್ತಿ ಸುಧಾರಕ ಸಮಾಜ, ಪ್ರಾರ್ಥನಾ ಸಮಾಜ, ಬ್ರಹ್ಮ

ಸಮಾಜ ಮುಂತಾದ ಸಂಘಗಳು ದೇಶದಲ್ಲಿ ಮೆಲ್ಲಮೆಲ್ಲನೆ ಕಾಲಿಡಲಾರಂಭಿ
ಸಿದವು. ಈ ಸಂಘದವರಿಗೂ ಕರ್ಮನಿಷ್ಠರಿಗೂ ಅಖಂಡವಾದ ವಾಗ್ವಾದ
ನಡೆದು ಅಲ್ಲಲ್ಲಿ ಪಕ್ಷಪರಪಕ್ಷಗಳುಂಟಾಗಿ ಆಪ್ತರಿಷ್ಟರೂ ಬಂಧುಬಾಂಧವರೂ
ಬೇರೆ ಬೇರೆ ಪಕ್ಷಗಳಿಗೆ ಸೇರಿ ಪರಸ್ಪರರೊಡನೆ ಹಗೆಗಳಂತೆ ನಡಕೊಂಡರು.
ಮಾಧವರಾಯರು ಸುಧಾರಣಾಸಂಘಕ್ಕೆ ಸೇರಿದ್ದರಿಂದ ಅವರಿಗೂ ರಘು
ನಾಥರಾಯರಿಗೂ ವೈಮನಸ್ಸು ಉಂಟಾದ್ದರಿಂದ ವತ್ಸಲಾ ಆನಂದರ ವಿವಾ
ಹದ ವಿಚಾರವು ಮುರಿದುಹೋಯಿತು. ಆದರೆ ಆನಂದ ವತ್ಸಲೆಯರಿಗೆ
ಅದರ ಚಿಂತೆಯೇನು? ನಿಷ್ಕಾರಣವಾಗಿರುವ ನಿರ್ಬಂಧವು ಕಡಿದಂತಾಗಿ
ಅವರು ಮತ್ತೆ ಸಂತೋಷದಿಂದ ಕೂಡಿ ಆಡಲಾರಂಭಿಸಿದರು.

ಆಗಿನ ಕಾಲದ ಸುಧಾರಣೆಯೆಂದರೆ ಬ್ರಾಹ್ಮಣರಲ್ಲಿರುವ ಮಡಿಮೈಲಿಗೆ,
ಸ್ನಾನಸಂಧ್ಯೆ, ಭಸ್ಮಮುದ್ರಾಕ್ಷತೆಗಳನ್ನು ನಿಂದಿಸಿ ಸ್ವೇಚ್ಛೆಯಿಂದ ನಡೆಯು
ವದೂ ಪರಕೀಯರ ವೇಷಾಚರಣಗಳನ್ನು ಅನುಕರಿಸುವದೂ, ಬೇಕುಬೇಕಾ
ದವರಲ್ಲಿ ಉಂಡು ತಿಂದು ಬರುವದೂ ಇಷ್ಟೇ ಆಗಿತ್ತು. ಹೊರತಾಗಿ ಅನ್ವ
ರ್ಥಕವಾದ ಸುಧಾರಣೆಯ ವಿಚಾರಗಳು ಆ ಜನರ ಮನಸ್ಸಿನಲ್ಲಿ ಸೇರಿರಲಿಲ್ಲ.
ಇಲ್ಲವೆಂದರೆ ಬ್ರಾಹ್ಮಣಿಯರಾದ ವಿಧವೆಯರ ಪುನರ್ವಿವಾಹವೊಂದು ಅವರಿಗೆ
ಅಗತ್ಯವಾದ ವಿಷಯವಾಗಿತ್ತು.

ಇಂಥ ಪರಿಸ್ಥಿತಿಯಲ್ಲಿ ಮಾಧವರಾಯನ ಮಗಳಿಗೆ ತಕ್ಕವನಾದ ವರನು
ಸಿಕ್ಕದಾದನು. ಸುಧಾರಣಾ ಪಂಥದವರಲ್ಲಿ ಯೋಗ್ಯರಾದ ವರಗಳೇ ಇರಲಿಲ್ಲ.
ಪ್ರಾಚೀನ ಸಾಂಪ್ರದಾಯದವರಂತೂ ಮಾಧವರಾಯನನ್ನು ತಮ್ಮ ನೆಳಲಿಗೆ
ನಿಲ್ಲಗೊಡುತ್ತಿದ್ದಿಲ್ಲ. ವತ್ಸಲೆಯು ಲಾವಣ್ಯವತಿಯಾದ ತರುಣಿಯಾಗುತ್ತ
ಬಂದಳು. ಅವಳಿಗೆ ತಕ್ಕಮಟ್ಟಿಗೆ ಶಿಕ್ಷಣವೂ ದೊರೆತಿತ್ತು. ಮದುವೆಯನ್ನು
ಬಿಡುವದೆಂತು? ಮಾಡಬೇಕಾದರೆ ವರನೆಲ್ಲಿ? ಅನಿವಾರ್ಹಕ್ಕಾಗಿ ಸುಬ್ಬರಾಯ
ನೆಂಬ ಸುರಾಭಕ್ತನಾದ ಸುಧಾರಕನ ಮಗನಾದ ಗೋವಿಂದನೆಂಬವನಿಗೆ
ವತ್ಸಲೆಯನ್ನು ಕೊಡುವದು ಗೊತ್ತಾಯಿತು. ತಂದೆಯ ಗುಣಗಳೇ ಗೋವಿಂದ
ನಲ್ಲಿ. ತನ್ನ ಹೆಂಡತಿಯಾದ ವತ್ಸಲೆಯು ಯುರೋಪಿಯನ್ನರ ಬೂಟು
ಝುಗೆಗಳನ್ನು ಹಾಕುವದಕ್ಕೂ ಕುಂಕುಮ ಬಳೆಗಳನ್ನು ತೆಗೆದೊಗೆಯಲಿಕ್ಕೂ
ಒಪ್ಪಲಿಲ್ಲಾದ್ದರಿಂದ ಗಂಡಹೆಂಡಿರ ಸಮಾಗಮವಾಗುವದಕ್ಕೆ ಮುಂಚಿತ

ವಾಗಿಯೇ ಗೋವಿಂದನು ಸಿಟ್ಟಾಗಿ ಎದ್ದುಹೋಗಿ ಎಲ್ಲಿಯೋ ಒಂದು ಇಂಗ್ಲಿಶ್ ಹಾಟೆಲ್ಲಿನಲ್ಲಿ ಕಾರಕೂನನಾಗಿ ಇದ್ದುಕೊಂಡನು.

ಈ ಸಂಗತಿಯಿಂದ ಮಾಧವರಾಯರ ಮನೆಗೆ ಒಂದು ವಿಪತ್ತೇ ಬಂದಂತಾಗಿತ್ತು. ಆದರೆ ಮಾಡುವದೇನು? ವತ್ಸಲೆಯು ಇನ್ನೂ ಅಪ್ರಬುದ್ಧೆಯಾದ ತರುಣಿಯು. ಮಾಧವರಾಯರು ಅವಳನ್ನು ವಿದ್ಯಾಭ್ಯಾಸದಲ್ಲಿ ತೊಡಗಿಸಿದ್ದರಿಂದ ಆ ಬಾಲೆಯು ತನಗುಂಟಾದ ಆಪತ್ತಿಗೆ ಈಡಾಗದೆ ಕಾವ್ಯನಾಟಕಗಳನ್ನು ಓದುವದರಲ್ಲಿಯೂ ಗಾನ-ವಾದನಗಳಲ್ಲಿ ಮನಸ್ಸು ಹಾಕುತ್ತಲೂ ದಕ್ಷತೆಯಿಂದ ಮನೆಕೆಲಸಗಳನ್ನು ಮಾಡುತ್ತಲೂ ಇದ್ದಳು.

ಆನಂದರಾಯನು ಕಾಲೇಜಿನಲ್ಲಿ ಆಸ್ಥೆಯಿಂದ ವಿದ್ಯಾರ್ಜನವನ್ನು ಮಾಡಿ ಬೀ.ಏ. ಪರೀಕ್ಷೆಯಲ್ಲಿ ಉತ್ತೀರ್ಣನಾಗಿದ್ದನು. ಮುಂದಿನ ವ್ಯಾಸಂಗಕ್ಕಾಗಿ ಮತ್ತೆ ಅವನು ಕಾಲೇಜಿಗೆ ಹೋಗತಕ್ಕವನು. ಬುದ್ಧಿವಂತನಾಗಿರುವ ತನ್ನ ಏಕಾಕಿಯಾಗಿರುವ ಮಗನ ಮದುವೆಯನ್ನು ಅವನ ಇಚ್ಛಾನುಸಾರವಾಗಿ ಮಾಡಬೇಕೆಂದು ರಘುನಾಥರಾಯರು ಆನಂದನ ಮದುವೆಯ ವಿಚಾರವನ್ನು ಸದ್ಯಕ್ಕೆ ಮಾಡದಲೆ ಇದ್ದರು.

ಇಂಥ ಸಮಯದಲ್ಲಿ ಒದಗಿದ ಸಂಕ್ರಾಂತಿಯ ದಿವಸದಲ್ಲಿ ಆನಂದರಾಯನು ವತ್ಸಲೆಯ ಮನೆಗೆ ಬಂದಿದ್ದನು.

ವತ್ಸಲೆಯ ಲಗ್ನವು ಗೋವಿಂದನೊಡನೆ ಆಗುವ ವರೆಗೆ, ಅವಳು ತನ್ನ ಹೆಂಡತಿಯಾದರೆ ಒಳಿತಾಗುವದೆಂದು ಆನಂದನ ಅಭಿಪ್ರಾಯವಾಗಿತ್ತು. ಪ್ರೌಢರಾದವರ ದುರ್ಧರವಾದ ಪ್ರೇಮನಿರ್ಭರವು ಅವನ ಮನಸ್ಸಿನಲ್ಲಿ ಹುಟ್ಟಿರದಿದ್ದರೂ ವತ್ಸಲೆಯ ಕಾಂತಿಮಯವಾದ ರೂಪವೂ ಅವಳ ಅಂಗಸೌಷ್ಠವವೂ ಅವಳ ಲಲಿತವಾದ ಮುಖಮುದ್ರೆಯೂ ಆನಂದರಾಯನ ಮನಸ್ಸಿನಲ್ಲಿ ಒಳಿತಾಗಿ ನೆಟ್ಟಿದ್ದವು. ಆದರೇನು? ತನ್ನ ತಂದೆಗೂ ಮಾಧವರಾಯರಿಗೂ ಉಂಟಾದ ವಿರೋಧಕ್ಕಾಗಿ ತನ್ನ ಮನದೆಣಿಕೆಯು ಬಯಲಾಗುವದೆಂದು ನೆನಿಸಿ ಅವನು ವಿಷಾದವನ್ನು ತಳೆದಿದ್ದನು. ಕಡೆಗೆ ವತ್ಸಲೆಯು ಅನ್ಯರ ವಸ್ತುವೇ ಆಗಿಹೋದಳು. ಆನಂದರಾಯನು ದೈವಲೀಲೆಯ ವೈಚಿತ್ರ್ಯವನ್ನು ವೇದಾಂತಿಯಂತೆ ವಿಮರ್ಶಿಸಿ ಕೈಮೀರಿ ಹೋದ ಮಾತಿಗೆ ದುಃಖಿಸದೆ ಸಮಾಧಾನವನ್ನು ತಳೆದುಕೊಂಡಿದ್ದನು. ಭದ್ರವಾಗಿ ಕಟ್ಟಿದ ಕೆರೆಯು

ಅದೃಷ್ಟಪೂರ್ವವಾದ ಕಾರಣಕ್ಕಾಗಿಯೇ ಒಡೆಯಬೇಕಲ್ಲದೆ ಸಹಸಾ ಅದಕ್ಕೆ ಅಪಾಯವಿಲ್ಲವಷ್ಟೆಯೇ. ಅದರಂತೆಯೇ ಸುವಿಚಾರಗಳಿಂದ ಧೃತವಾದ ಆನಂದರಾಯನ ಮನೋವಿಕಾರವು ನಿರ್ಬಂಧದಲ್ಲಿಯೇ ಉಳಿದಿತ್ತು. ವತ್ಸಲೆಯ ಮನೆಗೆ ಅವನು ಆಗಾಗ್ಗೆ ಹೋಗುತ್ತಿದ್ದರೂ ನಿಶ್ಚಯಿಯಾದ ಆ ತರುಣನು ಸಮಾಹಿತ ಚಿತ್ತವುಳ್ಳವನಾಗಿ ಅವಳೊಡನೆ ನಿಷ್ಕಲಂಕವಾದ ಭಾವದಿಂದ ಮಾತುಕಥೆಗಳನ್ನಾಡುತ್ತಿದ್ದನು. ಆದರೆ ದಿನೇ ದಿನೇ ಅಭಿವೃದ್ಧಿಯನ್ನು ಹೊಂದುತ್ತಿರುವ ವತ್ಸಲೆಯ ಸೌಂದರ್ಯವು ಅವನ ದೃಷ್ಟಿಗೆ ಹೊಳೆಯದಿರುವದು ಹೇಗೆ ? ಇರಲಿ. ಆ ದಿವಸ ತಾರಮ್ಮನು ಆಡಿದ ಅವಿವೇಕವಾದ ವಿನೋದದ ನುಡಿಗಳನ್ನು ಕೇಳಿ ಆನಂದರಾಯನ ಮನಸ್ಸಿಗೆ ದುರ್ಧರವಾದ ಪೆಟ್ಟು ತಗಲಿತು. ತಾನು ವತ್ಸಲೆಯ ಪತಿಯಾಗಲಿಲ್ಲವೆಂಬ ವ್ಯಸನವು ಅವನ ಹೃದಯವನ್ನು ವ್ಯಾಪಿಸಿ ಸುಡಲಾರಂಭಿಸಿತು. ಆದರೆ ವಿದ್ವಾಂಸನೂ ಸುಶೀಲನೂ ಆದ ಆ ತರುಣನು ಮತಿಭ್ರಮವನ್ನು ಗೆದ್ದು ಬೇಗನೆ ಎಚ್ಚತ್ತವನಾಗಿ ಮಾಧವರಾಯನ ಮನೆಯಲ್ಲಿನ್ನು ಕಾಲಿಡಕೂಡದೆಂದು ನಿಶ್ಚಯಿಸಿಕೊಂಡು ಚಟ್ಟನೆ ಎದ್ದು ತನ್ನ ಮನೆಗೆ ಹೊರಟುಹೋದನು.

ಪಾಪ ! ಅಬಲೆಯೂ ದುರ್ಬಲವಾದ ಧೈರ್ಯವುಳ್ಳವಳೂ ಚಿಕ್ಕವಳೂ ಆದ ವತ್ಸಲೆಯ ಮನಸ್ಸಿನ ಸ್ಥಿತಿಯು ಏನಾಗಿರಬಹುದು ? ಬಾಲ್ಯದಲ್ಲಿ ವಿನೋದಕ್ಕಾಗಿ ಅವಳ ತಾಯಿತಂದೆಗಳೇ ಅವಳಿಗೆ ಆನಂದನ ಹೆಂಡತಿಯೆಂದು ಕರೆಯುತ್ತಿದ್ದರು. ತನ್ನ ತಂದೆಗೂ ರಘುನಾಥರಾಯರಿಗೂ ಉಂಟಾದ ವಿರೋಧದ ತರುವಾಯವಾದರೂ ವತ್ಸಲೆಯ ತಾಯಿಯು ಹೇಗಾದರೂ ಮಾಡಿ ತನ್ನ ಮಗಳನ್ನು ಆನಂದನಿಗೇ ಕೊಡುವೆನೆಂಬ ಮಾತುಗಳನ್ನು ಕೇಳಿ ಆ ಬಾಲಿಕೆಯ ಮನಸ್ಸಿನಲ್ಲಿ ಒಂದು ಪ್ರಕಾರದ ಕುತೂಹಲವು ಉಂಟಾಗಿತ್ತು. ವತ್ಸಲೆಯ ಖೇದಜನಕವಾದ ವಿವಾಹಾನಂತರವಾದರೂ ಮನೆಯವರೆಲ್ಲರೂ ಅವಳನ್ನು ಆನಂದರಾಯನಿಗೆ ಕೊಟ್ಟಿದ್ದರೆ ಒಳಿತಾಗುತ್ತಿತ್ತೆಂದು ನೆನಿಸಿ ಹಳಹಳಿಸುವದನ್ನು ಕಂಡು ಅವಳ ಮನೋವೃತ್ತಿಯಾದರೂ ಅವರಂತೆಯೇ ಆಗಿತ್ತೆಂದು ಹೇಳಿದರೆ ಶಿಷ್ಟರೆಂಬವರು ಈ ಲೇಖಕನನ್ನು ನಿಂದಿಸುವರೆಂದು ನಾವು ನಂಬುವದಿಲ್ಲ. ಮನುಷ್ಯ ಸ್ವಭಾವವಿದು. ಶಿಷ್ಟರು ಬೇಕಾದರೆ ತಮ್ಮ ಮನಸ್ಸುಗಳನ್ನೇ ಸಂಶೋಧಿಸಿ ನೋಡಿಕೊಳ್ಳಲಿ. ಕಮನೀಯವಾದ ವಸ್ತು

ಗಳನ್ನು ಕಂಡರೆ ಮನಸ್ಸಿನಲ್ಲಿ ಆಕಾಂಕ್ಷೆಯುಂಟಾಗುವದು ಸಹಜವೇ. ಕೆಲವೊಂದು ಪರಿಸ್ಥಿತಿಯಲ್ಲಿ ಆಕಾಂಕ್ಷೆಯು ಪ್ರಶಂಸನೀಯವಾದದ್ದಾಗಿಯೂ ಬೇರೊಂದು ಪರಿಸ್ಥಿತಿಯಲ್ಲಿ ಅದು ಅಪ್ರಶಸ್ತವಾಗಿಯೂ ಇರುವದು. ಹೀಗೆ ಅವಶ್ಯವಾಗಿ ಉಂಟಾಗುವ ಅಪ್ರಶಸ್ತವಾದ ಆಕಾಂಕ್ಷೆಯನ್ನು ವಿವೇಕದಿಂದ ನಿಗ್ರಹಿಸುವದೇ ಮಹಾತ್ಮರ ಲಕ್ಷಣವು.

ತನ್ನ ಸೋದರತ್ತೆಯಾಡಿದ ಮಾತು ಕೇಳಿ ವತ್ಸಲೆಯು ಬಲವತ್ತರವಾಗಿ ಲಜ್ಜಿತಳಾದಳೆಂದು ನಾವು ಮೇಲೆ ಹೇಳಿದೆವಷ್ಟೆ? ಆ ನುಡಿ ಕೇಳಿ ಆನಂದರಾಯನ ಮನಸ್ಸಿನಲ್ಲುಂಟಾದ ಭಾವನೆಯಾದರೂ ಅವಳಿಗೆ ವಿದಿತವಾಗದೆ ಇರಲಿಲ್ಲ. ಲಜ್ಜೆಯಲ್ಲದೆ ಇನ್ನೂ ಅನೇಕವಾದ ವಿಕಾರಗಳು ಅವಳ ಮನಸ್ಸಿನಲ್ಲಿ ಉದ್ಭವಿಸಿದ್ದವು. ತಾನು ಕುಳಿತಿದ್ದ ಕೋಣೆಯಿಂದೆದ್ದು ಹೊರಬಿದ್ದು ಬಂದರೂ ಅವಳ ಚಿತ್ತಕ್ಕೆ ಸ್ವಾಸ್ಥ್ಯವಿರಲಿಲ್ಲ. ಅವಳು ಮನೆಯಲ್ಲಿ ಅತ್ತಿತ್ತ ಅಡ್ಡಾಡಿ ನೋಡಿದಳು. ಎಲ್ಲಿಯೂ ಶಾಂತಿ ದೊರಕಲಿಲ್ಲ ಉದ್ವೇಗದಿಂದ ಅವಳ ಎದೆಯು ಉಬ್ಬಿಕೊಂಡಿತು. ಮೈಯೆಲ್ಲ ಕಾದುಹೋಗಿತ್ತು. ಕಣ್ಣುಗಳಲ್ಲಿ ವೈಚಿತ್ರ್ಯವು ಕಂಡಿತು. ಅವಳ ಹೃದಯದಲ್ಲಿ ನಟ್ಟಿರುವ ಅವದೋ ಒಂದು ಪ್ರಕಾರದ ಶಲ್ಯವು ಆಗಾಗ್ಗೆ ಅಸಹ್ಯವಾದ ವೇದನೆಯನ್ನು ಉಂಟುಮಾಡುತ್ತಿತ್ತು. ತನಗುಂಟಾದ ಅವಸ್ಥೆಯ ಕಾರಣವನ್ನು ವತ್ಸಲೆಯು ಅರಿತವಳಾಗಿದ್ದಳು. ಆದರೆ ಅಂಥ ವಿಕಾರಕ್ಕೆ ಆಸ್ಪದವನ್ನು ಕೊಡುವದು ಕೇವಲವಾದ ಪಾಪವೇ ಅಲ್ಲವೆ? ಆದರೆ ಅದನ್ನು ಮೆಟ್ಟಿ ಹಾಕುವದಕ್ಕೆ ಯೋಗಿಯಾದವನ ಬಲವು ಬೇಕಲ್ಲ! “ ಆದಿ-ಶಕ್ತಿಯಾದ ಜಗದಂಬೆಯೇ ಇಂಥ ಬಲವನ್ನು ನನಗೆ ಕರುಣಿಸು ಕಂಡಿಯಾ! ” ಎಂದು ವತ್ಸಲೆಯು ಕಣ್ಣೀರು ಸುರಿಸುತ್ತ ಬೇಡಿಕೊಂಡಳು.

*

“ ಆನಂದ, ” ಎಂದು ರಘುನಾಥರಾಯರು ತಮ್ಮ ಮಗನನ್ನು ಕೂಗಿ ಕರೆದರು. ಆನಂದರಾಯನು ವಿನಯದಿಂದ ತಂದೆಯ ಸನ್ನಿಧಾನದಲ್ಲಿ ಬಂದು ನಿಂತುಕೊಂಡ ಮೇಲೆ ರಾಯರು ಮಗನನ್ನು ಕಂಡು ಸಂತೋಷದಿಂದ ನಕ್ಕು ಕೆಲವು ಪತ್ರಗಳನ್ನೂ ಕನ್ಯೆಯರ ಫೋಟೋಗ್ರಾಫುಗಳನ್ನೂ ಆವನ ಸ್ವಾಧೀನ ಮಾಡಿ “ ಇದು ನೋಡು, ಇಂತಿಷ್ಟು ಜನ ಮಹನೀಯ

ರಾದ ನನ್ನ ಸ್ನೇಹಿತರು ನಮ್ಮೊಡನೆ ಶರೀರಸಂಬಂಧವನ್ನು ಬೆಳಿಸಲಿಚ್ಛಿಸು ವರು. ಈ ಫೋಟೋಗ್ರಾಫಗಳನ್ನು ನೋಡಿಕೊಂಡು ನನಗೆ ತಿಳಿಸು" ಎಂದು ಹೇಳಿದರು. ಆನಂದರಾಯನು ಕಿಂಚಿತ್ ಲಜ್ಜಿತನಾಗಿ ನಿಂತು ಕೊಂಡನು.

"ಈ ಮಾತಿನಲ್ಲಿ ನಾಚುವದೇಕೆ ಆನಂದ? ಅವುಗಳನ್ನು ತೆಗೆದು ಕೊಂಡು ಚನ್ನಾಗಿ ಪರೀಕ್ಷಿಸು. ನಿನ್ನ ಮನಸ್ಸಿಗೆ ಬಂದ ಕನ್ನೆಯನ್ನು ಪ್ರತ್ಯಕ್ಷ ವಾಗಿ ನೋಡುವ ಅಪೇಕ್ಷೆಯುಂಟಾದಲ್ಲಿ ನೋಡಿಯೂ ಬರಬಹುದು. ಹೋಗು" ಎಂದು ರಘುನಾಥರಾಯರು ಮಗನಿಗೆ ಅಪ್ಪಣೆ ಕೊಟ್ಟು ಕಳಿಸಿದರು.

ಆನಂದರಾಯನು ತನ್ನ ಕೋಣೆಗೆ ಹೋಗಿ ಅನಾಸ್ಥೆಯಿಂದ ಆ ಚಿತ್ರ ಗಳನ್ನೆಲ್ಲ ನೋಡಿ ಇಟ್ಟುಬಿಟ್ಟು ಸುಮ್ಮನೆ ಮುಗ್ಧನಂತೆ ಕುಳಿತುಕೊಂಡನು. ತನಗಿಷ್ಟಳಾದ ಹೆಂಡತಿಯು ಈ ಚಿತ್ರಗಳಲ್ಲಿ ರೇಖಿಸಿದ ಕನ್ನೆಯರಲ್ಲಿ ಯಾವ ಳೆಂದು ಅವನು ಮತ್ತೆ ಅವುಗಳನ್ನು ನಿರೀಕ್ಷಿಸಿ ನೋಡಲಾರಂಭಿಸಿದನು. ಆದರೇನು? ಚಿತ್ರವು ಕೈಯಲ್ಲಿ, ಕಣ್ಣುಮುಂದೆ ವತ್ಸಲೆಯ ಲಜ್ಜಾಗ್ರಸ್ತವಾದ ಸುಂದರ ಮೂರುತಿಯು. ಯಾವ ಚಿತ್ರವನ್ನು ನೋಡಿದರೂ ವತ್ಸಲೆ ಅಡ್ಡಾಗಿ ಬಂದು ನಿಂತಳೇ. ಆನಂದನು ಆ ಚಿತ್ರಗಳನ್ನೆಲ್ಲ ಭರ್ರನೆ ಬೀಸಾಡಿ ತನ್ನ ಮಂಚದ ಮೇಲೆ ಬಿದ್ದುಕೊಂಡನು.

ಕೆಲಹೊತ್ತಿನ ಮೇಲೆ ಆನಂದರಾಯನು ನಿಟ್ಟುಸುರಿಟ್ಟು "ವತ್ಸಲೆ, ನೀನು ನನ್ನ ಪಾಲಿಗೆ ಸತ್ತಂತಾಗಿರುವಿ, ನಾನೇನು ಮಾಡಲಿ?" ಎಂದು ವ್ಯಸನದಿಂದ ಕೂಗಿಕೊಂಡನು.

ಎರಡು ಮೂರು ದಿವಸಗಳಾದರೂ ಆನಂದನು ತನ್ನ ಅಭಿಪ್ರಾಯ ವನ್ನು ತಿಳಿಸಲಿಲ್ಲೆಂದು ಕಂಡು ರಘುನಾಥರಾಯರು ಅವನನ್ನು ಕುರಿತು "ಯಾಕೆ ಆನಂದ, ಚಿತ್ರಗಳಲ್ಲೊಂದಾದರೂ ಮನಸ್ಸಿಗೆ ಬರಲಿಲ್ಲವೊ? ಕವಿನಿರ್ಮಿತಳಾದ ಸುಂದರಿಯು ಈ ಜಗತ್ತಿನಲ್ಲಿ ಸಿಕ್ಕುವದು ಕಷ್ಟವೆಂಬ ದನ್ನು ನೀನು ಮರೆಯಲಾಗದು. ಆದರೂ ಆ ಚಿತ್ರಗಳಲ್ಲಿ ಒಂದನ್ನು ನೀನು ಆರಿಸಿಕೊಳ್ಳಲೇಬೇಕೆಂದು ನಾನು ಆಗ್ರಹಪಡುವದಿಲ್ಲ. ಮತ್ತೆ ನೋಡೋ ಣಂತೆ." ಎಂದು ನಗೆಮುಖವನ್ನು ತಳೆದೇ ನುಡಿದರು.

ಆನಂದರಾಯನಿಗೆ ಬಿಟ್ಟರೆ ಸಾಕಾಗಿತ್ತು. ಅವನು ಪೋಷಾಕುಮಾಡಿ ಕೊಂಡು ತಿರುಗಾಡಲಿಕ್ಕೆ ಹೋದನು.

"ಎಲ್ಲಿಯ ಮದುವೆ, ಏನು ಕಥೆ! ವಿವಾಹಿತನಾಗಿ ಸಂಸಾರಸುಖ ವನ್ನು ಅನುಭವಿಸುವದನ್ನು ಬ್ರಹ್ಮದೇವರು ನನ್ನ ಹಣೆಯಲ್ಲಿಯೇ ಬರೆಯ ಲಿಲ್ಲ!" ಎಂದು ಉದ್ಗಾರವನ್ನು ತೆಗೆದು ರಾಜಮಾರ್ಗವನ್ನು ಹಿಡಿದು ನಡೆದಿರುವ ಆನಂದರಾಯನಿಗೆ ಜನಸಮ್ಮರ್ದಿತವಾದ ಆ ಮಾರ್ಗವು ನಿರ್ಜನ ವಾಗಿ ತೋರಿತು. ಪ್ರಬಲವಾದ ವಿಚಾರದಲ್ಲಿ ನಿಮಗ್ನನಾಗಿ ನಡೆದಿರುವ ಆ ವಿಮನಸ್ಕನಿಗೆ ಮಾರ್ಗದಲ್ಲಿ ಹೋಗಿಬರುವವರ ಅರಿಕೆಯೇ ಇರಲಿಲ್ಲ. ತಿರುಗಾಡುತ್ತೆ ತಿರುಗಾಡುತ್ತೆ ಅವನು ಅನೇಕವಾದ ಆಲೋಚನೆಗಳನ್ನು ಮಾಡಿಕೊಂಡು ಮನೆಗೆ ಬಂದನು.

* * * *

"ಅವಶ್ಯ ಹೋಗು, ಯಾರು ಬೇಡೆನ್ನುತ್ತಾರೆ? ನಿನ್ನಂಥ ಸುಶಿಕ್ಷಿತ ನಾದ ತರುಣನಿಗೆ ಪ್ರವಾಸದ ಅನುಭವವು ದೊರಕಿದರೆ ಬಂಗಾರವೇ ಆಗು ವದು." ಎಂದು ರಘುನಾಥರಾಯರು ಆನಂದರಾಯನ ವಿಜ್ಞಾಪನೆಯನ್ನು ಮನ್ನಿಸಿ ಹೇಳಿದರು.

"ಸಾವಕಾಶವಾಗಿ ಪ್ರಸಿದ್ಧವಾದ ಸ್ಥಳಗಳನ್ನು ನೋಡಿಕೊಳ್ಳುತ್ತ ಹೋದರೆ ನನಗೆ ನಾಲ್ಕಾರು ತಿಂಗಳುಬೇಕು."

"ಬೇಕೇ ಬೇಕು. ಹಾಗಿಲ್ಲದಿದ್ದರೆ ಪ್ರವಾಸದಿಂದಾಗುವ ಪ್ರಯೋ ಜನವೇನು? ನಿನಗೆ ಸಾಕಷ್ಟು ಹಣವನ್ನು ಕೊಡುತ್ತೇನೆ. ಯಥಾವಕಾಶ ವಾಗಿ ಪ್ರವಾಸ ಮಾಡಿ ನಿನ್ನ ಪ್ರವಾಸದ ಸಮಾಚಾರವನ್ನೆಲ್ಲ ಒಂದು ಪುಸ್ತಕ ರೂಪವಾಗಿ ಬರೆದಿಡುವ ಯತ್ನ ಮಾಡು." ಎಂದು ಪುತ್ರವತ್ಸಲರಾದ ರಾಯರು ಸಂತೋಷದಿಂದ ಹೇಳಿದರು.

* * * *

ತನ್ನ ಮನಸಿನಲ್ಲಿ ಉದ್ಭವಿಸಿದ ಮನೋವಿಕಾರಗಳನ್ನು ಎಷ್ಟು ಪ್ರಕಾರ ದಿಂದಲೂ ನಿಗ್ರಹಿಸಬೇಕೆಂದು ವತ್ಸಲೆಯು ನಿಶ್ಚಯಿಸಿಕೊಂಡಳು. ಗಾನ ವಾದನ ಚಿತ್ರಕಲೆ ಕಶೀದೆ ಮುಂತಾದ ಲಲಿತಕಲೆಗಳ ಹವ್ಯಾಸವನ್ನು ಅವಳು ನಿರಾಕರಿಸಿದಳು. ಏಕಾಂತದಲ್ಲಿ ಕುಳಿತು ವಿಚಾರಗಳಿಗೆ ಈಡಾಗದಂತೆ

ಅಹರ್ನಿಶವಾಗಿ ಅವಳು ಮನೆಯ ಕೆಲಸಗಳನ್ನು ಮಾಡಲಾರಂಭಿಸಿದಳು. ದೇವರಿಗೆ ಹತ್ತಿ ಬತ್ತಿಗಳನ್ನೂ ಹೂ ತುಲಸಿಗಳ ಮಾಲೆಗಳನ್ನೂ ತಪ್ಪದೆ ಮಾಡುವಳು. ಆದರೆ ಇದನ್ನೆಲ್ಲ ತಾನೇಕೆ ಮಾಡುತ್ತಿರುವೆನೆಂಬ ವಿಚಾರವು ಅವಳಲ್ಲಿ ಉದ್ಭವಿಸಿದಾಕ್ಷಣವೇ ಅವಳ ಎದೆಯಲ್ಲಿ ಉಲಕುತ್ತಿರುವ ಶಲ್ಯವು ಬಹು ತೀಕ್ಷ್ಣವಾದ ವೇದನೆಯನ್ನು ಕೊಡುತ್ತಿತ್ತು. ಯಾವದಾದರೊಂದು ಸಂಗತಿಯನ್ನು ನಾವು ಪ್ರಯತ್ನಪೂರ್ವಕವಾಗಿ ಮರೆತುಬಿಡಬೇಕೆಂದರೆ ಆ ಸಂಗತಿಯು ನಮ್ಮ ಸ್ಮರಣದಲ್ಲಿ ವಜ್ರಲೇಪವಾಗಿಯೇ ಉಳಿಯುವದೇ ಕೊರ ತಾಗಿ ಅದು ನಮ್ಮಿಂದ ಸರ್ವಥಾ ಮರೆಯಾಗಲರಿಯದೆಂಬದು ಅನುಭವಸಿದ್ಧ ವಾದ ಮಾತು. ಇದಕ್ಕಾಗಿ ವತ್ಸಲೆಯು ತನ್ನ ಪತಿಯ ಬಳಿಗೆ ಹೋಗಿರ ಬೇಕೆಂದು ಚಿಂತಿಸಿ, ತನ್ನ ಅಪರಾಧಗಳನ್ನೆಲ್ಲ ಕ್ಷಮಿಸಿ ತನ್ನನ್ನು ಕರೆದುಕೊಂಡು ಹೋಗಬೇಕೆಂದು ಬಹು ಅನುನಯಯುತವಾದ ಪತ್ರವನ್ನು ಬರೆದು ಕೊಂಡಳು.

ಸಚ್ಛೀಲೆಯಾದ ತರುಣಿಯವಳು. ಪ್ರಬುದ್ಧೆಯಾದ ಬಳಿಕ ದಾಂಪತ್ಯ ಧರ್ಮವನ್ನರಿತವಳಾಗಿ ವತ್ಸಲೆಯು ಅಗ್ನಿಸಾಕ್ಷಿಯಾಗಿ ತನ್ನ ಕೈಯನ್ನು ಗೋವಿಂದನಿಗೆ ಕೊಟ್ಟಿದ್ದಳಲ್ಲ? ತನ್ನ ಆಪ್ತವರ್ಗದವರು ಗೋವಿಂದನನ್ನು ಅವನ ಗುಣಗೇಡಿತನಕ್ಕಾಗಿ ಹಳಿಯುತ್ತಿದ್ದರೂ ಪತಿಯ ಸಮೀಪದಲ್ಲಿರು ವದು ತನಗೆ ಸರ್ವಥಾ ಭೂಷಣವೂ ಇಷ್ಟವೂ ಆಗಿ ಅವಳಿಗೆ ತೋರಿತು. ಗೋವಿಂದನು ದುರ್ಮಾರ್ಗಿಯಾಗಿದ್ದರೆ ಅವನನ್ನು ತಾನೆಂತಾದರೂ ಮಾಡಿ ಸನ್ಮಾರ್ಗಕ್ಕೆ ತರುವೆನೆಂದೂ ಏಕಾಕಿ ಕಷ್ಟಪಡುತ್ತಿರುವ ತನ್ನ ಪತಿಗೆ ತಾನು ಅನುಕೂಲೆಯಾಗಿ ವರ್ತಿಸಿದರೆ ಅವನ ಪ್ರೇಮವು ತನ್ನ ಮೇಲೆ ಉಂಟಾಗ ದಿರದೆಂದೂ ಚಿಂತಿಸಿ ಅವಳು ತನ್ನ ಗಂಡನಿಗೆ ಪತ್ರವನ್ನು ಬರೆದಿದ್ದಳು. ಇಂದು ನಾಳೆ ತನ್ನ ಪತಿಯು ಉತ್ತರವನ್ನು ಬರೆಯುವನೆಂದು ಆ ದೀನೆ ಯಾದ ಸತಿಯು ಆಸ್ಥೆಯಿಂದ ಮಾರ್ಗಪ್ರತೀಕ್ಷೆ ಮಾಡಿದಳು. ಉತ್ತರವೇ ಇಲ್ಲ. ಮತ್ತೊಂದು ಬರೆದಳು, ಮತ್ತೂ ಉತ್ತರವಿಲ್ಲ. ತಂದೆಯ ಕಡೆ ಯಿಂದ ಬರೆಸಿ ನೋಡಿದಳು. ಅದರ ಗತಿಯಾದರೂ ಹಾಗೆಯೇ ಆಯಿತು ಕಡೆಗೆ "ನೀವು ನನ್ನನ್ನು ಕರೆಯಿಸದಿದ್ದರೆ ನಾನೇ ತಮ್ಮ ಪಾದಸೇವೆಗಾಗಿ ಹೊರಟಿದ್ದು ಬರುವೆನು" ಎಂದು ಆ ಸಾಧ್ವಿಯು ಬರೆದುಕೊಂಡಳು. ಈ

ಪತ್ರಕ್ಕೆ ಮಾತ್ರ ಉತ್ತರ ಬಂದಿತು. ವಿಳಾಸದಲ್ಲಿ ಗೋವಿಂದನ ಹಸ್ತಾಕ್ಷರದ ಗುರುತು ಹಿಡಿದು ವತ್ಸಲೆಯು ಆಸ್ಥೆಯಿಂದ ಒಂದು ಆಣೆ ಅಂಚೇವೆಚ್ಚವನ್ನು ಕೊಟ್ಟು ಪತ್ರವನ್ನು ಬಿಚ್ಚಿ ಓದಲಾರಂಭಿಸಿದಳು. ಪತ್ರವನ್ನೋದುತ್ತಿರುವಾಗ ಆ ಕೋಮಲಾಂಗಿಯ ಸುವದನವು ವಿಷಾದ, ದುಃಖ, ಚಿಂತೆಗಳಿಂದ ಗ್ರಸ್ತವಾದಂತೆ ಕಂಡಿತು. ಕಡೆಗೆ ಸಂತಾಪದಿಂದವಳು ತನ್ನ ಕೆಂದುಟಿಯನ್ನು ಕಟ್ಟನೆ ಕಡಿದುಕೊಂಡು ಕಣ್ಣೀರು ಸುರಿದು ತನ್ನ ಮಂಚದ ಮೇಲೆ ಮುಗ್ಗಲಾಗಿ ಬಿದ್ದುಕೊಂಡಳು. ಆ ಪತ್ರವು ತನ್ನಿಂದ ತಾನೇ ಅಲ್ಲಿಯೇ ಕೆಳಗೆ ಬಿದ್ದಿತು. ವಾಚಕರಿಗಾಗಿ ನಾವು ಅದರ ಅವತರಣಿಕೆಯನ್ನು ಇಲ್ಲಿ ಕೊಡುತ್ತೇವೆ.

ಮುಂಬಯಿ, ಎಲ್‌ಫಿನ್‌ಸ್ಟನ್ ಹಾಟೆಲ್.

ಹೆಂಡತಿ, ತಾ. ೨೧ ೧೨-೧೮

ನೀನೂ ನಿನ್ನ ಮತಿಹೀನನಾದ ತಂದೆಯೂ ಬರೆದ ಪತ್ರಗಳು ಮುಟ್ಟಿದವು. ಗರ್ವಿಷ್ಠರಾದ ನಿಮ್ಮ ಮನೆಯವರು ನನ್ನ ಇಚ್ಛೆಗಳನ್ನು ತುಚ್ಛಿಸಿಯೂ ನನ್ನ ಮಾನಹಾನಿಯನ್ನ ಮಾಡಿಯೂ ಇರುವ ಸಂಗತಿಗಳನ್ನು ನಾನು ಮರೆಯುವನೂ ಇಲ್ಲ, ಅದಕ್ಕಾಗಿ ನಾನು ನಿನ್ನನ್ನು ಕ್ಷಮಿಸುವದೂ ಇಲ್ಲ. ನನ್ನ ಆರೈಕೆಗಾಗಿ ನೀನು ಬರುವಿಯಾ? ಆರೈಕೆಗೆ ನನಗೇನು ಕಡಿಮೆ? ನೀನಿಲ್ಲದಿದ್ದರೂ ನಾನು ಸುಖವಾಗಿ ಹೋಟಲಿನಲ್ಲಿ ಉಣ್ಣುತ್ತೇನೆ. ನನ್ನ ಸೇವೆ ಮಾಡಲಿಕ್ಕೆ ಚತುರೆಯರಾದ ವಾರಾಂಗನೆಯರು ನಿತ್ಯದಲ್ಲಿಯೂ ಮೇಲಾಡುತ್ತಿರುವರು. ಮಾರಿಯಾದ ನಿನ್ನನ್ನು ಕಟ್ಟಿಕೊಂಡು ನಾನೇನು ಮಾಡಲಿ? ನೀನು ವಿಧವೆಯಾಗಿ ಅಮಂಗಲವಾದ ರೂಪವನ್ನು ಹೊಂದಿದ್ದು ನಾನು ಪ್ರತ್ಯಕ್ಷವಾಗಿ ನೋಡುವದು ಸಾಧ್ಯವಾದ ಸಂಗತಿಯಾಗಿರುವದಿಲ್ಲವೆಂದು ನೆನಿಸಿ ನನಗೆ ವಿಷಾದವಾಗುತ್ತದೆ. ಆದರೂ ಈ ಪ್ರಾಯಶ್ಚಿತ್ತವು ಬೇಗನೆ ನಿನ್ನ ಪಾಲಿಗೆ ಬರುವದು. ನನಗೀಗ ಉದರರೋಗದ ಭಾವನೆಯ್ಯಾಗಿದೆ. ನನ್ನ ಮರಣದಿಂದ ನಿನ್ನ ತಂದೆಗೆ ದುಃಖವೊದಗಿದರೆ ನನಗೆ ಮರಣವೇ ಬರಲಿ!

ನಿನ್ನ ಕುಂಕುಮ ಮಂಗಲಸೂತ್ರಾಪಕರ್ಷಕನಾದ,

ಗೋವಿಂದ.

ಎಂಥ ಅಭದ್ರವಾದ ಪತ್ರವಿದು! ಅಶಿಕ್ಷಿತನೂ ತಿಳಿಗೇಡಿಯೂ ಮೇಲೆ ದುರ್ಮಾರ್ಗಿಯೂ ಆದ ಮೂರ್ಖನ ವಿಚಾರಗಳನ್ನು ಕಂಡಿರಾ? ಈ ಮೂರ್ಖನು ಬೇಡಿಬೇಡಿದಾಗ್ಗೆ ಮಾಧವರಾಯರು, ಮಗಳ ಮುಖವನ್ನು ನೋಡಿ ನೂರು ಇನ್ನೂರು ರೂಪಾಯಿಗಳನ್ನು ಕಳಿಸಿ ಕೊಟ್ಟುಕೊಡು ತ್ತಿದ್ದರು. ದರ್ಶನವನ್ನು ಕೊಟ್ಟು ಹೋಗಬೇಕೆಂದು ಕಾಲಕಾಲಕ್ಕೆ ಆದರ ದಿಂದ ಹೇಳಿಕೊಳ್ಳುತ್ತಿದ್ದರು. “ಅಳಿಯದೇವರು ತಮ್ಮ ಕೃತಜ್ಞತೆಯನ್ನು ಮೇಲ್ಕಂಡ ರೀತಿಯಾಗಿ ವ್ಯಕ್ತಪಡಿಸಿದರೆ?” ಎಂದು ಉದ್ಗಾರ ತೆಗೆದು ವತ್ಸ ಲೆಯು ನಿಟ್ಟುಸುರು ಬಿಟ್ಟು ತನ್ನ ದೈವವನ್ನು ನಿಂದಿಸಿಕೊಂಡು ಅತ್ತಳು. ಸಾಧ್ವಿಯವಳು! ಪತಿಯು ಉದರರೋಗದಿಂದ ಪೀಡಿತನಾಗಿರುವ ಸಂಗತಿ ಯನ್ನರಿತು ಅವಳ ಹೊಟ್ಟೆಯಲ್ಲಿ ಉರಿಬಿದ್ದಿತು. ಮರುದಿವಸವೇ ಅವಳು ತಂದೆಯನ್ನು ಕರಕೊಂಡು ಪತಿದರ್ಶನಾರ್ಥವಾಗಿ ಮುಂಬಯಿಗೆ ಹೊರಟು ಹೋದಳು.

ಆನಂದರಾಯನು ದೇಶಸಂಚಾರವನ್ನು ಮಾಡಿಕೊಂಡು ಊರಿಗೆ ಬರುವದರೊಳಗಾಗಿಯೇ ವತ್ಸಲೆಯು ವಿಧವೆಯಾಗಿ ಎರಡು ತಿಂಗಳಾಗಿದ್ದವು. ಈ ಸಂಗತಿಯನ್ನರಿತು ದಯಾರ್ದ್ರ ಭಾವದವನಾದ ಆನಂದರಾಯನ ಎದೆ ಯೊಡೆದು ನೀರಾಯಿತು. ವತ್ಸಲೆಯು ತನಗಲ್ಲದವಳಾಗಿ ತನ್ನ ಕಣ್ಮರೆಯಲ್ಲಿ ಸುಖದಿಂದಿದ್ದರೆ ತನ್ನ ಮನಸ್ತಾಪಕ್ಕೆ ಎಷ್ಟೋ ಸಮಾಧಾನವಾಗುವದೆಂದು ಅವನು ಆಶಿಸಿದ್ದನು. “ಸುಲಕ್ಷಣವಾದ ರೂಪದಿಂದ ಮಂಡಿತರಾದವರು ವಿಶೇಷವಾಗಿ ದುಃಖಭಾಗಿಗಳಾಗುವದಿಲ್ಲವೆಂದು ಕವಿಗಳೂ ಸಾಮುದ್ರಿಕ ಲಕ್ಷಣಗಳನ್ನರಿತವರೂ ಹೇಳುತ್ತಿರುವದು ಸುಳ್ಳಾಯಿತೆ? ಬ್ರಹ್ಮದೇವನೆ, ನೀನು ವತ್ಸಲೆಯಂಥ ಲಲಿತಾಂಗಿಯನ್ನು ಶ್ರಮಪಟ್ಟು ನಿರ್ಮಿಸಿದೇಕೆ? ಅವಿ ಚಾರದಿಂದ ಆ ಕುಸುಮಕೋಮಲೆಯನ್ನು ದುಃಖಾಗ್ನಿಯಲ್ಲಿ ಬಿಸುಟಿದೇಕೆ? ವತ್ಸಲೆ, ಆಲ್ಹಾದಜನಕವಾದ ನಿನ್ನ ಚಾರುಹಾಸವು ಅಡಗಿಹೋಯಿತೆ? ಪ್ರಫುಲ್ಲಿತವಾದ ನಿನ್ನ ಮುಖಕಮಲವು ಬೆಂದು ಬಾಡಿಹೋಯಿತೆ? ನಿನ್ನ ತಾರುಣ್ಯವು ವ್ಯರ್ಥವಾಯಿತೆ? ನಿನ್ನ ಜನ್ಮವು ಯಾತಕ್ಕೂ ಬೇಡಾಯಿತೆ? ನಿನಗೆಷ್ಟು ದುಃಖ, ನಿನ್ನನ್ನು ಹಡೆದವರಿಗೆಷ್ಟು ದುಃಖ!” ಎಂದು ಆನಂದ ರಾಯನು ವ್ಯಸನಾಕುಲನಾಗಿ ಮರುಗಿದನು.

ಮಾಧವರಾಯರು ದುಃಖದಲ್ಲಿರುವಾಗ ಅವರನ್ನು ಮಾತಾಡಿಸಿ ಬರುವದು ಶಿಷ್ಟಾಚಾರವೂ ಸ್ನೇಹಾನುಬಂಧಿಗಳ ಧರ್ಮವೂ ಆಗಿರುವದರಿಂದ ಆನಂದನಿಗೆ ಅವರನ್ನು ಕಂಡುಬರುವದು ಅವಶ್ಯವಾಗಿತ್ತು. ಜಗತ್ತಿನ ಅನುಭವವುಳ್ಳವರೂ ವಿಚಾರಶೀಲರೂ ಆಗಿದ್ದ ಮಾಧವರಾಯರೊಡನೆ ನಾಲ್ಕು ವೇದಾಂತದ ಮಾತುಗಳನ್ನಾಡಿ ಬರುವದು ಆನಂದರಾಯನಿಗೆ ದುಃಷ್ಕರವಾಗಿದ್ದಿಲ್ಲ. ಆದರೆ—

“ವತ್ಸಲೆಯ ಮೋರೆಯನ್ನು ನಾನೆಂತು ನೋಡಲಿ? ಅವಳು ಭೋರಿಟ್ಟು ಅತ್ತರೆ ನಾನೇನು ಸಮಾಧಾನವನ್ನು ಹೇಳಲಿ?” ಎಂದು ಚಿಂತಿಸುತ್ತ ಅವನು ಹೇಗೋ ಆ ಹೃದಯವಿದಾರಕವಾದ ಶಿಷ್ಟಾಚಾರವನ್ನು ತೀರಿಸಿಕೊಂಡು ಮನೆಗೆ ಬಂದನು.

ವತ್ಸಲೆಯ ವಿಷಯವಾಗಿ ಅನೇಕ ಪ್ರಕಾರದ ವಿಚಾರಗಳು ಆನಂದನ ಮನಸ್ಸಿನಲ್ಲಿ ಹೊಯ್ದಾಡಿ ಅವನನ್ನು ಹಗಲಿರಳು ಬಹುಪರಿಯಾಗಿ ಪೀಡಿಸಿದವು. ಪರಸ್ಪರ ವಿರುದ್ಧವಾದ ಮನೋವಿಕಾರಗಳು ಒಂದಕ್ಕೊಂದು ಅಖಂಡವಾಗಿ ಹೋರಾಡಿ ಒಂದರ ಬಲವನ್ನೊಂದು ಕುಂದಿಸಿದವು. ಆದರೂ ಶೃಂಖಲಾಬದ್ಧವಾಗಿದ್ದ ಪ್ರೇಮಭಾವವೇ ಪ್ರಸ್ತುತವಾದ ಯುದ್ಧದಲ್ಲಿ ತುಸು ಹಿಂಜರಿಯಿತು. ಯುದ್ಧ ಮಾಡುವವರು ತಾವು ದಣುಕೊಳ್ಳುವದೊತ್ತಟ್ಟಿಗಿರಲಿ, ಅವರು ರಣಭೂಮಿಯನ್ನು ಉದ್ದಾಮತನದಿಂದ ಉಧ್ವಸ್ತವಾಗಿ ಮಾಡಿ ಬಿಡುವಂತೆ, ಮೇಲ್ಕಂಡ ಮನೋವಿಕಾರಗಳ ಯುದ್ಧದಲ್ಲಿ ರಣಭೂಮಿಯಾಗಿದ್ದ ಆನಂದರಾಯನ ಹೃದಯವು ಹಣ್ಣುಹಣ್ಣಾಗಿಹೋಯಿತು.

ಚಿಂತಾನಿಮಗ್ನನಾದ ಆನಂದರಾಯನ ಮುಖದ ವರ್ಚಸ್ಸವು ದಿನೇ ದಿನೇ ಕುಂದಿತು. ರಘುನಾಥರಾಯರು ಅವನ ಲಗ್ನದ ಮಾತು ತೆಗೆದರೆ ಅವನಿಗೆ ತಲೆಬೇಸರಿಕೆ. ಈ ಮಾತಿನ ವಿಷಯವಾಗಿ ಆನಂದರಾಯನು ತಂದೆಯವರೊಡನೆ ಮನಬಿಚ್ಚಿ ಮಾತಾಡುವದಿಲ್ಲೆಂದು ಅರಿತು ಅವನ ಮಾತೆಯವರು ಆವನನ್ನು ಕುರಿತು,

“ಆನಂದ, ನೀನು ದೊಡ್ಡವನಾದಿ; ಇನ್ನೆಷ್ಟು ದಿವಸ ನೀನು ಮದುವೆಯಿಲ್ಲದೆ ಇರಬೇಕು? ಪ್ರಬುದ್ಧನಾದ ಮಗನಿಗೆ ನಾವು ಒಡೆದು ಹೇಳುವ ಮಾತು ಯಾವದೂ ಇಲ್ಲ. ನಾವಿನ್ನು ನಿನ್ನ ಮದುವೆಯನ್ನು ಸರ್ವಥಾ

ಮುಂದಕ್ಕೆ ಹಾಕುವದಿಲ್ಲ. ಈ ವಿಷಯದಲ್ಲಿ ನೀನು ಉದಾಸೀನನಾಗಿರುವದು ಏಕೆ ? ನಿನ್ನ ಮನಸ್ಸಿನಲ್ಲಿ ಏನಿದೆ ಸ್ಪಷ್ಟವಾಗಿ ಹೇಳಿಬಿಡು." ಎಂದು ಕೇಳಿದರು.

ಆನಂದನು ಮಾತೆಯ ಮಮತಾಪೂರ್ಣವಾದ ಮುಖವನ್ನು ನೋಡಿ ಸಂತೋಷದಿಂದ ಮುಗುಳುನಗೆದೋರಿ "ಅಮ್ಮಾ ನಾನು ನಿಮ್ಮ ಆಜ್ಞೆಯನ್ನು ಮೀರಿದವನಲ್ಲ. ನನ್ನ ಹಿತಕ್ಕಾಗಿಯೇ ನೀವಿಷ್ಟು ಚಿಂತಿಸುತ್ತಿರುವದನ್ನು ನಾನು ಅರಿಯೆನೆ? ಈಗೀಗಲೇಕೋ ಮನಸ್ಸು ಕೊಂಚ ಉದ್ವಿಗ್ನವಾಗಿರುವದು. ಸದ್ಯಕ್ಕೆ ಐದಾರು ತಿಂಗಳು ಹೋಗಲಿ, ಆ ಮೇಲೆ ನಾನು ನಿಮ್ಮ ಇಚ್ಛೆಗೆ ಪ್ರತಿಕೂಲನಾಗಿ ನಡಕೊಳ್ಳುವದಿಲ್ಲ. ನನ್ನ ಮನೋಗತವನ್ನು ನೀವು ತಂದೆಯವರಿಗೆ ತಿಳಿಸಿರಿ." ಎಂದು ಹೇಳಿಕೊಂಡನು.

"ತಿಳಿದವನಿಗೆ ನಾವು ಹೆಚ್ಚಾಗಿ ಎಷ್ಟು ಹೇಳೋಣ? ಆದರೂ ಸಣ್ಣ ಮಾತಿಗಾಗಿ ನಾವು ನಿನ್ನ ಮನಸ್ಸು ಮುರಿಯುವದಿಲ್ಲ. ಆರೇ ತಿಂಗಳ ಮಾತು ಅಹುದಲ್ಲೊ ? ಆಗಲಿ."

* * * *

ದುಃಖಭರಾರ್ತೆಯಾದ ವತ್ಸಲೆಯು ದಿನಕ್ಕೊಂದು ರೀತಿಯಾಗಿ ನವೆಯಲಾರಂಭಿಸಿದಳು. ಅವಳು ತನ್ನ ಕೋಣೆಯನ್ನು ಬಿಟ್ಟು ಹೊರಗೆ ಬೀಳುತ್ತಲೇ ಇದ್ದಿಲ್ಲ. ಜಾಣೆಯೂ ರೂಪವತಿಯೂ ಆಗಿರುವ ತನ್ನ ಮಗಳಿಗೆ ಸಮಾಧಾನವೆಂತಾದೀತೆಂದು ಅವಳ ತಂದೆಯು ಹಗಲಿರಳು ಯೋಚನೆಗೈಯುತ್ತಲೇ ಇದ್ದನು. ಮಾಧವರಾಯರು ಸುಧಾರಕ ಪಂಥದವರು. ವಿದ್ಯಾವತಿಯಾದ ತಮ್ಮ ಮಗಳನ್ನು ಎಲ್ಲಿಯಾದರೂ ಒಂದು ಸ್ತ್ರೀಶಿಕ್ಷಣ ಸಂಸ್ಥೆಯಲ್ಲಿ ಅಧ್ಯಾಪಕಳನ್ನಾಗಿ ಮಾಡಿದರೆ ಅವಳು ತನ್ನ ದುಃಖವನ್ನು ಮರೆದಿರುವಳೆಂದು ಯೋಚಿಸಿದರು. ಅದಕ್ಕೆ ಅವಳು ಒಪ್ಪಲಿಲ್ಲ.

ಒಂದು ದಿನ ಆನಂದರಾಯನು ಮಾಧವರಾಯರ ಮನೆಗೆ ಸಮಾಚಾರಕ್ಕಾಗಿ ಬಂದಿದ್ದನು. ಆಗ ಮಾತಿಗೆ ಮಾತು ಬಂದಾಗ ಮಾಧವರಾಯರು ಅಂದದ್ದು :

"ಆನಂದರಾವ, ಏನು ಮಾಡುವದು? ಉಪಾಯವಿಲ್ಲದ ಮಾತಾಗಿದೆ. ವತ್ಸಲೆಗೆ ನಾವೆಷ್ಟು ಸಮಾಧಾನದ ಮಾತು ಹೇಳಿ ನೋಡಿದರೂ ಅವಳ

ಚಿತ್ತಕ್ಕೆ ಶಾಂತಿಯಿಲ್ಲ. ಮದುವೆಯಾದರೂ ಪತಿಯ ಮೋರೆಯನ್ನು ಕೂಡ ಅವಳು ಕಾಣಲಿಲ್ಲ; ಸಂಸಾರದ ಸುಖವು ಒತ್ತಟ್ಟಿಗಿರಲಿ."

"ರಾಯರೆ, ಮನುಷ್ಯನ ಯತ್ನವಿಲ್ಲದ ಮಾತಿಗೆ ದುಃಖಿಸಿ ಫಲವೇನು?" ಎಂದು ಆನಂದರಾಯನು ಉತ್ತರವನ್ನಿತ್ತನು.

"ಮನುಷ್ಯನಿಗೆ ಮೀರಿದ್ದು ಯಾವದು ? ವತ್ಸಲೆಯ ಪುನರ್ವಿವಾಹ ವನ್ನು ಮಾಡಿದರೆ ಒಳಿತಾಗುವದೆಂದು ನಾನು ನೆನಿಸುತ್ತೇನೆ. ವಿಶ್ವವಿದ್ಯಾಲಯ ದಲ್ಲಿ ಶಿಕ್ಷಣವನ್ನು ಹೊಂದಿ ಸುಸಂಸ್ಕೃತರಾದವರು ನೀವು. ನಿಮ್ಮಂಥವರು ದೀನೆಯರಾದ ಅಬಲಾಜನರ ಉದ್ಧಾರಣಾರ್ಥವಾಗಿ ಯತ್ನಮಾಡದಿದ್ದರೆ ಮುಂದೆ ನಮ್ಮ ಸಮಾಜವು ಕೆಟ್ಟುಹೋಗುವದಲ್ಲವೆ ?"

"ರಾಯರೆ, ನಾನೆಷ್ಟರವನು ! ಇಂಥ ಮಹತ್ಕಾರ್ಯದಲ್ಲಿ ನನ್ನಿಂದ ಆಗುವ ಸಹಾಯ್ಯವಾದರೂ ಎಂಥದು ?" ಎಂದು ಆನಂದನು ಹೇಳಿದನು.

"ಕೆಲಸ ಮಾಡಲಿಚ್ಛಿಸುವವನಿಗೆ ಮಾರ್ಗವು ತನ್ನಿಂದ ತಾನೇ ತೋರುವದು."

ಮಾಧವರಾಯರ ಅಭಿಪ್ರಾಯವನ್ನು ಕೇಳಿ ಆನಂದರಾಯನ ಎದೆಯ ಮೇಲೆ ಗದಾಪ್ರಹಾರವಾದಂತೆ ಭಾಸವಾಯಿತು. "ಈ ರಾಯರು ನನಗೆ ವತ್ಸಲೆಯನ್ನು ಮದುವೆಮಾಡಿಕೊಳ್ಳೆಂದು ಸೂಚಿಸಿದರೇನು ?" ಎಂದವನು ಚಿಂತಿಸಿದನು. ಹಿಂದಕ್ಕೆ ತಾರಮ್ಮನಾಡಿದ ನುಡಿಯನ್ನು ಕೇಳಿ ಹುಟ್ಟಿದ ಮನೋವಿಕಾರಗಳಂಥವೇ ಈ ಸಮಯದಲ್ಲಿ ಆನಂದನ ಹೃದಯದಲ್ಲಿ ಉದ್ಭವಿಸಿದವು. ಮತ್ತವನು ತಲ್ಲಣಗೊಂಡು ದಿಂಗುಬಡಿದವನಂತೆ ಮಾತಾಡ ಲರಿಯದೆ ಸುಮ್ಮನೆ ಕುಳಿತುಕೊಂಡನು.

"ಯಾಕೆ ಆನಂದರಾವ, ಮಾತಾಡಲೊಲ್ಲಿರಿ ?" ಎಂದು ಮಾಧವ ರಾಯರು ಕೇಳಿದರು.

"ರಾಯರೆ, ಮಹತ್ವವಾದ ವಿಷಯವಿದು. ಪೂರ್ವಪಕ್ಷ ಪರಪಕ್ಷ ವಾಗಿ ಇದನ್ನು ನಾನು ವಿಮರ್ಶಿಸಿಲ್ಲ. ನಾನೇನು ಹೇಳಲಿ ?" ಎಂದು ಆನಂದನು ತೊಂದರೆಗೊಂಡು ಅನಿವಾರ್ಯಹಕ್ಕಾಗಿ ಉತ್ತರ ಕೊಟ್ಟನು.

"ಆಗಲಿ ! ಈ ವಿಷಯವಾಗಿ ಸಾಧಕಬಾಧಕವಾದ ಅನೇಕ ಗ್ರಂಥಾ ಧಾರಗಳೂ ಲೇಖಗಳೂ ನಿಬಂಧಗಳೂ ನನ್ನಲ್ಲಿ ಇವೆ. ಅವುಗಳನ್ನು ತೆಗೆದು

ಕೊಂಡು ಹೋಗಿ, ನಾಲ್ಕು ದಿವಸಗಳಲ್ಲಿ ನೀವು ಪಟ್ಟಿರುವ ಅಭಿಪ್ರಾಯವನ್ನು ನನಗೆ ತಿಳಿಸಿದರೆ ನಾನು ತುಂಬಾ ಉಪಕೃತನಾಗುವೆನು.'' ಎಂದು ಹೇಳಿ ಮಾಧವರಾಯರು ಆನಂದರಾಯನನ್ನು ತಮ್ಮ ವಾಚನದ ಕೋಣೆಗೆ ಕರಕೊಂಡು ಹೋದರು.

ಅಲ್ಲಿ ವತ್ಸಲೆಯು ಏನೋ ಓದುತ್ತ ಕುಳಿತಿದ್ದಳು. ಆನಂದರಾಯನನ್ನು ಕಾಣುತ್ತಲೆ ವತ್ಸಲೆಯು ಆಶ್ಚರ್ಯಚಕಿತಳಾಗಿ ಎದ್ದು ನಿಂತಳು. ಲಜ್ಜಾವನತ ಮುಖಿಯಾದ ಆ ಅಬಲೆಯು ಮೆಲ್ಲನೆ ಉಸುರ್ಗರೆದಳು.

''ವತ್ಸಲಾ, ನಿನ್ನ ಕುರ್ಚಿಯ ಮೇಲೆ ಕುಳಿತುಕೊಳ್ಳು. ಆನಂದರಾಯನೇನು ನಮಗೆ ಪರಕೀಯನೆ? '' ಎಂದು ಮಗಳಿಗೆ ಹೇಳಿ ಮಾಧವರಾಯರು ತಾವೊಂದು ಕುರ್ಚಿಯ ಮೇಲೆ ಕುಳಿತುಕೊಂಡು ಆನಂದರಾಯನಿಗೂ ಕುಳ್ಳಿರಹೇಳಿದರು.

ಬಳಿಕ ರಾಯರು ತಮ್ಮ ಪುಸ್ತಕದ ಕಪಾಟು ತೆರೆದು, ''ಆನಂದರಾವ, ಇದು ನೋಡಿರಿ, ದಿವಾನ್ ಬಹಾದ್ದೂರ ರಘುನಾಥರಾಯರು ಪುನರ್ವಿವಾಹದ ಸಮರ್ಥನಕ್ಕಾಗಿ ಬರೆದ ಲೇಖವು. ಇದು ರಾಜಾರಾಮ ಶಾಸ್ತ್ರಿಗಳ ನಿಬಂಧವು. ಇದು ಪುನರ್ವಿವಾಹದ ಖಂಡನಾರ್ಥವಾಗಿ ಬಾಗಲಕೋಟೆಯ ಆಚಾರ್ಯರು ಮಾಡಿದ ಉಪನ್ಯಾಸವು. ಇದು ಶ್ರೀ ಸತ್ಯವೀರಸ್ವಾಮಿಗಳವರು ಬರೆಸಿದ ಗ್ರಂಥವು. ಇವುಗಳನ್ನೆಲ್ಲಾ ಚನ್ನಾಗಿ ಪರಾಮರ್ಶಿಸಿ ನೀವು ನಿಮ್ಮ ನಿಜವಾದ ಅಭಿಪ್ರಾಯವನ್ನು ಕೊಡುವಿರೆಂದು ನಾನು ಆಶಿಸುತ್ತೇನೆ'' ಎಂದು ಕೇಳಿಕೊಂಡರು.

"ಯಾತಕ್ಕಿಷ್ಟು ಪ್ರಯತ್ನ ? '' ಎಂದು ವತ್ಸಲೆಯು ಚಕಿತಳಾಗಿ ತನ್ನ ಮನದಲ್ಲಿಯೇ ಚಿಂತಿಸಿ ಕುತೂಹಲದಿಂದ ಆನಂದನ ಮುಖವನ್ನು ನೋಡಿದಳು. ವತ್ಸಲೆಯು ವ್ಯಸನದಿಂದ ಕೃಶಳಾಗಿದ್ದರೂ ಅವಳ ಮನೋಹರವಾಗಿದ್ದ ನೇತ್ರಗಳಲ್ಲಿಯ ಪ್ರಭೆಯು ರವಷ್ಟಾದರೂ ಕಡಿಮೆಯಾಗಿದ್ದಿಲ್ಲ. ಅವಳು ಅವಿವಾಹಿತಳಾದ ತರುಣಿಯಾಗಿದ್ದರೆ ಅವಳ ದೃಷ್ಟಿಪಾತದಿಂದ ಆನಂದರಾಯನ ಎದೆಯು ಪಂಚಶರನ ಬಾಣದಿಂದ ಸೀಳಿಹೋಗಬಹುದಾಗಿತ್ತು. ಆದರೂ ಆ ದೃಷ್ಟಿಯ ಪರಿಣಾಮವು ಆನಂದನನ್ನು ಬಾಧಿಸದಿರಲಿಲ್ಲ.

" ನಾನೆಷ್ಟು ಪರಿಯಾಗಿ ತಪ್ಪಿಸಿಕೊಳ್ಳಲು ಪ್ರಯತ್ನಮಾಡಿದರೂ ಈ

ಪ್ರಸಂಗವು ತಾನಾಗಿ ಬಂದೊದಗಿತೆ ? ” ಎಂದು ಆನಂದನು ತನ್ನೊಳಗೆ ತಾನು ಚಿಂತಿಸಿ, ದೂಡಿದರೂ ಮತ್ತೆ ಮತ್ತೆ ತನ್ನ ಹೃದಯದಲ್ಲಿ ಸೇರಿಕೊಳ್ಳುತ್ತಿರುವ ಮನೋವಿಕಾರವನ್ನು ಕಂಡು ತನ್ನ ಹೃದಯದೌರ್ಬಲ್ಯವನ್ನು ನಿಂದಿಸಿದನು. ಲೇಖಗಳೆಲ್ಲ ತನ್ನ ಸ್ವಾಧೀನವಾದ ಕೂಡಲೆ ಅವನು ಚಟ್ಟನೆ ಸ್ಥಾನವನ್ನು ಬಿಟ್ಟು ಹೊರಟು ತನ್ನ ಮನೆಯ ಮಾರ್ಗವನ್ನು ಹಿಡಿದನು. ಹೋಗುವಾಗ ವತ್ಸಲೆಯ ಮುಖವನ್ನು ಅವನು ಕಣ್ಣೆತ್ತಿ ನೋಡಲಿಲ್ಲ. ಅವಳು ಅವನ ಮುಖವನ್ನು ನೋಡುತ್ತಲಿದ್ದಳೋ ಇಲ್ಲವೋ ಅವನಿಗೆ ತಿಳಿಯ ಬರಲಿಲ್ಲ.

ಆನಂದರಾಯನು ಆ ಕಾಗದಗಳನ್ನೆಲ್ಲ ತನ್ನ ಮನೆಗೆ ತಂದು ಮೇಜಿನ ಮೇಲೆ ಚೆಲ್ಲಿಕೊಟ್ಟು ಆರಾಮಕುರ್ಚಿಯಲ್ಲಿ ಬಿದ್ದುಕೊಂಡು ವಿಚಾರದಲ್ಲಿ ಮುಳುಗಿದನು.

“ಮಾಧವರಾಯರು ಈ ಕೆಲಸವನ್ನು ನನಗೇಕೆ ಹೇಳಿದರು? ವತ್ಸಲೆಯ ಪುನರ್ವಿವಾಹವನ್ನು ಮಾಡಬೇಕೆನ್ನುವರೋ ? ಮಾಡಿದರೆ ಮಾಡಲಿ, ಅದಕ್ಕೆ ನನ್ನ ಅಭಿಪ್ರಾಯವೇಕೆ ? ಸುಧಾರಕರ ಸಮಾಜದಲ್ಲಿ ವಿಧವೆಯರ ಪುನರ್ವಿವಾಹವನ್ನು ಮಾಡುವದು ಗೊತ್ತಾಗಿ ಹಳೆಮಾತಾಗಿದೆ. ನನ್ನ ಮೇಲೆ ಬಲೆಯನ್ನು ಒಗೆಯುವರೇನು ? ಪುನರ್ವಿವಾಹದ ಪದ್ಧತಿಯು ಅಸಮಂಜಸವಾಗಿರುವದೆಂದು ನಾನು ಅನೇಕಾವರ್ತಿ ಸಭೆಗಳಲ್ಲಿ ಆಡಿತೋರಿಸಿದ್ದೇನೆ. ಇನ್ನು ನಾನು ಮತಾಂತರವನ್ನು ತಳೆಯುವದು ಹೇಗೆ ? ” ಎಂದವನು ಆಲೋಚಿಸಿ ಮಾಧವರಾಯರು ಕೊಟ್ಟ ಲೇಖಗಳನ್ನು ತೆಗೆದುಕೊಂಡು ಓದದೆ ಅವುಗಳನ್ನು ಸುಮ್ಮನೆ ತಿರುತಿರುವಿ ನೋಡಿದನು.

“ಇವುಗಳನ್ನು ನಾನು ಓದಿಯೇ ಇದ್ದೇನೆ. ಶಾಸ್ತ್ರಾರ್ಥಗಳನ್ನು ಜಗ್ಗಾಡಿ ಅರ್ಥಗಳನ್ನು ಮಾಡಿಕೊಳ್ಳದೆ ಇದ್ದರೆ ಉಭಯಪಕ್ಷದವರಿಗೂ ಅನುಕೂಲವಿಲ್ಲ. ಮಾಧವರಾಯರಿಗೆ ಉತ್ತರವನ್ನು ಹೇಗೆ ಹೇಳಬೇಕು ? ನಾನು ಪ್ರತಿಕೂಲವಾದ ಅಭಿಪ್ರಾಯವನ್ನು ಹೇಳಿದರೆ ಅವರು ಒಪ್ಪಿಕೊಳ್ಳುವರೆ ? ಅನುಕೂಲವಾದದ್ದನ್ನೇ ಹೇಳಿದರೆ ನನ್ನ ಗಂಟು ಹೋಗುವದಾದರೂ ಏನು ? ” ಎಂದು ಯೋಚಿಸಿ ಅವನು ತನ್ನ ಅಭಿಪ್ರಾಯವನ್ನು ಸಂಕ್ಷೇಪವಾಗಿ ಬರೆದು ಮಾಧವರಾಯರ ಮನೆಗೆ ಕಳಿಸಿದನು.

ಇಷ್ಟಾದಬಳಿಕ ಕೆಲವು ದಿವಸಗಳಮೇಲೆ ಮಾಧವರಾಯರು ವತ್ಸಲೆಯ ಕೂಡ ಪುನರ್ವಿವಾಹದ ಬಗ್ಗೆ ವಾಗ್ವಾದ ನಡೆಸಿದರು. ತಂದೆಯವರ ಆಗ್ರಹವು ಹೆಚ್ಚಾಗಿ ತೋರಿದ್ದರಿಂದ ಆವಳು ಮಾತುಬೆಳಿಸಲೂ ಇಲ್ಲ, ತನ್ನ ಮನೋಗತ ವನ್ನೂ ತಿಳಿಸಲಿಲ್ಲ.

"ಏನು ಬಂತಿದು! ಆನಂದರಾಯನು ಪುನರ್ವಿವಾಹಕ್ಕೆ ಒಪ್ಪಿದನೆ? ಕರ್ಮನಿಷ್ಠರಾದ ರುಘುನಾಥರಾಯರ ಮಗನು ಮತಾಂತರವನ್ನು ಹೊಂದಿದ್ದು ಹೇಗೆ? ನನ್ನ ವಿಷಯವಾಗಿ ಆವನು ತಳೆದಿರುವ ಪ್ರೇಮವು ಈಗ ವೃದ್ಧಿಂಗತ ವಾಗಿ ಆವನು ತನ್ನ ಕುಲಶೀಲಗಳನ್ನು ಮರೆತನೆ? ಪ್ರೇಮವೆ, ನೀನೊಮ್ಮೆ ಉದ್ಭವಿಸಿದೆಂದರೆ ಎಷ್ಟು ಕಡಿಕಡಿದು ಹಾಕಿದರೂ ನಿನ್ನ ಬೇರುಗಳು ಇಲ್ಲ ದಂತಾಗುವದಿಲ್ಲವಲ್ಲ! ಆನಂದನು ತಾನಾಗಿ ನನ್ನ ಬಳಿಗೆ ಬಂದು ಪುನರ್ವಿ ವಾಹಕ್ಕೆ ನನ್ನ ಸಮ್ಮತಿಯನ್ನು ಕೇಳಿದರೆ ಏನೆಂದು ಹೇಳಲಿ? ಆವನು ಬಹು ಪರಿಯಾಗಿ ಕೇಳಿಕೊಂಡರೆ ಒಲ್ಲೆನೆಂದು ಹೇಳಲಿಕ್ಕೆ ನನ್ನ ಹೀನಸತ್ವವಾದ ಹೃದಯವು ಸಮರ್ಥವಾಗುವದೆ? ಪುನರ್ವಿವಾಹವು ಪವಿತ್ರವಾದದ್ದೆಂದು, ನನ್ನ ಅಂತರಾತ್ಮವು ಒಪ್ಪುವದಿಲ್ಲ."

ಇಂಥ ಪ್ರಕಾರದ ವಿಚಾರಗಳಿಗೆ ಈಡಾಗಿ ವತ್ಸಲೆಯು ಎರಡು-ಮೂರು ದಿವಸ ಚಿಂತಾವಿಷಾದ ಆಶೆ-ನಿರಾಶೆಗಳೆಂಬ ವೇಗವುಳ್ಳ ಅಭ್ರಪಟಲಗಳ ಪುನರಾವರ್ತನದಿಂದ ಸಂಪೀಡಿತಳಾದಳು. ಮೂಢಭಾವ, ಸುಧಾರಣೆ, "ಯದ್ಯಪಿ ಶುದ್ಧಂ ಲೋಕವಿರುದ್ಧಂ," ಧರ್ಮಶಾಸ್ತ್ರಗಳ ಯಥಾರ್ಥಭಾವ, ಭಿಕ್ಷುಗಳ ಆಗ್ರಹದ ಮತ ಮುಂತಾದ ದ್ವಂದ್ವಗಳನ್ನು ಸಮತೋಲವಾಗಿ ಹಿಡಿಯಲು ಆವಳು ಯತ್ನಿಸಿದಳು. ಆನಂದನಲ್ಲಿ ಆವಳ ಪ್ರೇಮವೂ, ಗೋವಿಂದನಲ್ಲಿ ಆವಳ ಹಸ್ತವೂ ಸಿಕ್ಕು ಹೋಗಿದ್ದವು. ಗೋವಿಂದನು ಮೃತ ನಾಗಿದ್ದರೂ ಪಾಣಿಗ್ರಹಣದ ದೃಢವಾದ ಹಿಡಿತವು ಬಿಟ್ಟಿರುವದೋ ಇಲ್ಲವೋ ಎಂಬ ಶಂಕೆ. ಆನಂದನಲ್ಲಿ ಸಿಲ್ಕಿದ ಪ್ರೇಮವು ಏನು ಕೊಟ್ಟರೂ ಮರಳಿ ಬರಲೊಲ್ಲದು.

"ಇಂದು ಆನಂದನು ನನ್ನ ಬಳಿಗೆ ಅಭಿಪ್ರಾಯಕ್ಕಾಗಿ ಬರುವನಂತೆ. ಈಗಿನಿಂದಲೇ ನನ್ನ ನಿಶ್ಚಯವು ಶಿಥಿಲವಾಗುತ್ತಿರುವಂತೆ ಭಾಸವಾಗುತ್ತದೆ. ಆದರೂ ಈ ಸಮಯದಲ್ಲಿ ಆದಷ್ಟು ಧೈರ್ಯವನ್ನು ತಾಳಿ ಮನೋವಿಕಾರ

ಗಳಿಗೆ ಈಡಾಗದೆ ಆನಂದನೊಡನೆ ಮಾತಾಡುವೆನು" ಎಂದು ಯೋಚಿಸಿ ವತ್ಸಲೆಯು ತನ್ನ ಕೋಣೆಯಲ್ಲಿ ಎಡೆಯಾಡುತ್ತ ಕೆಲಹೊತ್ತು ಕಳೆದಳು. ಆನಂದನು ಬರುವ ಸಮಯವಾಯಿತು. ಅವಳು ಕಾತರಳಾದಳು. ಎದೆಯು ಧಕ್ಕಧಕ್ಕೆಂದು ಹಾರಲಾರಂಭಿಸಿತು. ಅವಳು ಉಸಿರಾಡಿಸುವದು ಕೋಣೆಯ ಹೊರಗೆ ನಿಂತವರಿಗೆ ಕೂಡ ಕೇಳಬರುವಂತಿತ್ತು. ನೀರಡಿಸಿ ನೀರು ಕುಡಿಯುವೆನೆಂದು ಅವಳು ಚಂಬುವನ್ನು ತೆಗೆದುಕೊಳ್ಳಹೋದರೆ ಕೈಯು ಥರಥರನೆ ನಡುಗಿತು. "ಯಾರು ಬಂದರು?" ಆನಂದನಲ್ಲ, ತಾರಮ್ಮನು. "ಅತ್ತೆಮ್ಮ, ಏನು ಸಮಾಚಾರ?" ಎಂದು ವತ್ಸಲೆಯು ಕೇಳಿದಳು. "ಯಾತರ ಸಮಾಚಾರ?" ಎಂದು ಏನೂ ಅರಿಯದ ತಾರಮ್ಮನು ಕೇಳಿದಳು. ತಾರಮ್ಮನು ತನ್ನ ಕೆಲಸಕ್ಕೆ ಹೋದಳು. ಅವಳು ಹೋದ ಬಳಿಕ ಅಲ್ಪಕಾಲದಲ್ಲಿಯೇ ಆನಂದನು ಥಗ್ಗನೆ ವತ್ಸಲೆಯ ಕೋಣೆಯಲ್ಲಿ ಬಂದು ನಿಂತನು. ಆ ತರುಣಿಯ ಮುಖದಲ್ಲಿ ಮೃದುಹಾಸವು ತೋರಿತೆನ್ನುವಷ್ಟರಲ್ಲಿಯೇ ಬಿಗಿಯಾದ ಗಂಭೀರತೆಯು ಅವಳ ಸುಂದರವಾದ ಮುಖವನ್ನು ಸಮಗ್ರವಾಗಿ ವ್ಯಾಪಿಸಿಕೊಂಡಿತು. ಆದರೆ ಆನಂದನನ್ನು ಮಾತಾಡಿಸಲು ವತ್ಸಲೆಯ ಅಂತರಂಗದಲ್ಲಿ ಧೈರ್ಯವಿರಲಿಲ್ಲ. ಕಟೆದ ಬೊಂಬೆಯ ಹಾಗೆ ಅವಳು ಸ್ತಬ್ಧಳಾಗಿ ನಿಂತುಬಿಟ್ಟಳು.

ಆನಂದರಾಯನು ಬಂದವನೇ ನೆಟ್ಟನೊಂದು ಕುರ್ಚಿಯ ಮೇಲೆ ಕುಳಿತುಕೊಂಡು, ವತ್ಸಲೆಯ ವಿಲಕ್ಷಣವಾದ ಮುಖಮುದ್ರೆಯನ್ನು ಆಗಾಗ್ಗೆ ಕಣ್ಣೆತ್ತಿ ನೋಡತೊಡಗಿದನು. ಅವನಾದರೂ ಅವಳೊಡನೆ ಮಾತಾಡುವೆನೆಂದರೆ ಸಹಸಾ ಹೇಗೆ ಉಪಕ್ರಮಿಸಬೇಕೆಂಬುದನ್ನರಿಯದೆ ಮೇಜಿನ ಮೇಲಿದ್ದ "ಸ್ತ್ರೀಶಿಕ್ಷಣದ ಮಹತ್ವವು" ಎಂಬ ಪುಸ್ತಕನನ್ನು ಕೈಯಲ್ಲಿ ತೆಗೆದುಕೊಂಡು, ಪುಟಗಳನ್ನು ಹಿಂದೆ ಮುಂದೆ ಮಾಡುತ್ತ 'ವತ್ಸಲಾ' ಎಂದು ಮೆಲ್ಲನೆ ಸಂಬೋಧಿಸಿದನು.

ವತ್ಸಲೆಯು ದೀರ್ಘಶ್ವಾಸವನ್ನು ಬಿಟ್ಟು ತನ್ನ ಹೃತ್‌ಕ್ಷೋಭವನ್ನು ತುಸು ಸಡಲಿಸಿ "ಏನು?" ಎಂದಿಷ್ಟು ಕೇಳಿದಳು.

ಮುಂದೇನು? ಹತ್ತು ನಿಮಿಷಗಳಾದರೂ ಆನಂದನ ಮುಖದಿಂದ್ಹ ಒಂದು ಮಾತು ಹೊರಡಲೊಲ್ಲದು. ವತ್ಸಲೆಯು ಕೆಳಗೆ ಚೆಲ್ಲಿದ ತನ್ನ ದೃಷ್ಟಿ

ಯನ್ನು ಕುತೂಹಲದಿಂದ ಮೇಲಕ್ಕೆತ್ತಿ ಆನಂದನ ಮುಖವನ್ನು ನೋಡಿದಳು. ಅಷ್ಟೇ ಧೈರ್ಯದಿಂದ ಆವನು "ವತ್ಸಲೆ, ನಾನೇಕೆ ಬಂದಿರುವೆನೆಂಬದು ನಿನಗೇನಾದರೂ ಗೊತ್ತಾಗಿರುವದೇನು ?" ಎಂದು ಪ್ರಶ್ನೆಮಾಡಿದನು.

"ನಾನೇನು ಬಲ್ಲೆ ?"

"ಮಾಧವರಾಯರು ನಿನ್ನ ಮುಂದೆ ಏನೂ ಹೇಳಲಿಲ್ಲವೆ ?"

"ಅವರೇನೇನೋ ಹೇಳಿದರು. ಆಗ ನನ್ನ ಮನಸ್ಸು ಸ್ಥಿರವಾಗಿರಲಿಲ್ಲ ವಾದ್ದರಿಂದ ನನಗೇನೂ ತಿಳಿಯಲಿಲ್ಲ." ಎಂದು ವತ್ಸಲೆಯು ಕಂಪಿತವಾದ ಧ್ವನಿಯಿಂದ ಉತ್ತರ ಕೊಟ್ಟಳು.

"ಅಂದರೆ ? ಅವರು ಹೇಳಿದ್ದು ನಿನಗೆ ಸರಿಯಾಗಿ ತೋರಲಿಲ್ಲವೇನು?" ಎಂದು ಆನಂದನು ಶಂಕಿತನಾಗಿ ಕೇಳಿದನು.

ಬಹಳೊತ್ತು ಧ್ಯಾನಿಸಿ ವತ್ಸಲೆಯೆಂದದ್ದು : "ನಿಮಗೆ ಸರಿಯಾಗಿ ತೋರಿತೇನು ?"

"ವತ್ಸಲೆ, ನನಗೆಂತೇ ತೋರಲಿ; ಕೇವಲ ನಿನ್ನ ಹಿತಕ್ಕಾಗಿ ನಾನು.... ಮಾಧವರಾಯರ ಅಭಿಪ್ರಾಯಕ್ಕೆ ಒಳಪಟ್ಟೆನು."

ಆನಂದರಾಯನು ಆಡಿದ್ದರ ಸತ್ಯತೆಯ ಬಗ್ಗೆ ಶಂಕೆ ತೆಗೆದುಕೊಳ್ಳಲು ಆಸ್ಪದವೇ ಇಲ್ಲೆಂಬದನ್ನು ವತ್ಸಲೆಯು ಸಂಪೂರ್ಣವಾಗಿ ಅರಿತವಳು. ವಿದ್ಯುತ್‌ಪ್ರವಾಹದ ಸೆಳಕಿನಿಂದಲೋ ಎಂಬಂತೆ ವತ್ಸಲೆಯು ಆನಂದನ ನುಡಿಕೇಳಿ ತಟ್ಟನೆ ವಿಭ್ರಮಗೊಂಡಳು. ತೀವ್ರವಾದ ರುಧಿರಾಭಿಸರಣದಿಂದ ಅವಳ ಮುಖವು ವಿಲಕ್ಷಣವಾದ ರಕ್ತಿಮೆಯನ್ನು ಹೊಂದಿತು. ಕುತ್ತಿಗೆ ಯುಬ್ಬಿ ಕಣ್ಣುಗಳೊಳಗಿಂದ ಅಶ್ರುಬಿಂದುಗಳು ಟಪಟಪನೆ ನೆಲಕ್ಕೆ ದುರಿದವು. "ಆನಂದರಾವ್........" ಎಂದಿಷ್ಟೆ ನುಡಿಯಬೇಕಾದರೆ ಅವಳಿಗೆ ಶ್ರಮ ವಾಯಿತು.

"ಹೇಳು ವತ್ಸಲಾ, ನಿಃಶಂಕವಾಗಿ ಮಾತಾಡು. ನಾನಿನ್ನೂ ಮುಂಚಿನ ಆನಂದನೇ ಎಂದು ತಿಳಿದು ಸಂಕೋಚಗೊಳ್ಳದೆ ಮಾತಾಡು."

"ಓರ್ವ ಹತಭಾಗ್ಯಳ ವಿಷಯವಾಗಿ ಕನಿಕರಪಡುವದು ತತ್ಕಾಲ ಮಾತ್ರವಾದದ್ದು. ನಾನು ದೀನಾವಸ್ಥೆ ಹೊಂದಿದೆನೆಂದು ಕಂಡು ನೀವು ಕನಿಕರಪಡುವದು ವಿಹಿತವೇ. ಆದರೆ ಆ ಕನಿಕರಕ್ಕಾಗಿ ನೀವು ನಿಮ್ಮ

ಸುಖಕ್ಕೆ ತಿಲಾಂಜಲಿಯನ್ನು ಕೊಟ್ಟು ಬಳಿಕ ಆಮರಣ ಪಶ್ಚಾತ್ತಾಪಕ್ಕೆ ಈಡಾಗುವಿರೆಂಬದನ್ನು ನೀವು ವಿಚಾರಿಸಿರುವಿರೊ? ಯಃಕಶ್ಚಿತವಾದ ನನ್ನ ಹಾಳು ಜೀವಿತವೆತ್ತಣದು! ಅದಕ್ಕಾಗಿ ಈ ದೇಶಕ್ಕೆ ಅಲಂಕಾರರಾಗತಕ್ಕವರಾದ ನೀವು ನಿಮ್ಮ ಸುಕೀರ್ತಿಗೆ ಹಾನಿ ತರುವಂಥ ಉದ್ಯೋಗವನ್ನು ಮಾಡುವದೇಸು!" ಎಂದು ವತ್ಸಲೆಯು ಆನಂದನ ಮುಖವನ್ನು ನೋಡುತ್ತ ನುಡಿದಳು.

"ವಿವೇಕಜ್ಞಳಾದ ನನ್ನ ವತ್ಸಲೆ, ಈ ವಿಷಯದಲ್ಲಿ ನಾನು ಪಶ್ಚಾತ್ತಾಪ ಹೊಂದುವ ಕಾರಣವೇ ಇಲ್ಲ. ನಿನ್ನಲ್ಲಿ ನನ್ನ ಪ್ರೇಮವು ಆಸಕ್ತವಾಗಿ ಬಹುಕಾಲವಾಗಿಹೋಯಿತು. ಇದುವರೆಗೂ ಅದು ನಿಶ್ಚಲವಾಗಿ ಉಳಿದಿರುವದು. ನಿರ್ಭರವಾದ ಪ್ರೇಮದಿಂದ ನಾನು ನಿನ್ನ ಪಾಣಿಗ್ರಹಣವನ್ನು ಮಾಡಿದರೆ ಪಶ್ಚಾತ್ತಾಪವೆಲ್ಲಿಂದ ಬರುವದು?" ಎಂದು ಆನಂದರಾಯನು ಗದ್ಗದ ಕಂಠನಾಗಿ ನುಡಿದು, ವತ್ಸಲೆಯ ಮನೋಹರವಾದ ಮುಖವನ್ನು ಏಕಾಗ್ರದೃಷ್ಟಿಯಿಂದ ನೋಡುತ್ತ ಕುಳಿತನು.

ಈ ಮಾತು ಕೇಳುತ್ತಲೆ, ವತ್ಸಲೆಯ ಹೃದಯವು ಕಂಪಿಸಿತು. ಚಿತ್ತಕ್ಕೆ ಭ್ರಮಬಂದಂತಾಗಿ ಆ ಮಂದಿರಕ್ಕೆ ಮಂದಿರವೇ ಆಂದೋಲನವನ್ನು ಹೊಂದುತ್ತಿರುವಂತೆ ಅವಳಿಗೆ ಭಾಸವಾಯಿತು. ಇಂಥ ಸ್ಥಿತಿಯಲ್ಲಿ ಅವಳೆಂತು ಮಾತಾಡಬಲ್ಲಳು? ಹತ್ತೆಂಟು ನಿಮಿಷಗಳಾದರೂ ವತ್ಸಲೆಯ ಮುಖದಿಂದ ಒಂದು ಅಕ್ಷರವಾದರೂ ಹೊರಡಲಿಲ್ಲ.

ಆನಂದನು "ವತ್ಸಲಾ!" ಎಂದು ಮೆಲ್ಲನೆ ಉಸುರಿದನು.

ವತ್ಸಲೆಯು ಸ್ವಪ್ನದಿಂದೆಚ್ಚತ್ತಂತಾಗಿ "ಏನು?" ಎಂದು ಮೂಢೆಯಂತೆ ಕೇಳಿದಳು.

"ವತ್ಸಲೆ, ನಿನ್ನನ್ನು ನಾನು ವಂಚಿಸಬಂದಿಲ್ಲ. ನೀನು ನನ್ನನ್ನು ಪ್ರೀತಿಸುತ್ತಿದ್ದರೆ ಇದೆಲ್ಲ ಮಾತು. ಇಲ್ಲವಾದರೆ ಈ ಸಂವಾದವು ಇಲ್ಲಿಗೆ ಸಾಕು."

"ನಿಷ್ಫಲವಾದ ಪ್ರೀತಿಯನ್ನು ವ್ಯಕ್ತಪಡಿಸಿ ಪ್ರಯೋಜನವೇನು?" ಎಂದು ನುಡಿದು ವತ್ಸಲೆಯು ಲಜ್ಜಿತಳಾಗಿ ತನ್ನ ಮುಖವನ್ನು ಎರಡೂ ಕೈಗಳಿಂದ ಮುಚ್ಚಿಕೊಂಡಳು.

ಆನಂದನು ಪರವಶನಾಗಿ ಎದ್ದು ವತ್ಸಲೆಯ ಕೈಹಿಡಿದು, “ಪ್ರಿಯೆ, ನೀನು ನನ್ನನ್ನು ಪ್ರೀತಿಸುತ್ತಿದ್ದರೆ ನಾವು ಮತ್ತೊಂದು ವಿಚಾರವನ್ನು ಮಾಡದೆ ಪುನರ್ವಿವಾಹದ ರೀತಿಯಿಂದ ದಂಪತಿಗಳಾಗಿ ಸುಖದಿಂದಿರಬಲ್ಲೆ ವಷ್ಟೆ?” ಎಂದು ಅವಳ ಕಣ್ಣಲ್ಲಿ ಕಣ್ಣಿಟ್ಟು ಮಂದಸ್ಮಿತನಾಗಿ ಕೇಳಿದನು.

ಆನಂದನು ತನ್ನ ಕೈ ಹಿಡಿದಿರಲು ಅಂಥ ಅನನುಭೂತವಾದ ಸುಖ ಸ್ಪರ್ಶದಿಂದ ಮೋಹಿತಳಾಗಿ ಕೈ ಬಿಡಿಸಿಕೊಳ್ಳುವದನ್ನು ಮರೆತು, ವತ್ಸಲೆಯು ಸುಮ್ಮನೆ ಕುಳಿತುಕೊಂಡಳು. ಅವಳು ಒತ್ತಾಯದಿಂದ ಸಂಗ್ರಹಿಸಿಕೊಂಡಿ ರುವ ನಿಶ್ಚಯವೆಲ್ಲ ಯಾವಾಗಲೋ ಜಾರಿಹೋಗಿತ್ತು. ಮಾತಾಡುವಷ್ಟು ಚಿತ್ತಸ್ವಾಸ್ಥ್ಯವಾದ ಬಳಿಕ ಅವಳು “ಆನಂದರಾವ ಕೈ ಬಿಡಿರಿ! ನನ್ನನ್ನು ಮೋಹಕ್ಕೆ ಈಡುಮಾಡಬೇಡಿರಿ. ಪುನರ್ವಿವಾಹದ ವಿಚಾರವು ನನಗೆ ಚನ್ನಾಗಿ ತೋರಲೊಲ್ಲದು.” ಎಂದು ನುಡಿದಳು.

“ಯಾಕೆ?” ಎಂದು ಆನಂದನು ಚಕಿತನಾಗಿ ಕೇಳಿದನು.

“ಯಾಕೆಂದರೆ, ಪುನರ್ವಿವಾಹಿತರಾದ ನಮ್ಮನ್ನು ಸಮಾಜವು ಅಂಗೀ ಕರಿಸದು.”

“ಪ್ರಿಯೆ, ಸಮಾಜದ ಗೊಡವೆ ನಮಗೇಕೆ? ಸುಧಾರಣೆಯ ಪಂಥ ದವರು ನಮ್ಮನ್ನು ಆದರದಿಂದ ಸನ್ಮಾನಿಸುವರಲ್ಲೆ?”

“ಸುಧಾರಣೆಯ ಪಂಥವು ನಮ್ಮ ಸಮಾಜದ ತಿರಸ್ಕೃತವಾದ ಚಿಕ ದೊಂದು ಮೇಳೆಯು. ಪ್ರಾಚೀನ ಸಾಂಪ್ರದಾಯಾನುವರ್ತಿಗಳಲ್ಲಿ ಅನೇ ಕರು ನಮ್ಮ ಆಪ್ತರೂ ಸ್ನೇಹಿತರೂ ಇರುವರು. ಅವರಿಗೆಲ್ಲ ನಾವು ಬೇಡಾ ಗಿರುವದು ಬಾಳುವೆಯೆ?” ಎಂದು ವತ್ಸಲೆಯು ಚಿಂತಾಕುಲೆಯಾಗಿ ನುಡಿದಳು.

“ಕೊಂಚ ವಿಚಾರ ಮಾಡಿ ನೋಡಿದರೆ, ನಿನ್ನ ಸಂಶಯದ ಪರಿಹಾರ ವಾಗುವದು. ನಮ್ಮ ಸಮಾಜದವರು ಗುಣಗ್ರಾಹಿಗಳಲ್ಲ. ನಿಜವಾದ ಧರ್ಮಶಾಸ್ತ್ರವು ಹೇಳುತ್ತಿರುವದೇನು, ನಾವು ಆಚರಿಸುತ್ತಿರುವದೇನು ಎಂಬದರ ವಿವೇಕವು ಅವರಿಗಿಲ್ಲ. ರೂಢವಾದ ಮೂಢ ವಿಚಾರಗಳೇ ಶಿಷ್ಟಾಚಾರವಾಗಿವೆ. ಹೊಸ ಶೋಧ-ಸುಧಾರಣೆಗಳೆಲ್ಲ ಅವರ ಮತದಿಂದ ಅಧರ್ಮವಾಗಿವೆ. ಹೊಗೆಬಂಡಿಯಲ್ಲಿ ಪ್ರವಾಸ ಮಾಡುವದು ಮೊದಲು

ಮೊದಲು ಧರ್ಮಬಾಹ್ಯವಾಗಿತ್ತು. ನಿಲುವಂಗಿಯನ್ನು ಬಿಟ್ಟು ಯುರೋಪಿಯನ್ನರ ಮಾದರಿಯ ಕೋಟುಗಳನ್ನು ತೊಟ್ಟುಕೊಂಡವನು ಹತ್ತು-ಹದಿನೈದು ವರ್ಷಗಳಾಚೆಗೆ ಧರ್ಮಹೀನರಲ್ಲಿ ಗಣನೆಯನ್ನು ಹೊಂದುತ್ತಿದ್ದನು. ಯುರೋಪಿಯನ್ನರನ್ನು ಮುಟ್ಟಿಬಂದವನಿಗೆ ಹೊಲೆಮೈಲಿಗೆ. ಈಗ ಅದೇ ಸಮಾಜದವರು ಆಂಗ್ಲರನ್ನು ಮುಟ್ಟಿ ನಿಃಶಂಕವಾಗಿ ಮನೆಗೆ ಬರುತ್ತಾರೆ. ಕೋಟುಗಳೇ ಪ್ರಬಲವಾಗಿ ಮುಂಚಿನ ನಿಲುವಂಗಿಗಳು ಎಲ್ಲಿಯೋ ಅಡಗಿದವು. ಹೊಗೆಬಂಡಿಗಳಲ್ಲಿ ಪ್ರಯಾಣ ಮಾಡದೆ ಇದ್ದ ಆಚಾರ್ಯ ಪುರಾಣಿಕರಿಲ್ಲವೇ ಇಲ್ಲ. ಹೊಸ ಸಾಂಪ್ರದಾಯವನ್ನು ಜಾಣನೂ ಧೈರ್ಯಶಾಲಿಯೂ ಆದವನೊಬ್ಬನು ಸಮಾಜದಲ್ಲಿ ನೂಕಿದನೆಂದರೆ, ಆ ಸಾಂಪ್ರದಾಯವು ಪ್ರಾರಂಭದಲ್ಲಿ ಕೊಂಚ ಅನಾದರವನ್ನು ಹೊಂದಿದರೂ ಕಡೆಗೆ ಅದೇ ಸಾಂಪ್ರದಾಯವೇ ಪ್ರಶಸ್ತವಾಗಿ ಮೆರೆಯುವದು.

ಇದೇ ಮೇರಿಗೆ ಜನರು ಸಮಾಜದ ಭೀತಿಯಿಂದ ಪುನರ್ವಿವಾಹದ ಪದ್ಧತಿಯನ್ನು ಬಿಟ್ಟರೆ ಬಿಟ್ಟೇ ಹೋಗುತ್ತದೆ. ಪುರಸ್ಕರ್ತರು ಧೈರ್ಯದಿಂದ ಆ ಮಾರ್ಗವನ್ನು ಅವಲಂಬಿಸಿದರೆ ಮುಂದೆ ಅದೇ ಮೆಲ್ಲಮೆಲ್ಲನೆ ಪ್ರಚಾರದಲ್ಲಿ ಬಂದು ಜನರ ಆದರಕ್ಕೆ ಪಾತ್ರವಾಗುವದು."

ವತ್ಸಲೆಯು ಔತ್ಸುಕ್ಯದಿಂದ ಆನಂದರಾಯನ ಸುಂದರವಾದ ಮುಖವನ್ನು ನೋಡುತ್ತಲೇ ಇದ್ದಳು. ಅವನ ವಾದವು ಮುಗಿದ ಬಳಿಕ ಆ ಚತುರೆಯ ತಳೆದ ನಗೆಯಲ್ಲಿ ಸಂಶಯನಿವಾರಣದ ಪ್ರಸನ್ನತೆಯು ಕಂಡುಬರಲಿಲ್ಲ.

"ಸುಂದರಿ, ನಿನ್ನ ಶಂಕೆಯು ಇನ್ನೂ ದೂರಾಗಿಲ್ಲನೆಂದು ತೋರುತ್ತದೆ ಶಾಸ್ತ್ರಾರ್ಥವನ್ನು ಕುರಿತು ನಿನಗೆ ವಾದ ಮಾಡುವದಿದೆ ಏನು?"

"ಶಾಸ್ತ್ರಾರ್ಥವು ದೊಡ್ಡ ವಿಷಯವಲ್ಲ. ಉಭಯ ಪಕ್ಷದವರೂ ಅರೆವಾಸಿಯಾಗಿ ಸೋತಿದ್ದರೂ ದುರಾಗ್ರಹದಿಂದ ವಾದಿಸುತ್ತಿರುವರು. ಆದರೆ...." ಎಂದು ವತ್ಸಲೆಯು ಲೀಲೆಯಿಂದ ನುಡಿದು ನಕ್ಕು ಮುಂದೆ ಮಾತಾಡಲರಿಯದೆ ತಡೆದಳು.

"ತಡೆಯುವದೇಕೆ ಪ್ರಿಯೆ, ಸಾಗಲಿ."

"ಇಂಥ (ಪ್ರಿಯಳೆಂಬ) ಸಂಬೋಧನವೇಕೆ?" ಎಂದು ವತ್ಸಲೆಯು ಕೊಂಚ ಕೋಪವನ್ನು ತಳೆದಂತೆ ನಟಿಸಿ ಕೇಳಿದಳು.

"ಈ ರೀತಿಯಾಗಿ ಇದೇ ಪ್ರಸಂಗದಲ್ಲಿ ನಾನು ಸಂಬೋಧಿಸಿ ಹತ್ತು ನಿಮಿಷಗಳಾಗಿಲ್ಲ. ಆಗೇಕೆ ಈ ಆಕ್ಷೇಪಣೆ ಬರಲಿಲ್ಲ?" ಎಂದು ಆನಂದನು ಮಂದಹಾಸದಿಂದ ನುಡಿದನು.

ವತ್ಸಲೆಯು ನಿರುತ್ತರಳಾದಳು. ಆಮೇಲೆ ಆನಂದನು "ಆದರೆ.... ಎಂದು ತಡೆದಿಯೇಕೆ? ನಿನ್ನ ಆಕ್ಷೇಪಣೆಯೇನು?"

"ನೀವು ಹೇಳಿದ್ದರಲ್ಲಿ ನಿಮಗೆಯೇ ನಂಬಿಗೆ ಇರುವದೇನು? ಪುನರ್ವಿವಾಹವು ಪವಿತ್ರವಾದದ್ದೆಂದು ನಿಮ್ಮ ನಿಜವಾದ ಮತವೊ?"

"ಹೇಗೆ ಹೇಳಲಿ ಮನೋರಮೆ? ಶಪಥಮಾಡಿ ಹೇಳಲಿಯಾ?"

"ಹೇಗೆ ಹೇಳಿದರೂ ನಂಬುವೆನು. ನಿಮ್ಮಲ್ಲಿ ನನಗೆ ಸಂಪೂರ್ಣವಾದ ನಂಬಿಗೆ" ಎಂದು ನುಡಿದು ವತ್ಸಲೆಯು ಪ್ರೇಮಪೂರಿತವಾದ ಸುಹಾಸವನ್ನು ತಳೆದಳು.

ಆಗ ಆನಂದರಾಯನು ವತ್ಸಲೆಯನ್ನು ತನ್ನ ಬಾಹುಪಾಶದಲ್ಲಿ ಪಿಡಿದು, ಆವಳ ಕೆಂದುಟಿಯನ್ನು ಚುಂಬಿಸಿ, "ಇದು ನನ್ನ ನಂಬಿಗೆ ನಿಶ್ಚಯಗಳ ಕುರುಹು!" ಎಂದು ಸಂಭ್ರಮದಿಂದ ನುಡಿದನು.

ಮುಂದೆ ಎಂಟುನೆಂಟು ದಿವಸ ಬೆಂಗಳೂರಲ್ಲೆಲ್ಲ ಪುನರ್ವಿವಾಹವನ್ನು ಕುರಿತು ಚರ್ಚೆ, ಶಾಸ್ತ್ರಾರ್ಥ, ವಾಗ್ವಾದ, ಕಲಹ, ಬೊಬ್ಬಾಟಗಳ ದೊಡ್ಡದೊಂದು ಸ್ತೋಮವೇ ಎದ್ದಿತು. ಶಾಸ್ತ್ರಾರ್ಥದ ನಿರ್ಣಯವಾದ ಮೇರೆಗೆ ನಡಕೊಳ್ಳೋಣ ಎಂದು ಹೇಳಿ ತಟಸ್ಥವೃತ್ತಿಗಳಾದ ಮಹಾತ್ಮರ ಸಂಖ್ಯೆಯು ತೀರ ಕಡಿಮೆ. "ಕಲಿಕಾಲ! ಸುಧಾರಕ ಮುಂಡೇಮಕ್ಕಳು ಧರ್ಮವನ್ನು ಕೆಡಿಸಿಬಿಡುತ್ತಾರೆ," ಎಂದು ಹುಸಿಬಿಸಿ ಪಂಡಿತನಾದ ಮಠಾಧಿಪತಿಯೋರ್ವನು ಅಧಿಕಾರದ ಉನ್ಮಾದದಿಂದ ಗೊಗ್ಗರ ಧ್ವನಿ ತೆಗೆದು ಕೂಗಿಕೊಳ್ಳುತ್ತಿದ್ದನು.

"ಬ್ರಾಹ್ಮಣರೇ ಸ್ವಕಪೋಲಕಲ್ಪಿತವಾದ ಕ್ಷೇಪಕ ಶ್ಲೋಕಗಳನ್ನು ಧರ್ಮಶಾಸ್ತ್ರ ಪುರಾಣಗಳಲ್ಲಿ ಸೇರಿಸಿ ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುವದಕ್ಕಾಗಿ, ಸಮಾಜಕ್ಕೆ ದುಃಸ್ಥಿತಿಯನ್ನು ಉಂಟುಮಾಡಿದರು. ನಾವು ಶಾಸ್ತ್ರಗಳನ್ನು ಲೆಕ್ಕಿಸದೆ ನಮಗೆ ಉಚಿತವಾಗಿ ತೋರಿದ್ದನ್ನೇ ಮಾಡುವೆವು." ಎಂಬ ವರ್ಣಸಂಕರ ಪ್ರಿಯರಾದ ಕೆಲಜನ ಉನ್ಮತ್ತರು ಬೊಬ್ಬಿರಿದರು. ಶಾಸ್ತ್ರ

ವಿಚಾರಗಳ ಗಂಧರಹಿತರಾದ ಮೂಢರು, ಕೇವಲ ಬಾಯಿಪ್ರಸಾದಗಳನ್ನೇ ಮಾಡುತ್ತ ವೃಥಾ ವ್ಯಾಜ್ಯವನ್ನು ಮಾಡಿದರು.

ಪುನರ್ವಿವಾಹವನ್ನು ನಿಷೇಧಿಸಬೇಕೆಂದು ರಘುನಾಥರಾಯರು ಮಿತಿ ಮೀರಿ ಸಾಹಸಮಾಡಿದರು. ಆದರೆ 'ಹಗ್ಗ ಹರಿಯಲಿಲ್ಲ, ಕೋಲು ಮುರಿಯಲಿಲ್ಲ'ವೆಂಬ ನಾಣ್ಣುಡಿಯಂತೆ, ವಾದದಲ್ಲಿ ಏನೂ ನಿಷ್ಪನ್ನವಾಗಲಿಲ್ಲ. ಮಗನಾದ ಆನಂದನು ತನ್ನ ಆಗ್ರಹವನ್ನು ಬಿಡಲಿಲ್ಲ. ಕಡೆಗೆ ರಘುನಾಥರಾಯರು ಐಹಿಕ ವಿಚಾರಗಳನ್ನೆಲ್ಲ ಬಿಟ್ಟುಕೊಟ್ಟು ಕಾಶೀವಾಸಕ್ಕಾಗಿ ಹೋಗುವವರಾಗಿದ್ದಾರೆ. ಅವರು ಕಾಶಿಗೆ ಹೋದ ಬಳಿಕ ಆನಂದ ವತ್ಸಲೆಯರ ಪುನರ್ವಿವಾಹದ ಸಮಾರಂಭವಾಗತಕ್ಕದ್ದೆಂಬು ಗೊತ್ತಾಗಿದೆ.

# ಮಲ್ಲೇಶಿಯ ನಲ್ಲೆಯರು

ಹೇಮರಡ್ಡಿ ಪ್ರಭುಗಳು ಒಂದು ಊರಿನ ದೇಸಾಯರು. ಆ ಗ್ರಾಮದ ಉತ್ಪನ್ನವು ಆರೇಳು ಸಾವಿರ ರೂಪಾಯಿ ಇರುವದಲ್ಲದೆ ದೇಸಾಯರಿಗೆ ತೋಟ ಪಟ್ಟಿ ಮನೆಯ ಒಕ್ಕಲತನಗಳಿಂದಾದರೂ ಪ್ರಾಪ್ತಿಯು ಚನ್ನಾಗಿತ್ತು. ಅವರೊಂದು ದಿನ ತಮ್ಮ ತೋಟವನ್ನು ನೋಡಲಿಕ್ಕೆ ಹೋದಾಗ ಅಲ್ಲಿಯ ಕಾವಲುಗಾರನಾದ ಮಲ್ಲೇಶಿಯು ತನ್ನ ಯಜಮಾನರನ್ನು ತೋಟದಲ್ಲೆಲ್ಲ ಅಡ್ಡಾಡಿಸಿಕೊಂಡು ಬಂದನು. ಮಲ್ಲೇಶಿಯ ದಕ್ಷತೆಗಾಗಿ ಆ ತೋಟದಲ್ಲಿ ಕಾಗೆ ಗುಬ್ಬಿಗಳು ಕೂಡ ಅಡ್ಡ ಹಾಯುತ್ತಿರಲಿಲ್ಲ. ತೋಟದ ಬೇಲಿಗಳು ಅಚ್ಚಳಿಯದೆ ಕೋಟೆಯ ಗೋಡೆಗಳಂತೆ ಭದ್ರವಾಗಿ ಕಂಗೊಳಿಸುತ್ತಿದ್ದವು. ಮಾಡಿಟ್ಟ ಹಾದಿಗಳಲ್ಲದೆ ತೋಟದಲ್ಲಿ ಅತ್ತಿತ್ತ ದನಕರುಗಳ ಅಥವಾ ಮನುಷ್ಯನ ತುಳುಕಲಿನ ಸಂಪರ್ಕವೇ ಇದ್ದಿಲ್ಲ. ಕಾಯಿಪಲ್ಲೆಗಳ ಮಡಿಗಳಾಗಲಿ, ಹಣ್ಣು ಹಂಪಲಿನ ಗಿಡಗಳಾಗಲಿ ಕಬ್ಬು ಬಾಳೆಗಳ ಫಡಗಳಾಗಲಿ ಅಬಾಧಿತವಾಗಿದ್ದು ಸಸಿಬಳ್ಳಿಗಿಡಗಳೆಲ್ಲ ಪ್ರಫುಲ್ಲಿತವಾಗಿ ತೋರಿ ದೇಸಾಯರ ಮನಸ್ಸಿಗೆ ಆನಂದವನ್ನಿತ್ತವು. ಮಲ್ಲೇಶಿಯ ಕಣ್ಣು ತಪ್ಪಿಸಿ ಒಂದು ಕಾಯಿ, ಒಂದು ಹೂವನ್ನು ಕೂಡ ತೆಗೆದುಕೊಂಡು ಮನೆಗೆ ಹೋಗುವೆನೆಂದರೆ ಪ್ರತ್ಯಕ್ಷ ತೋಟಿಗನಿಗೆ ಕೂಡ ಅಸಾಧ್ಯವಾಗಿತ್ತು.

ಯಜಮಾನರು ಅತ್ತಿತ್ತ ತಿರುಗಾಡಿ ನೋಡಿ ಬಂದು, ದಟ್ಟಾಗಿ ಬೆಳೆದಿರುವ ಮಾವಿನ ಮರದ ಅಡಿಯಲ್ಲಿರುವ ಕಟ್ಟೆಯ ಮೇಲೆ ಕುಳಿತು "ಅಹುದು, ಮಗನೆ ಮಲ್ಲೇಶಿ, ತೋಟವನ್ನು ಬಲು ಚನ್ನಾಗಿ ಕಾದಿರುವಿ. ಈ ವರ್ಷದ ಆಕಾರವು ಹೋದ ವರ್ಷದ ಆಕಾರಕ್ಕೆ ಇಮ್ಮಡಿಯಾಗಿ ಕಾಣುತ್ತದೆ." ಎಂದು ಕಾವಲುಗಾರನನ್ನು ಕೊಂಡಾಡಿದರು.

ಮಲ್ಲೇಶಿಯು ಸಂತೋಷದಿಂದ ಉಬ್ಬಿ ತನ್ನ ಕೈಯಲ್ಲಿರುವ ತುಬಾಕಿಯನ್ನು ಎಡಗೈಯಲ್ಲಿ ಹಿಡಿದು ಯಜಮಾನರಿಗೆ ಪ್ರಣಾಮ ಮಾಡಿ ಅಭಿಮಾನ ವ್ಯಂಜಕವಾದ ನಗೆ ನಕ್ಕನು. ದೇಸಾಯರು ತಮ್ಮ ಶಿರೋಭೂಷಣವನ್ನು ತೆಗೆದು ಕೆಳಗಿರಿಸಿ ಬೆವರೊರಸಿಕೊಂಡು, "ಮಲ್ಲೇಶಿ, ಭರಮನು ತೀರಿ

ಕೊಂಡಾಗಿನಿಂದ ನಮ್ಮ ಟಾಂಗೆಯನ್ನು ಹೊಡೆಯುವವರಿಲ್ಲದಂತಾಗಿದೆ, ಹುಡುಗಾ," ಎಂದು ನುಡಿದರು.

"ಅಹುದು ದೇವರೂ, ಭರಮಪ್ಪನಂಥ ಜಾಣನಾದ ಟಾಂಗೆಯವನು ಸಿಕ್ಕುವದು ಎಂಥ ಮಾತೋ ಕಾಣೆನು." ಎಂದು ಮಲ್ಲೇಶಿಯು ನಿರ್ವ್ಯಾಜವಾದ ತನ್ನ ಅಭಿಪ್ರಾಯವನ್ನು ಹೇಳಿದನು.

"ನೀನು ನಮ್ಮ ಟಾಂಗೆಯನ್ನು ಹೊಡೆಯಬಲ್ಲೆಯಾ ಮಲ್ಲೇಶಿ?"

"ಹೊಡಿ ಅಂದರೆ ಹೊಡೆಯುವೆನು ದೇವರೂ. ಕನಕನೂರಿನ ಧೊರೆಗಳ ಮನೆಯಲ್ಲಿದ್ದಾಗ ನಾನು ಟಾಂಗೆಯನ್ನೇ ಹೊಡೆಯುತ್ತಿದ್ದೆನು."

"ಅಹುದೋ! ಆವರ ಕುದುರೆಗಳು ತಟ್ಟುಗಳಾಗಿದ್ದವು. ನಮ್ಮ ಕುದುರೆಗಳು ಮದ್ದಾನೆಯಂಥವು. ಭೀಮನಿಗೆ ಕೂಡ ಚನ್ನಾಗಿ ಮಣಿಯುತ್ತಿದ್ದಿಲ್ಲ."

"ಹಣಿಯದೇನು ದೇವರೂ? ಅದರಪ್ಪ ಮಣಿದಾವು! ಹತ್ತಿ ನಾಲ್ಕು ತೀವು ತಿರುವಿದರೆ ಕುದುರೆಯ ನೆಲೆ ನಮಗೂ ನಮ್ಮ ನೆಲೆ ಕುದುರೆಗೂ ಗೊತ್ತಾಗಿಹೋಗುವದು. ಹೆಂಗಸೊಂದೆಯೇ ಅಡಮುಟ್ಟಿ ನಿಂತ ನೋಡಿರಿ! ಅವರ ನೆಲೆ ಮಾತ್ರ ಯಾರಿಗೂ ಹತ್ತಿಲ್ಲ."

"ಹೆಂಗಸರ ನೆನಪು ಒಳಿತಾಗಿ ತೆಗೆದಿ ಮಲ್ಲೇಶೀ. ನಮ್ಮ ಮನೆಯವರ (ದೊರೆಸಾನಿಯವರ) ಕೈಕೆಳಗೆ ಒಬ್ಬ ಇಚ್ಛಕಳಾದ ಹೆಣ್ಣುಮಗಳು ಬೇಕಾಗಿದ್ದಾಳೆ. ನೀನು ಒಳ್ಳೆಯದೊಂದು ಹೆಣ್ಣು ನೋಡಿಕೊಂಡು ಬರಬಾರದೆ? ನಿನ್ನ ಮದುವೆಯನ್ನು ಮಾಡಿ ಗಂಡಹೆಂಡರನ್ನು ಕೂಡಯೇ ಅರಮನೆಯಲ್ಲಿ ಇಟ್ಟುಕೊಳ್ಳುತ್ತೇವೆ. ನೀನು ಟಾಂಗೆಯನ್ನು ಹೊಡೆದರೆ ನಿನಗೆ ತಿಂಗಳಾ ನಾಲ್ಕು ವರಾಹ ಸಂಬಳ ದೊರಕುವದು."

"ಮದುವೆಯ ಗೋಳಿಗೆ ನನ್ನನ್ನು ಹಾಕಬೇಡಿರಿ ದೇವರೂ; ಕೈ ಜೋಡಿಸುತ್ತೇನೆ. ಮನುಷ್ಯನಿಗೆ ಈಗಿದ್ದ ಸ್ವಾತಂತ್ರ್ಯವು ಮದುವೆಯಾದ ಮೇಲೆ ಹೇಗೆ ಬಂದೀತು? ಸೀರೆ ತಾ; ಕುಪ್ಪಸ ತಾ; ತೋಳಬಂದೀ ತಾ; ಟಿಕ್ಕಿ ತಾ; "ತಾ" ಎಂಬ ಸೊಲ್ಲು ತಪ್ಪುವದೇ ಇಲ್ಲ! ಹೆಂಡತಿಯು ಜಾತ್ರೆಗೆ ಹೊರಟರೆ ನಾವು ಹಿಂಬಾಲಿಸಿ ನಡೆಯಲೇಬೇಕು. ಅವಳು ಊರಲ್ಲಿ ಜಗಳವನ್ನು ಕೊಂಡುತಂದರೆ ನಾವು ಅವಳನ್ನು ಮೇಲುಕಟ್ಟಿ

ವ್ಯಾಜ್ಯಕ್ಕೆ ಸಿದ್ಧರಾಗಬೇಕು. 'ಮದುವೆಯನ್ನು ಬಿಟ್ಟುಕೊಟ್ಟು ಶಿವಶಿವ ಎಂದಿದ್ದುಕೊಂಡಿರುವದು ಒಳಿತಲ್ಲವೆ?" ಎಂದು ಮಲ್ಲೇಶಿಯು ಉಪನ್ಯಾಸ ಮಾಡಿದನು.

"ಹುಚ್ಚ ನನ್ನ ಮಗನೆ, ಮನುಷ್ಯನು ಮದುವೆಯನ್ನೊಲ್ಲೆನೆಂದರೆ ಲೋಕವೆಂತು ಸಾಗುವದು? ನಿಮ್ಮಪ್ಪನು ಮದುವೆಯಾಗಿದ್ದನು; ನಿಮ್ಮ ಮುತ್ತಾತನು ಮದುವೆಯಾಗಿದ್ದನು; ಅವರ ಅಪ್ಪನಾದರೂ ಮದುವೆಯಾಗಿದ್ದನು." ಎಂದು ದೇಸಾಯರು ಯುಕ್ತಿವಾದ ಮಾಡಿ ಬೋಧಿಸಿದರು.

"ಮದುವೆಯನ್ನು ಮಾಡಿಕೊಳ್ಳುವದು ಸುಲಭವಾಗಿರಬಹುದು; ಆದರೆ ಪರಿಣಾಮವು ಹೇಗಾಗುವದೋ ಯಾರು ಬಲ್ಲರು? ನನ್ನ ತಾಯಿತಂದೆಗಳೀರ್ವರೂ ದಿನ ಬೆಳಗಾದರೊಮ್ಮೆ ಜಗಳ ಮಾಡದೆ ಇರಲಿಲ್ಲ."

"ಮಲ್ಲೇಶಿ, ಸುಮ್ಮನೆ ನನ್ನ ಮಾತು ಕೇಳಿ ನೀನು ಮದುವೆಯಾಗು. ಹಾಗೆ ವಾದಿಸಬೇಡ."

"ತಂದೆಯವರು ಕುಳಿತು ಮದುವೆಯಾಗೆಂದು ಹಟ ತೊಟ್ಟರೆ ಯತ್ನವಿಲ್ಲ, ಮದುವೆಯಾಗಲೇಬೇಕು. ಆದರೆ ಹೆಣ್ಣು ನೋಡಿಕೊಂಡು ಬರುವ ಕೆಲಸವಾದರೂ ನನ್ನದೇ ಎಂದು ಹೇಳುತ್ತೀರಲ್ಲ!" ಎಂದು ಮಲ್ಲೇಶಿಯು ಅಧೈರ್ಯದಿಂದ ನುಡಿದನು.

"ಹಣ ವೆಚ್ಚಮಾಡಿ ಮದುವೆ ಮಾಡುವ ಕೆಲಸವು ನನ್ನದು; ತಿರುಗಾಡಿ ಒಂದು ಹೆಣ್ಣು ನೋಡಿಕೊಂಡು ಬರಲಾರಿಯಾ? ನಿನ್ನಂಥ ಹುಡುಗನಿದ್ದರೆ, ಹೆಣ್ಣಿಗೇನು ಕಡಿಮೆ?"

"ಕಡಿಮೆಯಿಲ್ಲ ನನ್ನೊಡೆಯರೆ, ಅರ್ಧದೇಶವೇ ಹೆಣ್ಣಾಗಿರುವದು. ಎಲ್ಲಿ ನೋಡಿದಲ್ಲಿಯೂ ಹೆಂಗಸರಾಗಿದ್ದರೂ ಹಿಡಿಯಲಿಕ್ಕೆ ಹೋದರೆ ಒಬ್ಬಳೂ ಕೈಗೆ ಹತ್ತುವದಿಲ್ಲ. ಆದರೂ ಎರಡು ದಿವಸ ನನ್ನನ್ನು ಬಿಡಿರಿ. ಹೇಗಾದರೂ ಮಾಡಿ ಒಂದು ಹೆಣ್ಣನ್ನು ಗೊತ್ತುಮಾಡಿಕೊಂಡು ಬರುವೆನು."

"ಹೋಗು; ಎರಡು ದಿವಸ ನಿನಗೆ ಅಪ್ಪಣೆಯಿದೆ. ಉತ್ತಮಳಾದ ಕನ್ನೆಯನ್ನು ಆರಿಸಿಕೊಂಡು ಬಾ."

ಮರುದಿವಸ ಮಲ್ಲೇಶಿಯು ಪ್ರಾತಃಕಾಲದಲ್ಲೆದ್ದು ಕ್ಷೌರ ಮಾಡಿಸಿಕೊಂಡು ಎರಕೊಂಡನು. ಕೇವೆಯ ಬಣ್ಣದ ಹೊಸ ಚಲ್ಲಣವನ್ನು ತೊಟ್ಟು

ವ್ಯಿಗೆ ಕಿಟಿಕಿಟಿಯಾಗಿರುವ ಗಂಜಿಯ ಅಂಗಿಯನ್ನು ತೊಟ್ಟುಕೊಂಡನು. ಯಜಮಾನರ ಶೇಷವಸ್ತ್ರವಾಗಿದ್ದ ಕೆಂಪು ಜರದ ಫೇಟೆಯನ್ನು ಓರೆಯಾಗಿ ತಲೆಗೆ ಸುತ್ತಿಕೊಂಡು ಬಲಗಿವಿಯ ಸಂದಿನಲ್ಲಿ ಮಲ್ಲಿಗೆಯ ಹೂಗೊಂಚಲವನ್ನು ಸಿಕ್ಕಿಸಿಕೊಂಡನು. ಹೆಜ್ಜೆಗೊಮ್ಮೆ ರವರವಿಸುವ ಕಾಲಮರಿಗೆಯನ್ನು ಮೆಟ್ಟಿಕೊಂಡು ಆ ಕನ್ಯಾರ್ಥಿಯಾದ ನವತರುಣನು ನೆಲ ಅದರುವಂತೆ ಹೆಜ್ಜೆಗಳನ್ನು ತುಳಿಯುತ್ತ ಪೇಟೆಯ ಹಾದಿಯನ್ನು ಹಿಡಿದು ನಡೆದನು. ಮಾರ್ಗದಲ್ಲಿ ಚರಂತಯ್ಯನ ಮಠವನ್ನು ಕಂಡು ಮಲ್ಲೇಶಿಯು ಒಳ್ಳೇ ಬಿಂಕದಿಂದ ಒಳಗೆ ಹೊಕ್ಕು "ಇರಸಂಗಯ್ಯನವರೂ ಸ್ವಾಮೀ!" ಎಂದು ಕೂಗಿದನು. ಅಯ್ಯನವರು ಮಠದಲ್ಲಿ ಇದ್ದಿಲ್ಲ. ಯಾವಳೋ ತರುಣಿಯೋರ್ವಳು ಬಾಗಿಲದ ಫಡಕಿನ ಮರೆಗೆ ನಿಂತು ಅರ್ಧ ಮೋರೆಯನ್ನು ಮೆಲ್ಲನೆ ಹೊರಗೆ ಚಾಚಿ "ಅಯ್ಯನವರು ಹೊರಗೆ ಹೋಗಿದ್ದಾರೆ" ಎಂದು ಮಂಜುಲವಾದ ಧ್ವನಿಯಿಂದ ಹೇಳಿದಳು.

ಮಲ್ಲೇಶಿಯು ಆ ಚೆಲುವೆಯಾದ ತರುಣಿಯನ್ನು ನೋಡಿ ತನ್ನ ಮನಸ್ಸಿನಲ್ಲಿಯೇ "ಹುಡಿಗಿ ಮಾತ್ರ ಬಲು ಗಾಂವು!" ಎಂದು ಉದ್ಗಾರ ತೆಗೆದು, ಇನ್ನವಳನ್ನು ಮಾತಾಡಿಸಬಹುದೋ ಬೇಡವೋ ಎಂಬ ಯೋಚನೆಯಲ್ಲಿ ಕ್ಷಣಹೊತ್ತು ಸುಮ್ಮನೆ ನಿಂತುಕೊಂಡನು.

"ಯಾಕೆ ಬಂದಿರುವಿರಿ? ನೀರು-ನಿಡಿ ಏನಾದರೂ ಬೇಕೇನು?" ಎಂದು ಕೇಳಿ ಆ ಸುಂದರಿಯಾದ ಯುವತಿಯು ಮಲ್ಲೇಶಿಯ ವೇಷವನ್ನು ಚನ್ನಾಗಿ ನಿರೀಕ್ಷಿಸಿ ನೋಡಿ ವಿನೋದದಿಂದ ಮಂದಹಾಸಗೈದಳು.

ಮಲ್ಲೇಶಿಯು ಹೊಸ ಹರೆಯದ ಹುಡುಗನಾಗಿದ್ದರೂ ನಾರಿಯರ ಹೃದ್ಗತವನ್ನು ಕಂಡುಹಿಡಿಯುವಷ್ಟು ಚಾತುರ್ಯವು ಅವನಲ್ಲಿದ್ದಿಲ್ಲ. ಸಂಭಾಷಣಾನುಕೂಲವಾದ ಪ್ರಸಕ್ತಿಯನ್ನು ಜಾಣೆಯಾದ ಆ ಯುವತಿಯು ತೆಗೆದಿದ್ದರೂ ಸಮಯಗ್ರಹಣಶಕ್ತಿಯಿಲ್ಲದವನಾದ ಆ ಹೆಡ್ಡನು ತನಗೆ ನೀರು ಬೇಡವೆಂದು ಅಸಭ್ಯವಾದ ರೀತಿಯಿಂದ ಹೇಳಿದನು. ತರುಣನಾದ ಪುರುಷನಲ್ಲಿ ಮೂಢತನದ ವಿಶೇಷಾಂಶವು ಕಂಡುಬಂದಲ್ಲಿ ಕಾಮಿನಿಯರ ವಿನೋದಕ್ಕೆ ಪ್ರಶಸ್ತವಾದ ಆಸ್ಪದವುಂಟಾಗುವದು ಸಹಜವು. ಆಮೇಲೆ ಆ ಯುವತಿಯು ಮನಸ್ಸಿನ ಸಂಕೋಚವನ್ನು ದೂಡಿ ಬಾಗಿಲದ ಮರೆಯಿಂದ

ಹೊರಗೆ ಬಂದು—

" ಹಾಗಾದರೆ ಇಲ್ಲಿ ನಿಮ್ಮದೇನು ಕೆಲಸ ? ಮದುವೆಯ ಕಾರ್ಯವೇ ನಾದರೂ ಇರುವದೋ ? ಸೊಬಗಿನ ಉಡಿಗೆತೊಡಿಗೆಗಳನ್ನು ಮಾಡಿಕೊಂಡು ಬಂದವರಾದ ನೀವು ಮದಿಮಕ್ಕಳಂತೆ ಕಾಣುವಿರಿ ! " ಎಂದು ವಿನೋದ ಗೈದು ಪ್ರಶ್ನೆ ಮಾಡಿದಳು.

ಆ ಯುವತಿಯ ಪ್ರಶ್ನೆಕ್ಕೆ ಮಲ್ಲೇಶಿಯು ಬೆರಗಾಗಿ ನಿಂತು " ನನ್ನ ಮನಸಿನಲ್ಲಿಯ ಮಾತು ನಿನಗೆ ತಿಳಿದದ್ದು ಹೇಗೆ ? ಮದುವೆಯಾಗುವದು ನನ್ನ ಮನಸಿನಲ್ಲಿದೆ ಸರಿ. ಅದಕ್ಕಾಗಿ, ಇರಸಂಗಯ್ಯನವರ ಗೊತ್ತಿನಲ್ಲಿ ಎಲ್ಲಿ ಯಾದರೂ ಒಂದು ಹೆಣ್ಣು ಇದೆಯೋ ಎಂದು ಕೇಳಲು ನಾನು ಬಂದಿದ್ದೇನೆ. ನೀನು ಯಾರು, ಹೊಸಬಳಾಗಿ ತೋರುವಿ ? " ಎಂದು ಕೇಳಿದನು.

" ಇಲ್ಲಿಯೇ ನೆರೆಹಳ್ಳಿಯಾದ ಮಂಗನೂರಿನವರು ನಾವು. ನನ ಗೊಂದು ಚಿಂತಾಕವು ಬೇಕಾಗಿರುವದರಿಂದ ನಮ್ಮ ತಂದೆಯು ಇರಸಂಗಯ್ಯ ನವರನ್ನು ಕರಕೊಂಡು ಪೇಟೆಗೆ ಹೋಗಿದ್ದಾನೆ. ನಿಮಗೆ ಹೆಣ್ಣು ಎಂಥದಿರ ಬೇಕು? ಕಪ್ಪು ಬಣ್ಣದವಳೂ ಒಂಟಿಗಣ್ಣಿನವಳೂ ಇದ್ದರೆ ಸಾಗುವದೇನು ?"

" ದೊರೆಗಳ ಮನೆಯಲ್ಲಿರುವವನು ನಾನು. ಧನಿಯರು ಅಪರೂಪ ವಾದ ಹೆಣ್ಣು ನೋಡಿಕೊಂಡು ಬಾರೆಂದು ಹೇಳಿದ್ದಾರೆ. ನಿನ್ನಂಥ ಹುಡುಗೆ ಯಿದ್ದರೆ ಬಲು ಸೊಗಸಾದೀತು ! ನಿನ್ನ ಮದುವೆಯಾಗಿರುವದೇನು? ಯಾವ ಬಗೆ ನಿಮ್ಮದು ? "

" ನಾವು ನರವಲ ರಡ್ಡಿಗಳು. ನಮ್ಮಪ್ಪನು ಇನ್ನೂ ನನ್ನ ಮದುವೆ ಯನ್ನು ಮಾಡಿಲ್ಲ. "

" ಹಾಗಾದರೆ ಕೂಡಿತಲ್ಲ ! ನಾನೂ ನರವಲ ರಡ್ಡಿಯು. ನಾನೇ ನಿನಗೊಂದು ಒಳ್ಳೇ ಚಿಂತಾಕನ್ನು ಕೊಡಿಸುವೆನು. ಎರಡು ತೋಳಬಂದಿ ಗಳನ್ನು ಕೊಡುವೆನು. ನನ್ನನ್ನು ಮದುವೆಯಾಗುವಿಯೇನು, ಹೇಳಿಬಿಡು" ಎಂದು ಮಲ್ಲೇಶಿಯು ಆಸ್ಥೆಯಿಂದ ಕೇಳಿದನು.

" ಮದುವೆಯಾದ ಬಳಿಕ ನಾನು ಏಳೆಂದು ಹೇಳಿದಾಗ ನೀವು ಏಳ ಬೇಕು, ಕೂಡೆಂದಾಗ ಕೂಡಬೇಕು. ಈ ಮಾತಿಗೆ ನೀವು ಒಪ್ಪುವಿರೊ ? " ಎಂದು ಆ ತರುಣಿಯು ವಿನೋದಗೈದು ಕೇಳಿದಳು.

" ಹೆಂಡತಿಯು ಬೇಕಾದ ಬಳಿಕ ಅವಳು ಹೇಳಿದಂತೆ ನಡಕೊಳ್ಳಲೇ ಬೇಕು. "

" ಹಾಗಾದರೆ ನಾಳೆ ಬೆಳಗಿನಲ್ಲಿ ನೀವು ಇಲ್ಲಿಗೆ ಬಂದು ನಮ್ಮ ತಂದೆಯವರನ್ನು ಕೇಳಿರಿ. ನನ್ನ ಕೈಯಲ್ಲಿ ಏನಿದೆ ? " ಎಂದು ಆ ವಿನೋದಗಾರ್ತಿಯು ಮಂದಸ್ಮಿತೆಯಾಗಿ ನುಡಿದಳು.

" ಮಾತು ತಿರುಗಿಬಿದ್ದಿತಲ್ಲ ! ನಿಮ್ಮ ತಂದೆಯು ಒಪ್ಪದಿದ್ದರೆ ಮುಂದೆ ಗತಿಯೇನು ? " ಎಂದು ಮಲ್ಲೇಶಿಯು ಅಧೀರನಾಗಿ ನುಡಿದನು.

" ಅದಕ್ಕೆ ನಾನೇನು ಮಾಡಲಿ ? "

" ಆಗಲಿ. ನಾನು ಬೆಳಗಿನಲ್ಲಿ ಇಲ್ಲಿಗೆ ಬರುವೆನು " ಎಂದು ಹೇಳಿ ಮಲ್ಲೇಶಿಯು ಹೊರಟೆದ್ದು ನಡೆದನು.

ಅಲ್ಲಿಂದಲವನು ಮತ್ತೊಂದು ಓಣಿಯನ್ನು ಹಿಡಿದು "ಬಾಳುಗೋಪಾಳ ಕವಿತೀ, ನಾಡೊಳಗಾಗೆತಿ ಪ್ರಖ್ಯಾತೀ ! ಬಡಿತೊ ನನಗ ಭ್ರಾಂತೀ, ಮನದೊಳಗಿಲ್ಲ ಅಗದಿ ಶಾಂತೀ ! " ಎಂದು ಲಾವಣೀಪದವನ್ನು ಹಾಡುತ್ತ ನಡೆದಿದ್ದನು. ಅಷ್ಟರಲ್ಲಿ ಸೊಕ್ಕಿನದೊಂದು ದೊಡ್ಡ ಹೋರಿಯು ಒಳ್ಳೇ ಭರದಿಂದ ಓಡುತ್ತ ಮಲ್ಲೇಶಿಯೆದುರಿನಲ್ಲಿ ಬರುತ್ತಿತ್ತು. ಅಷ್ಟರಲ್ಲಿ " ಮಲ್ಲಪ್ಪ ಮಲ್ಲಪ್ಪ, ಆ ಹೋರಿಯನ್ನು ತಿರುವು ನನ್ನ ಮಗನೆ " ಎಂದು ಒಬ್ಬ ಮುದುಕಿಯು ಅಂಗಲಾಚಿ ಹೇಳಿಕೊಂಡಳು. ಸಮರ್ಥನಾದ ಮಲ್ಲೇಶಿಯು ಆ ಹೋರಿಯನ್ನು ತಡೆದು ನಿಲ್ಲಿಸಿ ಅದರ ಕೊರಳಲ್ಲಿಯ ದೃಷ್ಟಿಕಣ್ಣಿಯನ್ನು ಹಿಡುಕೊಂಡು ನಿಂತನು.

" ಒಳಿತು ಮಾಡಿದಿ ಮಗನೆ. ಹೋರಿಯನ್ನು ಹಿಡಿದು ತಂದು ಗೋದಲೆಯಲ್ಲಿ ಬಿಗಿ. " ಎಂದು ಆ ಮುದಕಿಯು ಹೇಳಿದ ಮೇರೆಗೆ ಮಲ್ಲೇಶಿಯು ಅದನ್ನು ಅವಳ ಮನೆಗೆ ತೆಗೆದುಕೊಂಡು ಹೋಗಿ ಕಟ್ಟಿ ಪಡಸಾಲೆಯ ಪಾವಟಿಗೆಯ ಮೇಲೆ ಕುಳಿತು ಎಲೆ ಅಡಿಕೆ ತಂಬಾಕಗಳನ್ನು ಹಾಕಿಕೊಳ್ಳಲಾರಂಭಿಸಿದನು.

" ಮಲ್ಲೇಶಿ, ನಿನೀಗ ದೊರೆಗಳ ಮನೆಯಲ್ಲಿ ಟಾಂಗೇ ಹೊಡೆಯಲಿಕ್ಕೆ ನಿಂತಿರುವಿಯಂತೆ, ಅಹುದೇನು ? " ಎಂದು ಆ ಮುದುಕಿಯು ಕೇಳಿದಳು.

" ಅಹುದು ಸಂಗವ್ವತ್ತೀ. ಆದರೆ ಆ ಕೆಲಸವನ್ನು ಹಿಡಿಯಬೇಕಾ

ದರೆ ಮೊದಲು ನಾನು ಮದುವೆಯಾಗಲೇಬೇಕೆಂದು ದೊರೆಗಳು ಹೇಳಿದ್ದಾರೆ. ”

“ ಹಾಗೇಕಂತೆ ? ” ಎಂದು ಸಂಗವ್ವನು ಕೇಳಿದಳು.

“ ದೊರೆಸಾನಿಯವರ ಕೈಕೆಳಗೆ ಒಳ್ಳೆಯದೊಂದು ಹೆಣ್ಣಾಳು ಬೇಕಾಗಿದೆಯಂತೆ. ನನಗೆ ತಿಂಗಳಿಾ ನಾಲ್ಕು ವರಾಹ ಸಂಬಳ. ಗಂಡಹೆಂಡರು ಕೂಡಿಯೇ ಅರಮನೆಯಲ್ಲಿ ಊಟ ಮಾಡಿ ಅಲ್ಲಿಯೇ ಇರಬೇಕು. ಅತ್ತೀ, ನಿನ್ನ ಗೊತ್ತಿನಲ್ಲಿ ಒಳ್ಳೇ ಹೆಣ್ಣು ಇರುವದೇನು ? ”

“ ಹೆಣ್ಣಿಗೇನು ತುಟ್ಟಿ, ಮಲ್ಲಣ್ಣಾ ? ನನ್ನ ಮನೆಯಲ್ಲಿ ಒಂದು ಹೆಣ್ಣು ಬೆಳೆದು ಕೂತಿದೆ. ನಮ್ಮ ತಂಗಿಯ ಮಗಳು ನೀಲಗಂಗೆಗೆ ಈಗ ಹದಿನೆಂಟು ವರ್ಷ. ” ಎಂದು ಸಂಗವ್ವನು ಅನುಸಂಧಾನಪೂರ್ವಕವಾಗಿ ನುಡಿದಳು

“ ಹದಿನೆಂಟು ವರ್ಷಗಳಾದರೆ ಏನಾಯಿತು ? ಕಂಡಕಂಡವರನ್ನು ಮದುವೆಯಾಗೆನ್ನುವಿಯೇನು ದೊಡ್ಡಮ್ಮಾ ? ” ಎಂದು ಉದ್ದಾಮಳಾದ ನೀಲಗಂಗೆಯು ನಡುಮನೆಯಿಂದ ಹೊರಗೆ ಬಂದು ಕೇಳಿದಳು.

“ ಸುಮ್ಮನಿರು ನೀಲಿ. ಇಂಥ ಮಾತು ಮಾತಾಡಿಯೇ ನೀನು ಮನೆ-ಮೂಳಳಾಗಿ ಕೂತಿರುವಿ. ನಮ್ಮ ಮಲ್ಲೇಶಿಯಂಥ ಗಂಡನು ಸಿಕ್ಕಬೇಕಾದರೆ ದೇವರಲ್ಲಿ ಪಡೆದು ಬರಬೇಕು ! ” ಎಂದು ನೀಲಗಂಗೆಯ ದೊಡ್ಡಮ್ಮನು ಸಿಟ್ಟುಮಾಡಿ ನುಡಿದಳು.

“ಓ, ಗಂಡನೇ ! ಹೀಗೆ ತಂಬಾಕ ತಿಂದು ಪಿಚಿಪಿಚಿಯಾಗಿ ಉಗುಳುವ ಗಂಡನನ್ನು ಯಾರು ಮಾಡಿಕೊಂಡಾರು ? ”

“ ತಂಬಾಕು ತಿಂದರೆ ದಿನಾಲು ಮೂರು ಸಾರೆ ಹಲ್ಲು ತಿಕ್ಕಿಕೊಳ್ಳುತ್ತೇನೆ.” ಎಂದು ಮಲ್ಲೇಶಿಯು ತಂಬಾಕವನ್ನು ಗುಳಿ ಕಿರಿಮೀಸೆಯನ್ನು ಒರಿಸಿಕೊಂಡು ನೀಲಗಂಗೆಯ ಮುಖವನ್ನು ಸ್ಪರ್ಧೆಯಿಂದ ನೋಡುತ್ತ ನುಡಿದನು.

“ ನೀಲಾ, ಇವನು ತಂಬಾಕವನ್ನು ಬಿಟ್ಟಮೇಲಾದರೂ ಇವನನ್ನು ಮದುವೆಯಾಗುವಿಯಾ ? ” ಎಂದು ಸಂಗವ್ವನು ಮಧ್ಯಸ್ಥಳಾಗಿ ಕೇಳಿದಳು.

“ ಬಿಟ್ಟುತೋರಿಸಲಿ, ಆ ಮೇಲೆ ಮುಂದಿನ ಮಾತು. ” ಎಂದು ನಗದವಳಾದ ನೀಲೆಯು ಮೆಲ್ಲನೆ ನಕ್ಕು ನುಡಿದಳು.

“ ಬಿಟ್ಟಾನು; ಯಾವ ದೊಡ್ಡ ಮಾತು ? ” ಎಂಬ ಆಶ್ವಾಸನವನ್ನು ನೀಲಗಂಗೆಗಿತ್ತು ಸಂಗವ್ವನು ಮಲ್ಲೇಶಿಯನ್ನು ಕುರಿತು “ಮಲ್ಲೇಶಾ, ನಿನ್ನ ಕೆಲಸವಾಯಿತು ಹೋಗು. ಹುಡಿಗಿಯು ನಗುತ್ತಾಳೆ ಕಾಣದೆ? ಈಗ ನಮ್ಮ ಲೆಂಕಪ್ಪನು ಹೊಲಕ್ಕೆ ಹೋಗಿದ್ದಾನೆ. ನಾಳೆ ಮಾತುಕತೆಯಾಡೋಣಂತೆ, ” ಎಂದು ಹೇಳಿದಳು.

ಮಲ್ಲೇಶಿಯು ಅಲ್ಲಿಂದೆದ್ದು ಹೊರಗೆ ಬಂದು “ ಹುಡಿಗಿಯು ಬಲು ಬಾಯಿಬಡಿಕೆಯಾಗಿ ತೋರುತ್ತಾಳೆ. ಈಕೆಯ ದೆಸೆಯಿಂದ ನಾನು ತಂಬಾಕ ತಿನ್ನುವದನ್ನು ಬಿಡಬೇಕೆ ? ಆದರೂ ಇವಳು ಬಲು ಚೆಲುವೆ. ಆಳು ದುಂಡ ಗಾಗಿದ್ದು ಮೈಬಣ್ಣ ಕೆಂಪಾಗಿದೆ. ಅರಮನೆಯಲ್ಲಿ ಇರಲು ಒಪ್ಪುತ್ತಾಳೆ. ಎಲ್ಲಿಗೆ ಬರುತ್ತದೋ ನೋಡೋಣ, ” ಎಂದು ತನ್ನೊಳಗೆ ತಾನೇ ಮಾತಾ ಡುತ್ತ ನಡೆದನು. ಸಂಗವ್ವನ ಮನೆಯಲ್ಲಿರುವಾಗಲೇ ಮಲ್ಲೇಶಿಗೆ ನೀರಡಿಕೆ ಯಾದಂತಾಗಿತ್ತು. ಆದರೆ ಆ ಪ್ರಸಂಗದಲ್ಲಿ ನೀರು ಬೇಡುವ ಅವಕಾಶವೇ ಅವನಿಗಿದ್ದಿಲ್ಲ. ಮುಂದೆ ಹನುಮಂತದೇವರ ಗುಡಿಯ ಓಣಿಯಲ್ಲಿರುವ ಹೊಕ್ಕುತುಂಬುವ ಬಾವಿಯನ್ನು ಕಂಡು ನೀರಡಿಕೆಯನ್ನಾರಿಸಿಕೊಳ್ಳುವ ದಕ್ಕಾಗಿ ಆ ಬಾವಿಯಲ್ಲಿಳಿದು ನೀರು ಕುಡಿದನು. ನೀರು ಕುಡಿದು ಮೇಲಕ್ಕೆ ಬರುವಷ್ಟರಲ್ಲಿ ಒಬ್ಬ ತರುಣಿಯು “ ಮಲ್ಲೇಶಿ, ಈ ಕೊಡವನ್ನು ಹೊರಿಸಿ ಹೋಗಬಾರದೆ ? ” ಎಂದು ಕೇಳಿಕೊಂಡಳು. ಆ ತರುಣಿಯ ಮಾತನ್ನು ಕೇಳಿ ಮಧ್ಯಮವಯಸ್ಕಳಾಗಿದ್ದ ಚಾರುವಾಕೆಯಾದ ವಿಧವೆಯು ನಕ್ಕು:

“ ಯಾಕೆ ಅಂಬೂ, ನಾವಿಷ್ಟು ಜನ ಹೆಣ್ಣುಮಕ್ಕಳಿರಲಿಕ್ಕೆಯೂ ಮಲ್ಲೇಶಿಯ ಕೈಯಿಂದಲೇ ಕೊಡ ಹೊರಿಸಿಕೊಳ್ಳುವ ಉಬ್ಬೇಕೆ ? ಕಬ್ಬಿನಂಥ ಹುಡುಗನನ್ನು ಕಂಡು ಅವನ ಮೇಲೆ ನಿನ್ನ ಕಣ್ಣು ಹೋಯಿತಲ್ಲೇ? ಮದುವೆ ಯಾಗುವೆನೆಂದು ಹೇಳಿದರೆ ಮಾತ್ರ ಮಲ್ಲೇಶಿಯು ಕೊಡ ಹೊರಿಸುವನು. ಸುಮ್ಮಸುಮ್ಮನೆ ಕೊಡ ಹೊರಿಸೆಂದರೆ ಯಾರಿಗೆ ಯಾರು ಹೊರಿಸುತ್ತಾರೆ ? ” ಎಂದು ನುಡಿದಳು.

ಮಲ್ಲೇಶಿಗೆ ಆ ವಿಧವೆಯಾಡಿದ ಮಾತಿನ ಭಾವವು ತಿಳಿಯಲಿಲ್ಲ. ಅಂಬೆಯು ಅವಿವಾಹಿತೆಯಾದ ಕನ್ಯೆಯೆಂಬದನ್ನು ಮಾತ್ರ ಅವನು ಊಹಿಸಿ ಕೊಂಡನು. ಆದರೆ ಮೇಲ್ಕಂಡ ಮಾತಿನ ಬಾಣವು ಅಂಬೆಯ ಎದೆಯಲ್ಲಿ

ಒಳಿತಾಗಿ ನಟ್ಟಿತು. ನಾಚಿಕೆಗಾಗಿ ಅವಳ ಮುಖವು ಬಹು ಚಮತ್ಕಾರವಾಗಿ ಕಂಡಿತು. ಮಲ್ಲೇಶಿಯು ಕೊಡ ಹೊರಿಸಿದ್ದೂ ಅವಳಿಗೆ ತಿಳಿಯಲಿಲ್ಲ. ತಾನು ಹೊತ್ತುಕೊಂಡದ್ದೂ ತಿಳಿಯಲಿಲ್ಲ. ಸುಮ್ಮನೆ ಕೊಡವನ್ನು ಹೊತ್ತುಕೊಂಡು ನಿಂತುಬಿಟ್ಟಳು.

"ಆದದ್ದಾಯಿತು ಮಲ್ಲೇಶಿ, ನನ್ನ ಕೊಡವನ್ನಷ್ಟು ಹೊರಿಸಿಬಿಡು" ಎಂದು ಆ ವಿಧವೆಯು ಕೇಳಿಕೊಂಡಳು. ಅವಳ ಮಾತನ್ನು ಕೇಳಿದಾಕ್ಷಣವೇ ಅಂಬೆಗೆ ಪ್ರಜ್ಞೆ ಬಂದಿತು. ಅವಳ ವಿನೋದವೃತ್ತಿಯಾದರೂ ಜಾಗ್ರತಿಯನ್ನು ಹೊಂದಿತು.

"ಭಾಯವ್ವಕ್ಕಾ, ಸುಮ್ಮಸುಮ್ಮನೆ ಯಾರಿಗೆ ಯಾರು ಕೊಡವನ್ನು ಹೊರಿಸುತ್ತಾರೆ?" ಎಂದು ಆ ಚತುರೆಯಾದ ಕನ್ಯೆಯು ಆ ವಿಧವೆಯ ಮೇಲೆ ವಾಗ್ಬಾಣವನ್ನು ಬಿಟ್ಟು ವಿಜಯಶಾಲಿನಿಯು ದಂಭದಿಂದ ನಕ್ಕಳು.

"ಗೈಯಾಳೀ! ಹಳೆ ಗೈಯಾಳಿ! ಇಂಥ ಮಾತು ಆಡುವಿಯಾ? ಅರಮುದುಕೆಯೂ ವಿಧವೆಯೂ ಆದ ನಾನು ನಿನಗಾಗಿ ಇನ್ನು ಮೇಲೆ ಮೊದಲಗಿತ್ತಿಯಾಗಬೇಡವೆ? ನಿನ್ನನ್ನು ಮಾತ್ರ ಇದೇ ಮಲ್ಲೇಶಿಯ ಕೊರಳಿಗೆ ಕಟ್ಟದಿದ್ದರೆ ನನ್ನ ಹೆಸರು ಭಾಯವ್ವನಲ್ಲ!"

ಈ ವಿನೋದಮಯವಾದ ವ್ಯಾಜ್ಯದ ಅರ್ಥವು ಮಲ್ಲೇಶಿಗೆ ಚನ್ನಾಗಿ ತಿಳಿಯದಿದ್ದರೂ ಭಾಯವ್ವನು ಅಂಬೆಯನ್ನು ತನಗೆ ನಿಶ್ಚಯವಾಗಿ ಕೊಡಿಸುವಳೆಂದು ಆ ಮೂಢನು ದೃಢವಾಗಿ ನಂಬಿ ಬಹುಪರಿಯಾಗಿ ಉಬ್ಬಿದನು. ಆ ಹೆಂಗಸರಿಬ್ಬರೂ ಕೊಡಗಳನ್ನು ಹೊತ್ತುಕೊಂಡು ತಮ್ಮ ತಮ್ಮ ಮನೆಗೆ ನಡೆದ ಬಳಿಕ ಮಲ್ಲೇಶಿಯು ನೆಟ್ಟಗೆ ಭಾಯವ್ವನ ಮನೆಗೆ ಬಂದುಬಿಟ್ಟನು.

"ಯಾಕೆ ಬಂದಿ ಮಲ್ಲೇಶಿ? ಮದುವೆಯ ಅವಸರವು ಬಹಳಾಗಿದೆ ಏನು?" ಎಂದು ವಿನೋದಿನಿಯಾದ ಆ ವಿಧವೆಯು ನಗೆಯಾಡಿ ಕೇಳಿದಳು.

"ಅಹುದು ಭಾಯವ್ವಾ. ಬೇಗನೆ ಮದುವೆಯಾಗೆಂದು ದೊರೆಗಳು ಅಪ್ಪಣೆ ಮಾಡಿದ್ದಾರೆ. ದೊರೆಸಾನಿಯವರ ಕೈಕೆಳಗೆ ಒಂದು ಹೆಣ್ಣಾಳು ಬೇಕಾಗಿದೆಯಂತೆ. ಇಲ್ಲವಾದರೆ ನನಗೆಲ್ಲಿ ಮದುವೆಯ ಅವಸರ?"

"ಹೊಲವಿಲ್ಲ, ಮನೆಯಿಲ್ಲ, ನಿನ್ನ ಮದುವೆ ಹೇಗಾಗಬೇಕು ಮಲ್ಲೇಶಿ?"

"ಹೀಗೇನು ! ಆ ಹುಡುಗಿಯನ್ನು ನನಗೆ ಗಂಟುಹಾಕುವೆನೆಂದು ನೀನು ಬಾವಿಯಲ್ಲಿದ್ದಾಗ ಭಾಷೆಯನ್ನು ಕೊಡಲಿಲ್ಲವೆ? ಈಗೇಕೆ ಹೀಗೆ ಮಾತಾಡುವಿ ಚಿಗವ್ವಾ?" ಎಂದು ಮಲ್ಲೇಶಿಯು ಸಾಶಂಕನಾಗಿ ಕೇಳಿದನು.

"ಅಹುದಲ್ಲ ? ನಾನು ಮರತೇಬಿಟ್ಟಿನು !" ಎಂದು ಭಾಯವ್ವನು ಗಹಗಹಿಸಿ ನಕ್ಕಳು.

"ಇನ್ನು, ಮನೆಯೆಂದರೆ ನಾವು ಗಂಡಹೆಂಡರು ಅರಮನೆಯಲ್ಲಿಯೇ ಇರತಕ್ಕವರು. ಇನ್ನೊಂದು ನಾಲ್ಕುವರ್ಷಕ್ಕೆ ನಮ್ಮ ಧನಿಯರು ನನಗೊಂದು ಹೊಲವನ್ನಾದರೂ ಕೊಡುವೆವೆಂದು ಹೇಳಿದ್ದಾರೆ. ಸದ್ಯಕ್ಕೆ ನನಗೆ ತಿಂಗಳಾ ನಾಲ್ಕು ವರಾಹ ಸಂಬಳ. ಆಮೇಲೆ ಮದುವೆಯ ವೆಚ್ಚವು ನಮ್ಮ ಯಜಮಾನರದು."

ಅಷ್ಟರಲ್ಲಿ ಅಂಬೆಯು ಬರಿದಾದ ಕೊಡವನ್ನು ಬಗಲಲ್ಲಿಟ್ಟುಕೊಂಡು ಬಂದು ಇನ್ನೊಂದು ಕೊಡಕ್ಕೆ ಬಾವಿಗೆ ಬರುವಿಯೇನೆಂದು ಭಾಯವ್ವನನ್ನು ಕೇಳಿದಳು. ಅಂಬೆಯನ್ನು ಕಂಡು ಭಾಯವ್ವನು ಕಣ್ಣು ಚಿವುಟಿ "ಬಾರಲೆ, ಮದಿಮಗಳೆ! ಇಲ್ಲಿ ನೋಡು, ನಿನ್ನ ಗಂಡನು ಮದುವೆಗೆ ಆತುರನಾಗಿ ಬಂದು ಕುಳಿತಿದ್ದಾನೆ. ಸಂಜೆಯೊಳಗಾಗಿ 'ಸಾಮಧೂಮ'ವಾಗಿಹೋಗಲಿ!"

"ಸುಮ್ಮನೆ ಬರಬಾರದೆ ಭಾಯವ್ವಾ. ಮುದಿಹುಚ್ಚು ತಲೆಗೇರಿತೆಂದು ಹೀಗೆ ಮಾತಾಡುವಿಯೇನು ?" ಎಂದು ಅಂಬೆಯು ಅಸಹನೆಯಾಗಿ ನುಡಿದು ತಲೆಬಾಗಿಲದ ಹೊರಗೆ ಬಂದು ನಿಂತಳು. ಭಾಯವ್ವನಾದರೂ ತನ್ನ ಕೊಡವನ್ನು ತೆಗೆದುಕೊಂಡು ಬಾವಿಗೆ ಹೋಗಲು ಸಿದ್ಧಳಾದಳು. ಮಲ್ಲೇಶಿಯು ಅರಮನೆಯ ಹಾದಿಯನ್ನು ಹಿಡಿದನು.

"ಹುಡಿಗಿಯು ಮನಸ್ಸಿನಲ್ಲಿ ಯಾಕೋ ಸಂಕೋಚಗೊಂಡಿದ್ದಾಳೆ; ಆದರೇನಾಯಿತು ?-ಒಲ್ಲೆನೆಂಬುವ ಮಾತು ಅವಳ ಬಾಯಿಯಿಂದ ಬರಲಿಲ್ಲ. ಸಾಕಾಗದೇನು ? ಆಕೆ ಒಲ್ಲೆನೆನ್ನಲಿ, ಬಿಡಲಿ, ಭಾಯವ್ವನಂತೂ ಅವಳನ್ನು ನನಗೆ ಕೊಡಿಸುವದು ಗಟ್ಟಿಮಾತು. ಹುಡಿಗಿ ಮಾತ್ರ ಅಪರೂಪದ ಹುಡಿಗಿ!" ಎಂದು ವಿಚಾರಗೈಯುತ್ತ ಮಲ್ಲೇಶಿಯು ಅರಮನೆಗೆ ಬಂದನು.

ಶರಣೆಂದು ಪ್ರಣಾಮಮಾಡಿ ನಿಂತ ಮಲ್ಲೇಶಿಯ ವೇಷವನ್ನು ಕಂಡು ಹೇಮರಡ್ಡಿ ಪ್ರಭುಗಳು ಮುಗುಳುನಗೆ ನಕ್ಕು "ಉಡಿಗೆ ತೊಡಿಗೆಗಳ

ಸೊಬಗು ಬಹಳವಾಗಿದೆಯೋ ಮಲ್ಲೇಶಿ ! ” ಎಂದು ಕೇಳಿದರು.

“ ಹೆಣ್ಣು ನೋಡಲಿಕ್ಕೆ ಹೋಗಿದ್ದೆನಲ್ಲವೆ ಧನಿಯರೆ ? ” ಎಂದು ಮಲ್ಲೇಶಿಯು ಬೆಸಗೊಂಡನು.

“ ಎಲ್ಲಿಯಾದರೂ ಗೊತ್ತುಮಾಡಿಕೊಂಡು ಬಂದಿಯಾ ? ”

“ ಮೂರು ತಾವಿನಲ್ಲಿ ಮೂರು ಹೆಣ್ಣು ನೋಡಿಕೊಂಡು ಬಂದಿದ್ದೇನೆ ದೇವರೂ. ಹೆಣ್ಣಿನ ತಾಯಿತಂದೆಗಳನ್ನಷ್ಟೇ ಕೇಳಿದರೆ ಹೆಣ್ಣಿನ ಸರ ಪೋಣಿಸ ಬಹುದು. ಆದರೆ ಆ ಹೆಣ್ಣುಗಳನ್ನು ತಡೆಯುವದೂ ಚಿಣಗೀ ಹಾವುಗಳನ್ನು ತಡೆಯುವದೂ ಒಂದೇ. ಕೈಗೆ ಸಿಕ್ಕದೆ ಟಣಟಣನೆ ಜಿಗಿದಾಡುತ್ತವೆ. ”

“ ಜಿಗಿದಾಡಲಿ. ಎಲ್ಲಿಯವರೆಗೆ ಜಿಗಿದಾಡಬಲ್ಲರವರು ? ಬಲ್ಲಿದನಾದ ಗಂಡನಿದ್ದರೆ ಹೆಂಡತಿಯು ಮೆತ್ತಗೆ ಹಣ್ಣಾಗಿರುವಳು. ”

“ ಹೇಳಬೇಡಿರಿ ಧನಿಯರೆ. ತಂದೆಗಳಾದ ತಾವು ಊರಿಗೆ ಊರನ್ನೇ ಆಳುವಿರಿ; ಆದರೆ ಅರಮನೆಯಲ್ಲಿ ನೀವೇ ಹೇಗೆ ಹುದುಗಿಕೊಂಡಿರುವಿರಿ ನೋಡಿರಿ. ”

ಹೇಮರಡ್ಡಿ ಪ್ರಭುಗಳಿಗೆ ಮಲ್ಲೇಶಿಯ ಮಾತು ಕೇಳಿ ನಗೆ ಬಂದಿತು. ಆದರೂ ಅವರು ಕೋಪದ ಆವಿರ್ಭಾವವನ್ನು ಮಾಡಿ “ ಹುಚ್ಚುಸೂಳೆಯ ಮಗನೆ ! ” ಎಂದು ಉದ್ಗಾರ ತೆಗೆದರು.

“ ನಾನೇನು ಸುಳ್ಳು ಹೇಳಿರುವೆನೆ ? ನನ್ನ ಮೇಲೇಕೆ ಕೋಪ ದೇವರೂ ? ” ಎಂದು ಮಲ್ಲೇಶಿಯು ಬೊಗಸೆಯೊಡ್ಡಿಕೊಂಡು ನಿಂತು ಕೇಳಿದನು.

ದೊರೆಗಳು ನಕ್ಕು “ನಿನ್ನಂತೆಯೇ ಆಗಲಿ, ಮಲ್ಲೇಶೀ. ನಿನಗೆ ಹೆಂಡತಿ ಯಿಂದ ಪೀಡೆಯಾಗುವದೆಂದು ಕಂಡರೆ ನೀನು ಮದುವೆಯ ಗೋಜಿಗೆ ಹೋಗಲೇಬೇಡ. ” ಎಂದು ಹೇಳಿದರು.

“ಬೇಡವೆಂದರೆ ಅರಮನೆಯಲ್ಲಿ ಅವ್ವನವರ ಕೈಕೆಳಗೊಂದು ಹೆಣ್ಣಾಳು ಬೇಕಾಗಿಲ್ಲವೆ ? ” ಎಂದು ಮಲ್ಲೇಶಿಯು ಚಕಿತನಾಗಿ ಕೇಳಿದನು.

“ ನಮ್ಮಲ್ಲಿ ಅಡಿಗೆ ಮಾಡುವ ಭೀಮವ್ವನ ಮಗಳು ಇಂದೆಯೇ ಬಂದಿ ರುವಳು. ಅವಳನ್ನೇ ಅರಮನೆಯಲ್ಲಿ ಇಟ್ಟುಕೊಳ್ಳುವ ವ್ಯವಸ್ಥೆ ಮಾಡಿ ದ್ದಾರೆ. ”

" ಹಾಗಾದರೆ ನಮ್ಮ ಯತ್ನವೆಲ್ಲ ಹೊಳೆಯಲ್ಲಿ ಹುಳಿ ತೊಳೆದಂತಾಯಿತಲ್ಲ. " ಎಂದು ಮಲ್ಲೇಶಿಯು ಭಗ್ನೋತ್ಸಾಹನಾಗಿ ನುಡಿದನು.

" ಹಾಗೆ ಆಸೆಗುಂದಬೇಡ ಮಲ್ಲೇಶೀ, ನಿನ್ನ ಮನಸ್ಸಿನಲ್ಲಿ ಲಗ್ನವಾಗುವದಿದ್ದರೆ ಆಗು. ಲಗ್ನದ ವೆಚ್ಚವೆಲ್ಲ ನಮ್ಮ ಮೈಮೇಲೆ " ಎಂದು ದೇಸಾಯರು ಕೃಪಾವಂತರಾಗಿ ಹೇಳಿದರು.

" ಲಗ್ನವು ನನಗಲ್ಲಿ ಅಡಗಾಣಿಸಿದೆ ದೇವರೂ? ನನ್ನ ಲಗ್ನದಿಂದ ದೊರೆಸಾನಿಯವರಿಗೆ ಹಿತವಾಗುವಂತಿದ್ದರೆಯೇ ನಾನು ಮಾಡಿಕೊಳ್ಳ ತಕ್ಕವನು. "

" ಸದ್ಯಕ್ಕೆ ನಿನ್ನ ಹೆಂಡತಿಯ ಕೆಲಸವು ಅರಮನೆಯಲ್ಲಿಲ್ಲ. ನಿನಗೆ ಇಷ್ಟವಿದ್ದಾಗ ನೀನು ಲಗ್ನವಾಗು. "

" ಅದೆಲ್ಲ ಆದೀತು ನನ್ನ ತಂದೆಯವರೆ. ಆದರೆ ಈಗ ನನಗೊಂದು ಮಾತಿನ ಬಗ್ಗೆ ಬಿರಿಬಂದಂತಾಗಿದೆ. "

" ಅದೇನು ಮಲ್ಲೇಶಿ ? "

" ಲಗ್ನ ಮಾಡಿಕೊಳ್ಳುವೆನೆಂದು ನಾನು ಮೂರುಮಂದಿ ಹುಡಿಗೆಯರಿಗೆ ವಚನಕೊಟ್ಟು ಬಂದಿದ್ದೇನೆ. ಅವರೆಲ್ಲರಿಗೆ ಇನ್ನೇನು ಹೇಳಲಿ ? " ಎಂದು ಮಲ್ಲೇಶಿಯು ಚಿಂತಾಕುಲನಾಗಿ ಕೇಳಿದನು.

" ಆ ಮೂವರು ಹೆಣ್ಣುಮಕ್ಕಳಲ್ಲಿ ನೀನೆಷ್ಟು ಜನರನ್ನು ಮದುವೆಯಾಗ ತಕ್ಕವನು ? ಒಬ್ಬಳನ್ನೊ ಇಬ್ಬರನ್ನೋ ? "

" ಒಬ್ಬಳನ್ನೇ " ಮಲ್ಲೇಶಿಯು ಏನೂ ಸಂಶಯವಿಲ್ಲದೆ ಉತ್ತರವನ್ನಿತ್ತನು.

" ಒಬ್ಬಳನ್ನೇ ಮದುವೆಯಾಗುವಿ. ಒಬ್ಬಳನ್ನೇ ಮದುವೆಯಾಗುವ ಪಕ್ಷದಲ್ಲಿ ಉಳಿದ ಸೌಭಾಗ್ಯಕಾಂಕ್ಷಿಣಿಯರಾದ ಇಬ್ಬರಿಗೆ ಏನು ಹೇಳುವಿ ? "

ಈ ಪ್ರಶ್ನವನ್ನು ಕೇಳುತ್ತಲೆ ಮಲ್ಲೇಶಿಗೆ ದಿಗಿಲುಬಡಿದಂತಾಯಿತು. ಮೂಢನಾದ ಆ ತರುಣನು ಯಜಮಾನರ ಮುಖವನ್ನು ಹುಳಹುಳನೆ ನೋಡುತ್ತೆ ನಿಂತನು. ಹೇಮರಡ್ಡಿ ಪ್ರಭುಗಳು ತಮ್ಮ ಹಸ್ತದಿಂದ ಪ್ರಶ್ನ ಸೂಚಕವಾದ ಹಾವಭಾವವನ್ನು ಮಾಡಿ " ಯಾಕೆ ಮಲ್ಲೇಶಿ, ನಾನು ಕೇಳಿದ ಪ್ರಶ್ನಕ್ಕೆ ಏನೆನ್ನುವಿ ? " ಎಂದು ಕೇಳಿದರು.

"ಏನೆಂದು ಹೇಳಲಿ ಪ್ರಭುಗಳೆ ? ಹುಚ್ಚು ಹಿಡಿಯುವ ಮಾತಿದು. ಆದರೂ ಒಬ್ಬಳನ್ನು ಲಗ್ನವಾಗಿದ್ದೇನೆ, ಉಪಾಯವಿಲ್ಲೆಂದು ಉಳಿದ ಇಬ್ಬರಿಗೆ ಹೇಳಬಹುದಷ್ಟೆ ?"

"ಅಷ್ಟರಿಂದಲೇ ಅವರಿಗೆ ಸಮಾಧಾನವಾಗಬಹುದೇನು ಮಲ್ಲೇಶಿ?"

ಮಲ್ಲೇಶಿಯು ತುಸು ಆಲೋಚಿಸಿ ಇಲ್ಲವೆಂದು ಹೇಳಿದನು.

"ಹಾಗಾದರೆ ಇಬ್ಬರಿಗೆ ಅಸಮಾಧಾನವಾಗುವಲ್ಲಿ ಮೂವರಿಗೂ ಅಸಮಾಧಾನವಾದರೆ ವಿಶೇಷವೇನೂ ಹೆಚ್ಚು ಕಡಿಮೆಯಾಗಲಿಕ್ಕಿಲ್ಲ. ಅದಿರಲಿ. ಆ ಮೂವರು ಕನ್ಯೆಯರಲ್ಲಿ ಯಾರಾರು ತಮ್ಮ ತಮ್ಮ ಒಪ್ಪಿಗೆಯನ್ನು ಹೇಗೆ ಹೇಗೆ ಕೊಟ್ಟಿರುವರು ಹೇಳು ನೋಡೋಣ."

ಮಲ್ಲೇಶಿಯು ತನ್ನ ಕನ್ಯಾನ್ವೇಷಣದ ವೃತ್ತಾಂತವನ್ನು ಯಥಾಪ್ರಕಾರವಾಗಿ ಹೇಳಿದನು. ಆ ಸಂಗತಿಯನ್ನು ಕೇಳಕೇಳುವಷ್ಟರಲ್ಲಿ ಹೇಮರಡ್ಡಿ ಪ್ರಭುಗಳು ವಿಪರೀತವಾಗಿ ನಕ್ಕು ನಕ್ಕು ತಮ್ಮ ಪಕ್ಕಡಿಗಳನ್ನು ನೋಯಿಸಿಕೊಂಡರು. ನಗೆ ನಿಂತು ಮಾತಾಡುವಷ್ಟು ಅವಸಾನವು ದೊರಕಿದ ಬಳಿಕ ದೊರೆಗಳಂದದ್ದು :

"ಹುಡುಗನೆ, ನಿನಗೆ ಹೆಂಗಸರ ಸ್ವಭಾವಗುಣಗಳು ಎಷ್ಟು ಮಾತ್ರವೂ ತಿಳಿದಿಲ್ಲ. ಆ ಮೂವರು ಸ್ತ್ರೀಯರಲ್ಲಿ ಒಬ್ಬಳಾದರೂ ನಿನ್ನನ್ನು ಮದುವೆಯಾಗಲಪೇಕ್ಷಿಸಲಿಲ್ಲ. ಆ ಗಾಡಿಕಾರತಿಯರ ವಿನೋದದ ಮಾತಿಗೆ ನೀನು ಮೋಸಹೋಗಿರುವಿ. ಬೇಕಾದರೆ ನಾಳೆ ನೀನು ಆ ಕನ್ಯೆಯರನ್ನು ಕಂಡು 'ನಾನು ನಿಮ್ಮನ್ನು ಮದುವೆಯಾಗುವದಿಲ್ಲ'ವೆಂದು ಹೇಳಿದರೆ ಅವರಿಗೆ ಹೆಚ್ಚಾದ ವಿನೋದವೇ ಆಗುವದಲ್ಲದೆ ತಿಲಮಾತ್ರವಾದರೂ ವಿಷಾದವೆನಿಸದು. ಬೇಕಾದರೆ ಪರೀಕ್ಷಿಸಿ ನೋಡು."

ತಲೆಯ ಮೇಲಿನ ದೊಡ್ಡದೊಂದು ಭಾರವೇ ಇಳಿದಂತಾಗಿ ಮಲ್ಲೇಶಿಯು ಸಮಾಧಾನದ ಉಸುರ್ಗರೆದು—

"ಪೀಡೆ ಕಡಿಯಿತು ದೇವರೂ, ಇಂದಿನ ರಾತ್ರಿ ಕಣ್ತುಂಬಾ ನಿದ್ದೆ ಮಾಡುವೆನು" ಎಂದು ಹೇಳಿದನು.

* * * *

ತನಗೂ ಕನ್ನೆಯರಿಗೂ ಗೋತ್ರ ಕೂಡುವದೇ ಇಲ್ಲವೆಂದು ಮಲ್ಲೇ

ಶಿಯು ನಿಶ್ಚಿತವಾಗಿ ತಿಳಿದು, ಲಗ್ನದ ಹಂಬಲವನ್ನು ಸರ್ವಥಾ ಬಿಟ್ಟು ನಿಶ್ಚಿಂತ ನಾಗಿದ್ದನು. ಶ್ರೀಮಂತರೂ ಕೃಪಾಳುಗಳೂ ಆಗಿದ್ದ ಯಜಮಾನರ ಮನೆ ಯಲ್ಲಿ ಮೂರು ಹೊತ್ತು ಸಮೀಚೀನವಾದ ಊಟವಾಗುತ್ತಿತ್ತು. ಮೇಲೆ ದುಡಿಕೆಯಾದರೂ ಅಷ್ಟಕ್ಕಷ್ಟೆಯೇ. ಆದ್ದರಿಂದ ದಾಂಪತ್ಯ ಸ್ಥಿತಿಗಿಂತಲೂ ಇದೇ ಒಳಿತೆಂದು ಅವನು ನಂಬಿದ್ದನು. ದಿನಾಲು ಧನಿಯರು ಸಾಯಂಕಾಲ ದಲ್ಲಿ ತಿರುಗಾಡಲಿಕ್ಕೆ ಹೊರಟರೆ ಎರಡು ಮೂರು ಗಳಿಗೆ ಟಾಂಗೆಯನ್ನು ಹೊಡಕೊಂಡು ಬಂದನೆಂದರೆ ಮಲ್ಲೇಶಿಯ ಕೆಲಸ ಮುಗಿಯಿತು. ವಾರ ಕ್ಕೊಂದೇರಡಾವರ್ತಿ ಹೇಮರಡ್ಡಿ ಪ್ರಭುಗಳು ಸಮೀಪದಲ್ಲಿಯೇ ಇರುವ ಜಿಲ್ಲೆಯ ಸ್ಥಾನವಾದ ಪಟ್ಟಣಕ್ಕೆ ಹೋಗಿ ಬಂದರೆ ಹೆಚ್ಚಿನ ಕೆಲಸವಾಯಿತು. ದೇಸಾಯರ ಊರಿನಲ್ಲಿರುವ ಹೊಲೆಯರು ಸರತಿಯ ಮೇಲೆ ಟಾಂಗೇದ ಕುದುರೆಗಳ ವ್ಯೆತಿಕ್ಕೆ ಹೋಗುವರು. ಮನೆಯ ಆಳುಮಗಳು ಕುದುರೆಗಳಿಗೆ ಬೇಕಾದಷ್ಟು ಕಡಲೆಗಳನ್ನು ಒನೆದುಕೊಟ್ಟು ಹೋಗುವಳು. ಕುದುರೆಗಳಿಗೆ ಆ ಧಾನ್ಯವನ್ನು ತಿನ್ನಿಸುವದು, ಹುಲ್ಲು ಹಾಕುವದು, ನೀರು ಕುಡಿಸುವದು ಮುಂತಾದ ಕೆಲಸಗಳನ್ನು ಮಾತ್ರ ಮಲ್ಲೇಶಿಯು ತಾನೇ ಮಾಡುತ್ತಿದ್ದನು.

ವಂಚನಾರಹಿತನೂ, ಸಮರ್ಥನೂ, ತರುಣನೂ ಆದ ಮಲ್ಲೇಶಿಗೆ ತನಗಿದ್ದಷ್ಟೆಯೇ ಅಲ್ಪ ಕೆಲಸದಿಂದ ಸಮಾಧಾನವಿದ್ದಿಲ್ಲ. ಅನಲಸನಾದ ಆ ಬಂಟನಿಗೆ ಕೆಲಸವಿಲ್ಲದೆ ಸುಮ್ಮನೆ ಬಿದ್ದುಕೊಂಡಿರುವದು ಸೇರುತ್ತಿದ್ದಿಲ್ಲ. ಗ್ರಾಮದ ಸಮಾಚಾರಗಳನ್ನರಿತುಕೊಳ್ಳುವದಕ್ಕಾಗಿ ದೇಸಾಯರು ಹೊರ ಹೊರಟಾಗ ಅವರ ಮುಂದೆ ಮುಂದೆ ಹೋಗತಕ್ಕವರಾದ ಓಲೆಕಾರರಿದ್ದಾಗ್ಗೆಯೂ ಮಲ್ಲೇಶಿಯು ತಾನೊಬ್ಬ ಅನುಚರನಾಗಿ ಅವರೊಡನೆ ನಡೆದನೇ. ದೊರೆಸಾನಿಯವರು ಮಲ್ಲೇಶಿಯನ್ನು ಕರೆದು ಒಂದು ಕೆಲಸವನ್ನು ಹೇಳಿದರೆ ಅದು ಅವನಿಗೊಂದು ಪ್ರಸಾದವೇ. ಅಡಿಗೆಯ ಭೀಮವ್ವನೊಂದು ಕೆಲಸ ವನ್ನು ಹೇಳಿದರೂ ಅವನಿಗೆ ಎಗ್ಗು ಇದ್ದಿಲ್ಲ. ದೊರೆಸಾನಿಯವರ ಅನುಚರ ಳಾಗಿ ಬಂದಿದ್ದ ಗಿರಿಬಾಯಿಯು, ಭೀಮವ್ವನ ಮಗಳು, ತನ್ನದೊಂದು ಕೆಲಸವನ್ನು ಹೇಳಿದರೂ ಅದನ್ನು ಮಲ್ಲೇಶಿಯು ಸಂತೋಷದಿಂದಲೇ ಮಾಡು ವನು. ಚಿಕ್ಕ ಬಾಲಕರಿಗೆ ಕ್ರಮಕ್ರಮವಾಗಿ ಜಗತ್ತಿನ ಪರಿಚಯವಾಗುವಂತೆ ಮಲ್ಲೇಶಿಗೆ ಲೋಕವ್ಯವಹಾರದ ರೀತಿಗಳು ಮೆಲ್ಲಮೆಲ್ಲನೆ ತಿಳಿಯಲಾರಂಭಿಸಿ

ದ್ದರೂ ತಾನು ಉತ್ಕ್ರಾಂತಿಯ ಮಾರ್ಗದಲ್ಲಿರುವೆನೆಂಬದು ಅವನಿಗೆ ಚನ್ನಾಗಿ ತಿಳಿದಿದ್ದಿಲ್ಲ. ಒಂದು ದುಡ್ಡಿಗೆ ಮೂರು ಪೂರ್ಣಾಂಕ ಮೂರು ನಾಲ್ಕನೆಯಂಶ ಬಾಳೇ ಹಣ್ಣಾದರೆ ಏಳು ಪೂರ್ಣಾಂಕ ಐದು ದಶಮಾಂಶ ದುಡ್ಡಿಗೆಷ್ಟು ಹಣ್ಣುಗಳೆಂದು ಶಾಲೆಯ ಮಾಸ್ತರರು ಕೇಳಿದರೆ ಮಲ್ಲೇಶಿಯಿಂದ ಹೇಳಲಿಕ್ಕಾಗದಿದ್ದರೂ, ದುಡ್ಡಿಗೆ ಹತ್ತು ಬಿಳಿಯೆಲೆ, ನೂರು ಬಿಳಿಯಲೆಗಳನ್ನು ತಾರೆಂದು ದೊರೆಸಾನಿಯವರು ಹೇಳಿದಾಗ ಅವನು ಆ ವ್ಯಾಪಾರವನ್ನು ಸಮಾಧಾನಕರವಾಗಿ ಮಾಡಿಕೊಂಡು ಬರುವನು. ರೂಪಾಯದಲ್ಲಿ ಏಳಾಣೆ ಹೋದರೆ ಉಳಿಯಿತೆಷ್ಟೆಂಬದನ್ನು ಅವನು ಕೆಲವೊಂದು ಟೂಕಿಯಿಂದ ತಪ್ಪದೆ ಹೇಳುವನು. ಹೇಳುವದೇನೆಂದರೆ, ದಿನದಿನಕ್ಕೆ ಮಲ್ಲೇಶಿಯ ದಡ್ಡತನವು ಕಡಿಮೆಯಾಗಿ ಅವನು ಇಚ್ಛಕನಾಗಿ ನಡಕೊಳ್ಳುವದರಿಂದ ಅವನ ಮೇಲೆ ಎಲ್ಲರ ಪ್ರೇಮವೂ ನೆಲಿಸಿತು.

ದೊರೆಸಾನಿಯವರು ಹೇಳಿದ ಪೇಟೆಯ ವ್ಯಾಪಾರಗಳ ಲೆಕ್ಕವನ್ನು ಒಪ್ಪಿಸಿಕೊಳ್ಳುವವಳು ಗಿರಿಬಾಯಿಯು. ಅದಕ್ಕಾಗಿ ತೊಂದರೆಯಾಗಬಾರದೆಂದು ಗಿರಿಬಾಯಿಯು ಮಲ್ಲೇಶಿಯನ್ನು ಕುಳ್ಳಿರಿಸಿಕೊಂಡು ಪೇಟೆಯಿಂದ ತರತಕ್ಕ ಪದಾರ್ಥಗಳೆಷ್ಟು, ಅವುಗಳ ಬೆಲೆಯೇನು ಮುಂತಾದ ಸಂಗತಿಗಳನ್ನು ಅವನಿಗೆ ಚನ್ನಾಗಿ ತಿಳಿಸಿ ಹೇಳಿ, ಕೊಟ್ಟ ರೂಪಾಯದಲ್ಲಿ ಮರಳಿ ಬರತಕ್ಕ ರೊಕ್ಕವೆಷ್ಟೆಂಬದನ್ನಾದರೂ ಹೇಳಿಕೊಡುತ್ತಿದ್ದಳು. ಮಲ್ಲೇಶಿಯ ವಿನಯ, ಶಿಕ್ಷಣಕ್ಕೊಳಗಾಗುವ ಅವನ ಮನೋವೃತ್ತಿ, ಅವನ ದಕ್ಷತೆ, ಅವನ ಶಾಂತವೃತ್ತಿಗಳನ್ನು ಕಂಡು ಗಿರಿಬಾಯಿಯು ಅವನ ದಡ್ಡತನದ ದೋಷವನ್ನು ಎಣಿಸದಾದಳು. ಹೀಗೆ ಮೂರುನಾಲ್ಕು ತಿಂಗಳುಗಳು ಸಂದುಹೋದ ಹಾಗೆ ಮಲ್ಲೇಶಿಯ ವ್ಯವಹಾರಚಾತುರ್ಯವು ವೃದ್ಧಿಯನ್ನು ಹೊಂದುತ್ತ ನಡೆಯಿತು.

ಒಂದು ದಿನ ದೊರೆಸಾನಿಯವರು ಮಲ್ಲೇಶಿಗೆ ಅಡಿಕೆ-ಎಲೆ, ಉತ್ತತ್ತಿ-ತೆಂಗಿನಕಾಯಿ, ಬಾಳೆಹಣ್ಣು, ಜೇನುತುಪ್ಪ, ಕಪ್ಪುರಗಳನ್ನು ತಾರೆಂದು ಆಜ್ಞಾಪಿಸಿದರು. ಆಗ ಗಿರಿಬಾಯಿಯು ಮಲ್ಲೇಶಿಯನ್ನು ಕಂಡು ತುಸು ನಕ್ಕು “ಮಲ್ಲೇಶಿ, ಪದಾರ್ಥಗಳು ಬಹಳಾದವು. ನಿನಗೆ ನೆನಪು ಉಳಿಯುವದು ಎಂಥ ಮಾತೋ. ನೀನು ಓದು ಕಲಿತಿದ್ದರೆ ಹೇಗೆ ಒಳಿತಾಗುತ್ತಿತ್ತು ನೋಡು.”

ಎಂದು ಮಾತಾಡಿದಳು.

"ಇದಕ್ಕೇಕಿಷ್ಟು ಚಿಂತೆ ಗಿರಿಬಾಯಿ? ನನಗೆ ಓದು ಬರದಿದ್ದರೂ ನಿಮ್ಮ ಪದಾರ್ಥಗಳ ಹೆಸರುಗಳನ್ನೆಲ್ಲ ಕಾಗದದ ಮೇಲೆ ಬರೆದುಕೊಡುವೆನು, ಪರೀಕ್ಷೆ ಮಾಡಿ ನೋಡು" ಎಂದು ಮಲ್ಲೇಶಿಯು ವಿನೋದದಿಂದ ನುಡಿದನು.

ಮಲ್ಲೇಶಿಯ ದಂಭವನ್ನು ಮುರಿಯಬೇಕೆಂದು ಗಿರಿಬಾಯಿಯು ಸಂಗಡಲೆ ಮಸಿ ಲೆಕ್ಕಣಿಕೆಗಳನ್ನು ತಂದು ಮುಂದಿರಿಸಿದಳು. ಮಲ್ಲೇಶಿಯು ನುರಿತವನಾದ ಲೇಖಕನ ಜಂಬದಿಂದ ಕುಳಿತು ಆ ಕಾಗದದ ಮೇಲೆ ಒಂದು ಅಡಿಕೆಯ ಆಕಾರದ ಗುಂಡನ್ನೂ, ಎಲೆಯ ಮಾಟದ ಚಿತ್ರವನ್ನೂ, ಉತ್ತತ್ತಿಯ ಆಕಾರವನ್ನೂ, ತೆಂಗಿನ ಆಕಾರದ ಮತ್ತೊಂದು ದೊಡ್ಡ ಗುಂಡನ್ನೂ, ಕಪ್ಪುರದ ಒಡೆಯಂಥ ಚೌಕೋನವನ್ನೂ ಬರೆದನು. ಅವನ ಲೇಖನ ಕೌಶಲ್ಯವನ್ನು ಕಂಡು ದೊರೆಸಾನಿಯವರು ಪರಿಹಾಸಮಾಡಿ ಬಿದ್ದು ಬಿದ್ದು ನಕ್ಕರು. ಗಿರಿಬಾಯಿಯಾದರೂ ಕೊಂಚ ನಕ್ಕು "ಆದರೂ, ಅವ್ವನವರೆ, ಈ ಚಮತ್ಕಾರವಾದ ಪಟ್ಟಿಯನ್ನು ಮಲ್ಲೇಶಿಯು ಪೇಟೆಗೆ ತೆಗೆದು ಕೊಂಡು ಹೋದನೆಂದರೆ ಅವನು ಒಂದು ಪದಾರ್ಥವನ್ನಾದರೂ ಮರೆತು ಬರಲಿಕ್ಕಿಲ್ಲ. ಅಕ್ಷರ ಲೇಖನದ ಕೆಲಸವೇ ಈತನ ಈ ಚಮತ್ಕಾರವಾದ ಲೇಖನದಿಂದ ಆದಂತಾಗಲಿಲ್ಲವೆ? ಮಲ್ಲೇಶಿಯು ಬರಬರುತ್ತ ಚತುರನಾಗುತ್ತ ನಡೆದಿದ್ದಾನೆ" ಎಂದು ಹೇಳಿ ಮಲ್ಲೇಶಿಯನ್ನು ಕುರಿತು, "ಮಲ್ಲೇಶೀ, ನಿನ್ನ ಪಟ್ಟಿಯಲ್ಲಿ ಜೇನುತುಪ್ಪವನ್ನು ಬರೆಯಲಿಲ್ಲವಲ್ಲ?" ಎಂದು ಕೇಳಿದಳು.

"ಜೇನುತುಪ್ಪಕ್ಕೆ ಈ ಬೆಳ್ಳಿಯ ಬಟ್ಟಲವೇ ಸಾಕ್ಷಿ. ಅದನ್ನು ಬರೆಯಲೇಬೇಕೆ?" ಎಂದು ಆಶ್ಚರ್ಯತೆಯಿಂದ ಮಲ್ಲೇಶಿಯು ಕೇಳಿದನು.

ಈ ಉತ್ತರದಿಂದ ಗಿರಿಬಾಯಿಗೆ ಸಂತೋಷವಾಯಿತು. ಮಲ್ಲೇಶಿಯ ಚಲುವಾದ ಮುಖಕ್ಕೆ ಕಲಂಕದಂತಿರುವ ಅವನ ಮೂಢತನದ ಲಕ್ಷಣವು ಈಗಲೆ ತೊಳೆದುಹೋಯಿತೋ ಎಂಬಂತೆ ಆ ಯುವತಿಯ ಕಣ್ಣಿಗೆ ಅವನ ಮುಖವು ಚಂದ್ರಮನ ಶುದ್ಧ ಮಂಡಲದಂತೆ ನಿರ್ಮಲವಾಗಿ ಕಂಡಿತು. ಅಂದಿನಿಂದ ಅವಳು ಜನರ ಕಣ್ಣು ತಪ್ಪಿಸಿ ಮಲ್ಲೇಶಿಗೆ ಅಕ್ಷರಗಳ ಪರಿಚಯವನ್ನು ಮಾಡಿಕೊಡಲಾರಂಭಿಸಿದಳು. ಮಲ್ಲೇಶಿಯು ಏಕಪಾಠಿಯಾಗಿರದಿದ್ದರೂ

ವಿಶೇಷ ಪ್ರಯಾಸವಿಲ್ಲದೆ ತಿಂಗಳೆರಡು ತಿಂಗಳುಗಳಲ್ಲಿ ಸುಲಭವಾದ ಶಬ್ದಗಳನ್ನು ಬರೆಯಬಲ್ಲಷ್ಟು ಅಕ್ಷರಸ್ಥನಾದನು. ಗಿರಿಬಾಯಿಯು ತನ್ನ ಚಿಕ್ಕಮ್ಮನ ಮನೆಯಲ್ಲಿರುವಾಗ ಶಾಲೆಗೆ ಹೋಗಿ ಐದು ಇಯತ್ತೆಗಳ ವರೆಗೆ ಅಭ್ಯಾಸ ಮಾಡಿದ್ದಳು. ಮುಂದೆ ಅವಳು ಅದೇ ಶಾಲೆಯಲ್ಲಿ ಮೂರು ವರ್ಷ ಕಸೀದೆ ಕಲಿಸುವ ಶಿಕ್ಷಕಳಾಗಿದ್ದುಕೊಂಡಿದ್ದಳು. ಆದರೆ ಗಿರಿಬಾಯಿಯಲ್ಲಿ ವಿಶೇಷವಾದ ಅಭಿಮಾನವುಳ್ಳವಳಾದ ಆ ಶಾಲೆಯ ಮುಖ್ಯ ಶಿಕ್ಷಕಳು ಮಾತೃಭೂಮಿಗೆ ಹೋದ ಬಳಿಕ ಅವಳು ತನ್ನ ತಾಯಿಯ ಬಳಿಗೆ ಬಂದು ದೊರೆಸಾನಿಯವರ ಅನುಚರಳಾಗಿ ಇದ್ದುಕೊಂಡಿದ್ದಳು. ಅವಳ ವಿದ್ಯೆಯು ಅಲ್ಪವೇ ಆಗಿದ್ದರೂ ಅವಳಿಂದ ಮಲ್ಲೇಶಿಯು ಕಲಿತದ್ದು ಬಹಳಾಯಿತು. ತಕ್ಕಮಟ್ಟಿಗೆ ರೂಪವತಿಯಾಗಿದ್ದ ಆ ತರುಣಿಯು ಮನಬಿಚ್ಚಿ ಅವನೊಡನೆ ಮಾತುಕಥೆಯಾಡುತ್ತಿರುವದರಿಂದ ಹೆಂಗಸರೆಂದರೆ ವಿಜಾತೀಯವಾದ ಪ್ರಾಣಿಗಳೆಂಬ ಅವನ ಕಲ್ಪನೆಯು ದೂರಾಯಿತು. ಮಮತೆಯ ಮಾತುಗಳೇ ಮೊದಲು ಮೃದುವಾದವುಗಳು. ಮೃದುಭಾಷಿಣಿಯರ ಮಂಜುಲವಾದ ವಾಣಿಯಿಂದ ಹೊರಟಂಥ ಅಂಥ ಮಾತುಗಳು ಕೇಳುವವರ ಕಿವಿಗೆ ಆಹ್ಲಾದವನ್ನೀಯಬೇಡವೇ ? ತಕ್ಕಮಟ್ಟಿಗೆಯೇ ಆಗಲಿ, ಅವನಿಗೆ ಅವಳು ವ್ಯವಹಾರಚಾತುರ್ಯವನ್ನು ಕಲಿಸಿದಳು; ಸುಸಂಸ್ಕೃತವಾದ ನಾಲ್ಕು ಶಬ್ದಗಳನ್ನುಚ್ಚರಿಸುವಷ್ಟು ಆಕ್ಷಂಜ್ಞಾನವನ್ನು ಮಾಡಿಕೊಟ್ಟಳು. ಅವನವಳಿಗೆ ಕೃತಜ್ಞನಾಗ ನಡಕೊಂಡನು; ಅವಳಲ್ಲಿ ಆದರವುಳ್ಳವನಾಗಿದ್ದನು. ಅವಳ ನಡತೆ ನಡಾವಳಿ ಸವಿನುಡಿಗಳಿಗೆ ಮನಸೋತವನಾಗಿದ್ದನು. ಮಲ್ಲೇಶಿಯಾದರೂ ಸಭ್ಯನು, ಪ್ರಾಮಾಣಿಕನು, ಸ್ವಭಾವತಃ ಕುಚೇಷ್ಟಾರಹಿತನು. ಇಂಥವನು ಬರಬರುತ್ತ ಸೌಜನ್ಯಯುತನಾಗಿ ನಡೆಯಲಾರಂಭಿಸಿರಲು ಗಿರಿಬಾಯಿಯಾದರೂ ಅವನಲ್ಲಿ ಪಕ್ಷಪಾತವುಳ್ಳವಳಾದದ್ದು ಆಶ್ಚರ್ಯವಲ್ಲ.

ಒಂದು ದಿನ ದೊರೆಸಾನಿಯವರು ನೋಡಿಕೊಳ್ಳುವ ದೊಡ್ಡ ಕನ್ನಡಿಯು ಗಿರಿಬಾಯಿಯ ಕೈತಪ್ಪಿ ಬಿದ್ದು ಫಳ್ಳನೆ ಒಡೆದು ಎರಡು ಹೋಳಾಯಿತು. ಗಿರಿಬಾಯಿಯ ಮೈಮೇಲೆ ದೊಡ್ಡದೊಂದು ಸಂಕಟವೇ ಬಂದಂತಾಗಿ ಅವಳು ಮಲ್ಲೇಶಿಯನ್ನು ಏಕಾಂತದಲ್ಲಿ ಕರೆದು ಆ ಒಡೆದ ಕನ್ನಡಿಯನ್ನು ತೋರಿಸಿ ಇನ್ನೇನು ಗತಿ ಮಾಡಲೆಂದು ಕಣ್ಣೀರು ತಂದಳು. ಮಲ್ಲೇ

ಶಿಯು ತುಸು ಧ್ಯಾನಿಸಿ "ಚಿಂತೆ ಮಾಡಬೇಡ ಗಿರಿಬಾಯಿ. ಈ ಕನ್ನಡಿ ಯನ್ನು ದೊರೆಗಳು ಕೊಂಡು ತರುವಾಗ ಆ ಅಂಗಡಿಯಲ್ಲಿ ಇಂಥದೇ ಇನ್ನೊಂದು ಕನ್ನಡಿ ಇರುವದನ್ನು ನಾನು ನೋಡಿದ್ದೇನೆ. ಈ ಒಡಕ ಕನ್ನಡಿಯನ್ನು ಎಲ್ಲಿಯಾದರೂ ಚಲ್ಲಿಕೊಟ್ಟು ನಾನು ಆ ಹೊಸ ಕನ್ನಡಿ ಯನ್ನು ತಂದುಕೊಡುತ್ತೇನೆ." ಎಂದು ಒಳ್ಳೇ ಮಮತೆಯಿಂದ ಆ ತರು ಣಿಗೆ ಆಶ್ವಾಸನವನ್ನಿತ್ತನು.

ತಡವಿಲ್ಲದೆ ಮಲ್ಲೇಶಿಯು ತನ್ನ ಸಂದುಕದೊಳಗಿಂದ ನಾಲ್ಕು ರೂಪಾ ಯಿಗಳನ್ನು ತೆಗೆದುಕೊಂಡು ಸಮೀಪದಲ್ಲಿಯೇ ಇರುವ ಪೇಟೆಯ ಕಡೆಗೆ ಹೋಗಿ ಕನ್ನಡಿಯನ್ನು ಕೊಂಡುಕೊಂಡು, ಒಂದೇ ತಾಸಿನಲ್ಲಿ ಮರಳಿ ಬಂದು ಅದನ್ನು ಗಿರಿಬಾಯಿಯ ಸ್ವಾಧೀನ ಮಾಡಿದನು. ಅವಳು ಸಂತುಷ್ಟಳಾಗಿ ಮಲ್ಲೇಶಿಯ ಉಪಕಾರವನ್ನು ಕೊಂಡಾಡಿದಳು. ಅವಳ ಶುಚಿಸ್ಮಿತವಾದ ಮುಖವನ್ನು ಕಂಡು ಅವನ ಮನಸ್ಸಿನಲ್ಲಿ ಒಂದು ಶೃಂಗಾರದ ಸೃಷ್ಟಿಯುಂಟಾ ದಂತಾಗಿ ತಾನಿಂದು ಧನ್ಯನೇ ಆದೆನೆಂದು ಅವನು ಭಾವಿಸಿಗೊಂಡನು. ಅಂದಿ ನಿಂದ ಮಲ್ಲೇಶಿ ಗಿರಿಬಾಯಿಯವರ ನಡುವೆ ದೃಢವಾದ ಸ್ನೇಹವು ನೆಲೆ ಗೊಂಡಿತು. ಗಿರಿಬಾಯಿಗೆ ತಾನೊಂದು ಉಪಕಾರ ಮಾಡದಿದ್ದ ದಿವಸವು ಮಲ್ಲೇಶಿಗೆ ದುರ್ದಿನವು. ಮಲ್ಲೇಶಿಯನ್ನು ಸಂತೋಷಗೊಳಿಸದಿದ್ದ ದಿವ ಸವು ವ್ಯರ್ಥವಾಗಿ ಹೋಯಿತೆಂದು ಆ ಬಾಲೆಯು ವ್ಯಸನಪಡುವಳು. ತರುಣ ತರುಣಿಯರ ನಡುವಿನ ಸ್ನೇಹವು ಪ್ರೇಮದಲ್ಲಿ ಪರಿಣಮಿಸಿತೆಂದು ಹೇಳುವ ಕಥೆಗಾರನ ಫಲಿತಾರ್ಥವೂ "ಮಳೆ ಬಂದಲ್ಲಿ ಕೆಸರಾದೀತು!" ಎಂದು ಹೇಳುವ ಬುಡುಬುಡಿಗನ ಭವಿಷ್ಯಜ್ಞಾನವೂ ಒಂದೇ ಸರಿ

ಒಂದು ದಿನ ಮಲ್ಲೇಶಿಯು ತಲೆನೋವಿಗಾಗಿ ಹಾಸಿಗೆ ಹಿಡಿದು ಮಲಗಿ ಕೊಂಡನು. ಹೇಮರಡ್ಡಿ ಪ್ರಭುಗಳೂ ದೊರೆಸಾನಿಯವರೂ ಮಲ್ಲೇಶಿಗೆ ತಲೆನೋವಾದದ್ದು ಕೇಳಿ ವ್ಯಥಿತರಾಗಿ, ಏನೂ ಕೆಲಸ ಮಾಡದೆ ವಿಶ್ರಾಂತಿ ಯನ್ನು ತೆಗೆದುಕೊಳ್ಳೆಂದು ಅವನಿಗೆ ಹೇಳಿದರು. ಮಧ್ಯಾಹ್ನದ ಮೇಲೆ ಗಿರಿಬಾಯಿಯು ದಾಲಚಿನ್ನಿಯ ಎಣ್ಣೆಯನ್ನು ತೆಗೆದುಕೊಂಡು ಮಲ್ಲೇಶಿಯ ಬಳಿಗೆ ಹೋಗಿ ಅವನ ಹಣೆಯ ಮೇಲೆ ತನ್ನ ಹಸ್ತವನ್ನಿಟ್ಟು "ಮಲ್ಲೇಶಿ, ತಲೆಬೇನೆ ಹೇಗಿದೆ?" ಎಂದು ಬಲು ಮಮತೆಯಿಂದ ಕೇಳಿದಳು. ಆ ನವ-

ಯುವತಿಯ ಕೋಮಲವಾದ ಹಸ್ತಸ್ಪರ್ಶವನ್ನನುಭವಿಸಿದ ಕೂಡಲೆ ಮಲ್ಲೇಶಿಯ ಮೈಯಲ್ಲಿ ಛರ್ರನೆ ವಿದ್ಯುತ್‌ಪ್ರವಾಹವು ಸಂಚರಿಸಿದಂತಾಗಿ ಅವನು ಚಟ್ಟನೆ ಎದ್ದು ಕುಳಿತು ಗಿರಿಬಾಯಿಯ ಹಸ್ತವನ್ನು ತನ್ನ ಕೈಯಲ್ಲಿ ಗಟ್ಟಿಯಾಗಿ ಹಿಡಿದು "ಓ! ಅಮೃತಹಸ್ತವೆ! ಓ, ಸಿರಿಗಂಧದ ಪೂಸೆ!" ಎಂದು ಉದ್ಗಾರ ತೆಗೆದು, "ಗಿರಿಬಾಯಿ, ಚಮತ್ಕಾರ ನೋಡಿದಿಯಾ? ನಿನ್ನೀ ಕೋಮಲವಾದ ಹಸ್ತಸ್ಪರ್ಶದಿಂದ ನನ್ನ ತಲೆನೋವೆಲ್ಲ ಛರ್ರನೆ ಇಳಿದು ಹೋಯಿತು. ಆದರೆ ನನ್ನೆದೆ ಮಾತ್ರ ಯಾಕೋ ಡಬ ಡಬ ಹಾರಲಾರಂಭಿಸಿದೆ. ಇಲ್ಲಿಷ್ಟು ಕೈಯಾಡಿಸಬಾರದೆ?" ಎಂದು ನುಡಿದವನೇ ಅವಳ ಪದ್ಮಕೋಮಲವಾದ ಹಸ್ತವನ್ನು ತನ್ನ ಎದೆಗೆ ತಗಲಿಸಿ ಆ ಹಸ್ತವನ್ನು ಆಕಳು ಸೆಳಕೊಳ್ಳದಂತೆ ಅವನು ಗಟ್ಟಿಯಾಗಿ ತನ್ನ ಎರಡೂ ಕೈಗಳಿಂದ ಹಿಡುಕೊಂಡು "ಓ ಹೂವಿನ ಹಸ್ತವೆ! ಓ ಸಿರಿಗಂಧದ ಪೂಸಿ!" ಎಂದು ಮತ್ತೆ ಕೂಗಿದನು.

ಹೀಗೆ ಗಟ್ಟಿಗಟ್ಟಿಯಾಗಿ ಉಚ್ಚರಿಸಿದ ಅವನ ಉದ್ಗಾರಗಳನ್ನು ಹೊರಗಿದ್ದವರಾರಾದರೂ ಕೇಳಿದರೆ ಪರಿಣಾಮವೇನೆಂಬ ಭೀತಿಯಿಂದ ಗಿರಿಬಾಯಿಯು ತಾನೇನು ಮಾಡುವೆನೆಂಬದನ್ನು ಅರಿಯದೆ ತನ್ನದೊಂದು ಕೈಯನ್ನು ಮಲ್ಲೇಶಿಯ ಹೆಗಲಮೇಲೆ ಹಾಕಿ, ಮತ್ತೊಂದು ಕೈಯಿಂದ ಅವನ ಬಾಯನ್ನು ಗಟ್ಟಿಯಾಗಿ ಮುಚ್ಚಿ "ಮಲ್ಲೇಶಿ, ನೀನು ಹಾಗೆ ಕೂಗಿದರೆ ಜನರು ವಿಪರೀತವಾದ ಕಲ್ಪನೆಯನ್ನು ಮಾಡಬಹುದಲ್ಲವೆ?" ಎಂದು ಕೇಳಿದಳು.

"ಗಿರಿಬಾಯಿ, ಬೇನೆಯಿಂದ ಪೀಡಿತನಾದ ನಾನು ನಿನ್ನ ಹಸ್ತದಿಂದ ಉಂಟಾದ ಸಹಾನುಭೂತಿಯ ಮೂಲಕ ಹಾಗೆ ಚಕಿತನಾಗಿ ಕೂಗಿದೆನು. ನೀನು ತಳೆದಿರುವ ಶಂಕೆಯಾದರೂ ಸರಿಯಾದದ್ದು. ಸದ್ಯಕ್ಕೆ ನನ್ನ ಕೊರಳಿನಲ್ಲಿರುವ ನಿನ್ನೀ ಸುಖಮಯವಾದ ಬಾಹುಪಾಶವನ್ನು ಇನ್ನೊಂದು ಕ್ಷಣ ಹೊತ್ತಾದರೂ ನೀನು ಹೀಗೆಯೇ ಇರಗೊಟ್ಟರೆ ನಾನು ಕೃತಾರ್ಥನಾಗುವೆನು." ಎಂದು ಹೇಳಿಕೊಂಡು ಮಲ್ಲೇಶಿಯು ತನ್ನ ಹೆಗಲ ಮೇಲಿರುವ ಗಿರಿಬಾಯಿಯ ನಳಿತೋಳನ್ನು ಅಲ್ಲಿಯೇ ಗಟ್ಟಿಯಾಗಿ ಹಿಡಿದುಕೊಂಡು ಕುಳಿತನು.

ಪ್ರೇಮದ ಉತ್ಪತ್ತಿಯೂ ಮೇಘದ ಉತ್ಪತ್ತಿಯೂ ಹೇಗಾಗುವದೋ ಯಾರು ಬಲ್ಲರು? ಈ ಗಳಿಗೆಯಲ್ಲಿ ಬರಿದಾಗಿ ತೋರುವ ಮುಗಿಲಿನಲ್ಲಿ ಇನ್ನೊಂದು ಕ್ಷಣಕ್ಕೆ ಅಗಾಧವಾದ ಮೇಘಸಮುದಾಯವು ಹುಟ್ಟಿ, ಮಿಂಚು, ಕೋಲುಮಿಂಚು, ತಂಗಾಳಿಗಳ ವಿಲಕ್ಷಣವಾದ ಆಟವು ತೋರುವದುಂಟು. ಹಾಗೆಯೇ ಪ್ರೇಮೋದ್ಗಮಕ್ಕಾದರೂ ಹೇಳಿಕೊಳ್ಳುವಂಥ ನೆಪ ಬೇಕಾಗುತ್ತ ದೆಂತಲ್ಲ. ಅಪ್ರತ್ಯಕ್ಷವಾದ ಕಾರಣಗಳು ಅನೇಕವಾಗಿರಬಹುದು. ಪದಾರ್ಥ ವಿಜ್ಞಾನಶಾಸ್ತ್ರಿಯು ವಿದ್ಯುತ್ತಿನ ಉತ್ಪತ್ತಿಯ ಅನೇಕವಾದ ಕಾರಣಗಳನ್ನು ಕಂಡುಹಿಡಿದಿರಬಹುದು. ಆದರೆ ಅಕಸ್ಮಾತ್ತಾಗಿ ಜಗ್ಗನೆ ಮಿನುಗಿನ ಕೋಲು-ಮಿಂಚಿನ ಚಮತ್ಕಾರವನ್ನು ಕಂಡು ಆ ಶಾಸ್ತ್ರಿಯು ಫಕ್ಕನೆ ಚಕಿತನಾಗಿ ಮೂರ್ಛಿತನು ಕೂಡ ಆಗಬಹುದು. ಗಿರಿಬಾಯಿಯ ಅಂಗಗಳಲ್ಲಿ ಪ್ರೇಮದ ಸಂಚಾರವೆಂತಾಯಿತೋ ಹೇಳಲಾಗದು. ಆವಳ ಮುಖದಲ್ಲಿ ವಿಲಕ್ಷಣವಾದ ತೇಜಸ್ಸು ತೋರಿತು. ಮೈಯಲ್ಲೆಲ್ಲ ರೋಮಾಂಚಗಳೆದ್ದವು. ಚಿತ್ತವು ಚಮತ್ಕಾರವಾದದ್ದಾಯಿತು. ಲೀಲೆಯಿಂದವಳು ಮಲ್ಲೇಶಿಯ ಗದ್ದವನ್ನು ಹಿಡಿದು "ಹುಚ್ಚ ಹುಡುಗನಿರುವಿ ನೀನು!" ಎಂದು ನುಡಿದು ಮಂದಹಾಸಗೈದಳು.

ತತ್‌ಕ್ಷಣವೇ ಮಲ್ಲೇಶಿಯು ಚತುರನಾದ ಕಾಮಿಯಂತೆ ಆ ನವತರುಣಿಯ ಅಧರವನ್ನು ಚುಂಬಿಸಿ ಹುಚ್ಚೆದ್ದು ಕುಣಿದನು. ಕತ್ತಲೆಯಲ್ಲಿ ಎಂಥದಾದರೂ ಒಂದು ಪ್ರಕಾಶದ ಅಪೇಕ್ಷೆಯಾಗುವದುಂಟು. ಆದರೆ ಅತಿ ದೀಪ್ತಿಮಯವಾದ ವಿದ್ಯುಲ್ಲತೆಯ ತೇಜಸ್ಸು ಕಣ್ಣಿಗೆ ಸರ್ವಥಾ ಸಹನವಾಗದಿರುವಂತೆ ಪ್ರೇಮಸಮ್ಮೂಢನಾದ ಮಲ್ಲೇಶಿಯ ಚಿತ್ತಕ್ಕೆ ಅಕಸ್ಮಾತ್ತಾಗಿ ತೋರಿದ ಗಿರಿಬಾಯಿಯ ಮೃದುಹಾಸವು ವಿಭ್ರಮವನ್ನುಂಟುಮಾಡಿತು.

ಈ ಸಂಗತಿಯಾದ ಬಳಿಕ ಗಿರಿಬಾಯಿ ಮಲ್ಲೇಶಿಗಳು ಚಮತ್ಕಾರವಾದ ಚಿತ್ತವೃತ್ತಿಯುಳ್ಳವರಾದರು. ಅವರ ಸಲಿಗೆಯ ಮಾತುಗಳು ನಿಂತುಹೋಗಿ ನೇತ್ರ ವ್ಯಾಪಾರಗಳಿಂದಲೇ ಅವರ ಸಂವಾದಗಳು ನಡೆದವು. ಹೆಸರುಗೊಂಡು ಅವರು ಒಬ್ಬರೊಬ್ಬರನ್ನು ಕರೆಯುದಾದರು. ಮಲ್ಲೇಶಿಯನ್ನು ಓರೆ ಕಣ್ಣಿನಿಂದ ನೋಡುತ್ತ ಬರುವ ಗಿರಿಬಾಯಿಯನ್ನು ನೋಡಿ ದೊರೆಸಾನಿಯುವರು ನಕ್ಕರು. ಜಾಣರು ಮತ್ತಿನ್ನೆಷ್ಟು ಪರೀಕ್ಷೆ ಮಾಡಿ ನೋಡುವರು? ಎಲ್ಲರಿಗೂ

ಬೇಕಾದ ಮಾತದು. ಅಂದಮೇಲೆ ಗಿರಿಜಾ ಮಲ್ಲೇಶ್ವರರ ಕಲ್ಯಾಣೋತ್ಸವವು ಬೇಗನೆ ಆಗಿಹೋಯಿತು.

ಮಲ್ಲೇಶ್ವರನು ಅಕ್ಷರಸ್ಥನೂ ವಿನಯಶೀಲನೂ ಅಭಿಜಾತನೂ ಆದ ನಾಗರಿಕನಾದದ್ದು ಕಂಡು ದೊರೆಗಳು ಅವನನ್ನು ಅರಮನೆಯ ಕೋಶಾಧ್ಯಕ್ಷನನ್ನಾಗಿ ಮಾಡಿದರು. ಗಿರಿಬಾಯಿಯಂತೂ ದೊರೆಸಾನಿಯವರ ವಿಶ್ವಾಸದ ಪರಿಚಾರಿಕೆಯು. "ಊರನ್ನಾಳುವ ದೊರೆಗಳೇ ಮನೆಯಲ್ಲಿ ಬಾಗಿಬಾಗಿ ನಡಕೊಳ್ಳುವದನ್ನು ಕಂಡು, ನಮ್ಮಂಥವರ ಹೆಂಡರು ನಮ್ಮ ತಲೆಮೇಲೇರಿ ಕುಳ್ಳಿರುವದೇನು ಆಶ್ಚರ್ಯ ತಾಯಿಯವರೇ?" ಎಂದು ಮಲ್ಲೇಶಿಯು ಆಗಾಗ್ಗೆ ದೊರೆಸಾನಿಯವರ ಮುಂದೆ ದೂರಿಕೊಂಡರೂ ವೈವಾಹಿಕ ಸ್ಥಿತಿಯು ಸುಖಕರವಾದದ್ದೆಂಬದು ಅವನ ನಿಜವಾದ ಅಭಿಪ್ರಾಯವು.

# ಗುಲ್‌ಬಾಯಿ

ನಮ್ಮ ಪರಮಮಿತ್ರರಾದ ಗುಂಡೇರಾವ ಇವರ ನೇತ್ರರೋಗದ ಚಿಕಿತ್ಸೆಗಾಗಿ ನಾವು ಮೂವರು ಮಿರ್ಜಿಯಲ್ಲಿರುವ ಡಾಕ್ಟರ ವಾಲ್ಸೇಸ್ ಇವರ ಔಷಧಾಲಯಕ್ಕೆ ಬಂದಿದ್ದೆವು. ಗುಂಡೇರಾಯರು ಹಗಲಿರುಳು ಔಷಧಾಲಯದಲ್ಲಿಯೇ ಇರಬೇಕಾಗಿರುವದರಿಂದ ಆ ಔಷಧಾಲಯದ ಬಳಿಯಲ್ಲಿಯೇ ಇರುವದೊಂದು ಮನೆ ಹಿಡಿಯುವದು ನಮಗೆ ಅವಶ್ಯವಾಗಿತ್ತು. ಅಂಥ ಪ್ರಶಸ್ತವಾದ ಮನೆ ದೊರಕಲೊಲ್ಲದು. ಪ್ರಶಸ್ತವಾದದ್ದೊಂದು ಬಂಗಲೆ ಮಾತ್ರ ನಮಗೆ ಅನುಕೂಲವಾಗಿತ್ತು. ಆದರೆ ಅದರ ಯಜಮಾನನು ಅದನ್ನು ಬಾಡಿಗೆಗಾಗಿ ಯಾರಿಗೂ ಕೊಡುವದಿಲ್ಲೆಂದು ಅಲ್ಲಿಯ ಜನರು ಹೇಳಿದರು. ಯಜಮಾನರಾರೆಂದು ವಿಚಾರಮಾಡಲಾಗಿ ಕೊಲ್ಹಾಪುರದಲ್ಲಿರುವ ನಾನಾಸಾಹೇಬ ದೇಶಪಾಂಡೆ ಎಂಬ ವಕೀಲರ ಬಂಗಲೆ ಅದೆಂದು ತಿಳಿಯಬಂದಿತು. ನಾನಾಸಾಹೇಬರೂ ನಾನೂ ಕೂಡಿಯೇ ಮುಂಚೆ ಪುಣೆಯ ಫರ್ಗ್ಯುಸನ್ ಕಾಲೇಜದಲ್ಲಿ ಕಲಿಯುತ್ತಿದ್ದೆವು. ಅರ್ಥಾತ್ ಆ ಬಂಗಲೆಯು ನಮಗೆ ಸಿಕ್ಕೇಸಿಕ್ಕುವದೆಂದು ಹೇಳಿ ನಾವೆಲ್ಲರೂ ನಾನಾಸಾಹೇಬರನ್ನು ಕೇಳುವದಕ್ಕಾಗಿ ಮಿರ್ಜಿಯಿಂದ ಕೊಲ್ಹಾಪುರಕ್ಕೆ ಹೊರಟೆವು.

ಸಾಯಂಕಾಲದ ಐದು ಗಂಟೆಯ ಗಾಡಿಗೆ ಸೆಕಂಡಕ್ಲಾಸದ ಡಬ್ಬಿಗಳಿಲ್ಲ. ಇದ್ದ ಡಬ್ಬಿಗಳಲ್ಲಿ ಅಂದು ಅತಿಶಯವಾದ ದಟ್ಟಣೆಯು. ಗಿಬ್ರಾಯಲ್‌ನೆಂಬ ಟಿಕೆಟ ಕಲೆಕ್ಟರನಿಗೆ ಬಹುಪರಿಯಾಗಿ ಹೇಳಿಕೊಂಡು ನಾವು ಮೂವರು ಒಂದು ಕಂಪಾರ್ಟಮೆಂಟದಲ್ಲಿ ಆರಾಮವಾಗಿ ಕುಳಿತುಕೊಂಡೆವು. ಗಾಡಿ ಹೊರಡುವದರೊಳಗಾಗಿ ಮತ್ತೆ ಮಂದಿ ಬಂದು ತುಂಬುವದೋ ಎಂಬ ಭೀತಿಯು ನಮಗೆ ಇದ್ದೇ ಇತ್ತು. ಅನೇಕ ಜನರು ಬಂದು ನಮ್ಮ ಬಾಗಿಲವನ್ನು ತಟ್ಟಿಯೇ ತಟ್ಟಿದರು. ಆ ಜನರ ವೇಷ-ಸ್ಥಿತಿಗಳನ್ನು ಕಂಡು "ಇದು ರಿಝರ್ವ್ ಕಂಪಾರ್ಟ್" ಎಂದೂ, "ಇಲ್ಲಿಯವರು ಕೆಲವರು ಏನೋ ನಿಮಿತ್ತವಾಗಿ ಹೊರಗೆ ಹೋಗಿರುವರು" ಎಂದೂ, "ಯಾಕೆ ತೊಂದರೆಮಾಡಿಕೊಳ್ಳುತ್ತೀರಿ ? ಮುಂದೆ ಎಷ್ಟೋ ಡಬ್ಬಿಗಳು ತೆರವೇ ಇವೆ" ಎಂದೂ ಹೇಳಿ

ಅವರನ್ನು ದೂಡಿಹಾಕಿದೆವು. ಇಂಥ ಸುಸಮಯದಲ್ಲಿ ಗಾಡಿಯು ನಡೆಯಲಾರಂಭಿಸಿದರೆ ಬಂಗಾರದಂತಾಗುವದೆಂದು ನಾವು ಉದ್ಗಾರ ತೆಗೆಯುವಷ್ಟರಲ್ಲಿಯೇ ಸುಧಾರಿಸಿದ ವಿದುಷಿಯ ವೇಷವನ್ನು ಧರಿಸಿದವಳಾದ ತರುಣಿಯೋರ್ವಳು ಮತ್ತೊಬ್ಬ ಸ್ತ್ರೀಯನ್ನೂ ಮಧ್ಯಮವಯಸ್ಕನಾದ ಗೃಹಸ್ಥನೊಬ್ಬನನ್ನೂ ಕೂಡಿಕೊಂಡು ಸಟ್ಟನೆ ನಾವಿದ್ದಲ್ಲಿಗೆ ಬಂದು ನಿಂತಳು.

"ಸ್ಥಳವೇ ಇಲ್ಲ, ಮಾಡುವದಿನ್ನೇನು? ಈ ಸಭ್ಯಗೃಹಸ್ಥರಿಗೆ ನಮಗೋಸ್ಕರವಾಗಿ ಕೊಂಚ ತೊಂದರೆಯಾದರೂ ಇವರು ನಮ್ಮನ್ನು ಕ್ಷಮಿಸುವರು" ಎಂದು ಆ ಯುವತಿಯು ಮಂದಸ್ಮಿತವಾಗಿ ನುಡಿದಳು.

ನಿಷೇಧಿಸಲಂತೂ ನಾವು ಸರ್ವಥಾ ಅಸಮರ್ಥರಾಗಿಹೋದೆವು. ನಮ್ಮ ಶ್ಯಾಮರಾಯರು ಆ ನವತರುಣಿಯನ್ನು ಕುರಿತು: "Most welcome! (ಅವಶ್ಯವಾಗಿ ಬನ್ನಿರಿ. ಸ್ಥಳವು ನಿಮ್ಮದೇ ಇದೆ)" ಎಂದು ಹೇಳಿದವರೇ ತಾವಾಗಿ ಎದ್ದು ಆ ಲಲನಾಜನರಿಗೆ ಒಳಗೆ ಬರಲನುವಾಗುವಂತೆ ಕಂಪಾರ್ಟಮೆಂಟಿನ ಬಾಗಿಲನ್ನು ತೆರೆದಿಟ್ಟರು. ಆ ತರುಣಿಯು ಸಾವಕಾಶವಾಗಿ ಒಳಗೆ ಬಂದು ಕಿಟಿಕೆಯನ್ನು ಹಿಡುಕೊಂಡು ಆಢ್ಯತೆಯಿಂದ ಕುಳಿತುಕೊಂಡು "ರಾವಸಾಹೇಬ, ನೀವು ಮೂವರೂ ಒಂದು ಬೆಂಚದ ಮೇಲೆ ದಯಮಾಡಿ ಕುಳಿತರೆ ಈಚೆಯ ಬೆಂಚು ಸ್ವತಂತ್ರವಾಗಿ ನಮ್ಮ ಜನರಿಗಾಗುತ್ತದೆ" ಎಂದು ಕೇಳಿಕೊಂಡಳೋ ಅಜ್ಞೆಮಾಡಿದಳೋ ನಮಗೆ ಚನ್ನಾಗಿ ತಿಳಿಯದಿದ್ದರೂ ನಾವು ಒಂದು ಸಮಗ್ರವಾದ ಬೆಂಚವನ್ನು ಅವರಿಗೆ ಬಿಟ್ಟುಬಿಟ್ಟದ್ದು ಸರಿ. ಆ ಮೂವರು ಯಥಾಸ್ಥಿತವಾಗಿ ಕುಳಿತ ಬಳಿಕ.

"ನಮ್ಮ ಗುಲ್‌ಬಾಯಿ ಇದ್ದರೆ ಸ್ಥಳಕ್ಕೇನು ಕಡಿಮೆ? ಇಂದು ಎತ್ತ ನೋಡಿದತ್ತ ದಟ್ಟಣೆ ಬಹಳ" ಎಂದು ಗುಲ್‌ಬಾಯಿಯ ಸಂಗಡ ಬಂದ ಸ್ತ್ರೀಯು ತನ್ನ ಮಗುವನ್ನು ಚುಂಬಿಸುತ್ತ ಸಂತೋಷದಿಂದ ನುಡಿದಳು.

"ಮಾಣಿಕಬಾಯಿ, ಯಾರಾದರೇನು? ಒಳ್ಳೇ ಮಾತಾಡಿದರೆ ಒಳ್ಳೇ ಕೆಲಸಗಳಾಗುತ್ತವೆ. ಅಹುದಲ್ಲರೀ ಅಣ್ಣಾಸಾಹೇಬ" ಎಂದು ಗುಲ್‌ಬಾಯಿಯು ಮೋಲ್ಕಂಡ ಬಿರುದನ್ನು ನನಗೆ ಕೊಟ್ಟು ಕೇಳಿದಳು.

"ನಿಮ್ಮಂಥ ಒಳ್ಳೇ ಜನರು ಬಂದರೆ ಯಾರು ಬೇಡೆನ್ನುತ್ತಾರೆ? ಗ್ರಾಮ್ಯರಾದ ಜನರು ಬಂದು ಸೇರಿದರೆ ಮಾತ್ರ ಬಹು ವ್ಯತ್ಯಾಸವಾಗುತ್ತದೆ.

ನೀವು ಬಂದದ್ದೂ ವಿಹಿತವೇ ಆಯಿತು" ಎಂದು ನಾನು ಸಮ್ಮತಿಸಿ ನುಡಿದೆನು.

ಮುಂದೆ ಒಂದೇ ನಿಮಿಷದಲ್ಲಿ ಗಾಡಿಯು ತನ್ನ ಸ್ಥಾನವನ್ನು ಬಿಟ್ಟು ಒಳ್ಳೇ ವೇಗದಿಂದ ಧಾವಿಸಲಾರಂಭಿಸಿತು. ಮಾರ್ಗದ ಬದಿಗಿದ್ದ ಗಿಡಗಳು ಗಾಡಿಗೆ ಇದಿರಾಗಿ ಓಡುತ್ತಿರುವದನ್ನು ಮಾಣಿಕಬಾಯಿಯು ಚಿಕ್ಕಮಗಳಾದ ರತನಬಾಯಿಯು ನೋಡಿ ತಾನೂ ಹೊರಗಿನ ಚಮತ್ಕಾರವನ್ನು ನೋಡುವೆನೆಂದು ಕುಣಿಕುಣಿದಾಡಿ ಕೂಗಿದಳು. ಈಚೆಯ ಕಿಟಕಿಗೆ ಕುಳಿತಿದ್ದ ಗುಲ್‌ಬಾಯಿಯು ಅವಳನ್ನು ಕರಕೊಳ್ಳಲೊಲ್ಲಳು. ಮತ್ತೊಂದು ಕಿಟಕಿಗೆ ಹೊಂದಿಕೊಂಡು ಕುಳಿತ ಗೃಹಸ್ಥನು ಮಕ್ಕಳನ್ನೆತ್ತಿಕೊಳ್ಳುವದು ತನ್ನ ಕರ್ತವ್ಯವಲ್ಲೆಂದು ತಿಳಿದಿದ್ದನೋ ಏನೋ, ಆ ಮಗುವನ್ನು ಅವನು ಕಣ್ಣೆತ್ತಿ ನೋಡಲೊಲ್ಲನು. ಆರ್ತೆಯಾದ ಆವಳ ಮಾತೆಯು ಅಭಿಪ್ರಾಯವ್ಯಂಜಕವಾದ ದೃಷ್ಟಿಯಿಂದ ನನ್ನನ್ನು ನೋಡಿದಳು. ಸದ್ಗುಣಿಯಾದ ಸ್ತ್ರೀಯು ಕಳೆಯುಳ್ಳವಳಾದ ಮಾಣಿಕಬಾಯಿಯು ಆ ಅವ್ಯಕ್ತವಾದ ಪ್ರಾರ್ಥನೆಯನ್ನು ಮನ್ನಿಸಿ ನಾನು ರತನಬಾಯಿಯನ್ನು ಎತ್ತಿಕೊಂಡು ಜೋಕೆಯಿಂದ ಆ ಮಗುವಿಗೆ ಹೊರಗಿನ ನೋಟವನ್ನು ತೋರಿಸಲಾರಂಭಿಸಿದೆನು. ಈ ಅಲ್ಪ ಉಪಕಾರವು ಆ ತಾಯಿಗೆ ಬಹಳಾಯಿತು. ಕೃತಜ್ಞತೆಯಿಂದ ಅವಳು ನನ್ನನ್ನು ನೋಡಿ, "ಅಣ್ಣಾ, ನೀವು ಮಕ್ಕಳಂದಿಗರಾಗಿ ತೋರುವಿರಿ" ಎಂದು ನುಡಿದು ಮುಖದಲ್ಲಿ ಶುಚಿಸ್ಮಿತವನ್ನು ತಳೆದಳು.

"ಬಂಗಾರದರಗಿಳಿಯಂಥ ಮಗುವನ್ನು ಯಾರಾದರೂ ಪ್ರೇಮದಿಂದ ಎತ್ತಿಕೊಳ್ಳುವರು. ಆದಕ್ಕಿಷ್ಟೇಕೆ ಕೃತಜ್ಞತೆ ?" ಎಂದು ಗುಲ್‌ಬಾಯಿಯು ನಮ್ಮೀರ್ವರನ್ನು ನೋಡಿ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದಳು.

"ಹಾಗಾದರೆ ನೀವೇಕೆ ಆ ಕೂಸನ್ನು ಎತ್ತಿಕೊಳ್ಳಲಿಲ್ಲ ಗುಲ್‌ಬಾಯಿ?" ಎಂದು ನಾನು ಮಾತಿಗೆ ಮಾತಾಡಿದೆನು. ಬಲು ಮಾತಿನವಳಾದ ಆ ತರುಣಿಯೊಡನೆ ಮಾತಾಡಲು ನನಗೆ ಸಂಕೋಚವೆನಿಸಲಿಲ್ಲ.

ಅದಕ್ಕೆ ಗುಲ್‌ಬಾಯಿಯು ನಕ್ಕು: "ರತನಬಾಯಿಯನ್ನು ನಾನೆತ್ತಿಕೊಳ್ಳುವದನ್ನು ನೀವೇನು ಹೇಳುವಿರಿ? ಅವಳು ನಮ್ಮ ಮನೆಯವಳೇ. ಆದರೆ ನಾನುಟ್ಟುಕೊಂಡಿರುವ ಈ ಸೂಕ್ಷ್ಮವಾದ ಜರದ ಪತ್ತಲವು ಮಾಸುವದೆಂದು ತಿಳಿದು ನಾನಾಕೆಯನ್ನು ಎತ್ತಿಕೊಳ್ಳಲಿಲ್ಲ" ಎಂದು ನುಡಿದು ತನ್ನ ಮಹಾ

ವಸ್ತ್ರವನ್ನು ತೀಡಿ ಸಮಮಾಡಿಕೊಂಡಳು.

"ಗುಲ್‌ಬಾಯಿ, ನಿಮಗಿಷ್ಟು ಉಡಿಗೆತೊಡಿಗೆಗಳ ಚಿಂತೆಯಾಗಿದ್ದರೆ ನೀವು ಮತ್ತೊಂದು ಸಮಯದಲ್ಲಿ ಸೆಕಂಡಕ್ಲಾಸ ಡಬ್ಬಿಯುಳ್ಳ ಗಾಡಿಗೆ ಬರಬೇಕಾಗಿತ್ತು!" ಎಂದು ನಮ್ಮ ಮಾಧವರಾಯರು ಸೂಚಿಸಿದರು.

"ನಾನೆಂದೂ ಮೂರನೆಯ ವರ್ಗದ ಡಬ್ಬಿಯಲ್ಲಿ ಕುಳಿತು ಪ್ರವಾಸ ಮಾಡಿದವಳಲ್ಲ. ಇಂದು ರಾತ್ರಿ ಒಂಬತ್ತುಗಂಟೆಗೆ ಕೊಲ್ಲಾಪುರದಲ್ಲಿ ನಾಟಕವಿರುವದರಿಂದ ಅನಿವಾರ್ಯಹಕಕ್ಕಾಗಿ ಈ ಗಾಡಿಯಲ್ಲಿ ಪ್ರವಾಸಮಾಡ ಬೇಕಾಯಿತು. ಯುರೋಪಿಯನ್ ಥರ್ಡಕ್ಲಾಸದಲ್ಲಿಯಾದರೂ ನಮಗೆ ಪ್ರವೇಶವಿಲ್ಲ.

"ನೀವು ಯುರೋಪಿಯನ್ನರ ಝುಗ ಟೊಪ್ಪಿಗೆಗಳನ್ನು ಮಾಡಿಸಿರುವಿರಿ; ಹಾಕಿಕೊಂಡು ಬಂದಿದ್ದರೆ ಈ ಸಮಯದಲ್ಲಿ ಉಪಯೋಗವಾಗುತ್ತಿತ್ತು ?" ಎಂದು ಮಾಣಿಕಬಾಯಿಯು ಚೇಷ್ಟೆಮಾಡಿ ನುಡಿದು ನಕ್ಕಳು.

"ಝುಗ ಟೊಪ್ಪಿಗೆಗಳನ್ನು ಹೇಗಾದರೂ ಸಂಪಾದಿಸಬಹುದು. ಆದರೆ ಯುರೋಪಿಯನ್ನರ ಬಿಳಿದಾದ ಮೈಬಣ್ಣವೆಲ್ಲಿಂದ ತರಲಿ ಮಾಣಿಕಬಾಯಿ?"

ಇದೇ ಸಮಯವೆಂದು ನೆನೆದು ನಾನು :- "ಯಾಕೆ ಗುಲ್‌ಬಾಯಿ, ನೀವು ಗೌರವರ್ಣದವರೇ ಆಗಿರುವಿರಿ. ನಿಮ್ಮ ಸುಂದರವಾದ ಮುಖಕ್ಕೆ ಕೊಂಚ 'ಚರಿಬ್ಲಾಸಮ್' ಬಣ್ಣವನ್ನು ತಗಲಿಸಿದರೆ ನೀವು ಯುರೋಪಿಯನ್ನ ರಲ್ಲವೆಂದು ಸಹಸಾ ಯಾರೂ ಹೇಳರು" ಎಂದು ವಿನೋದಗೈದು ನುಡಿದೆನು.

ನನ್ನ ಮಾತಿನಿಂದ ಗುಲ್‌ಬಾಯಿಯ ಮನಸ್ಸಿಗೆ ಕೋಪ ವಿಷಾದ ಗಳೇನೂ ತಟ್ಟಿದಂತೆ ತೋರಲಿಲ್ಲ. ಅವಳು ಕಿಂಚಿತ್ ಮಂದಸ್ಮಿತೆಯಾಗಿ "ಅಣ್ಣಾಸಾಹೇಬ, ಬಣ್ಣವನ್ನು ಹಚ್ಚಿಕೊಳ್ಳಲು ನನಗೆ ನಾಚಿಕೆಬರುತ್ತದೆ" ಎಂದು ನುಡಿದಳು. ಆದರೂ ಆ ತರುಣಿಯ ಕಪೋಲಗಳಲ್ಲಿ ಎಷ್ಟುಮಟ್ಟಿ ಗೆಯೂ ಲಜ್ಜೆಯ ಛಟೆಯು ವ್ಯಕ್ತವಾಗಿ ಕಾಣಲಿಲ್ಲ.

"ನಾಚಿಕೆ ಬಂದರಂತೂ ನಿಮ್ಮ ಚಲುವಾದ ಮುಖವು ಹೆಚ್ಚಾಗಿ ಗೌರವರ್ಣವನ್ನು ತಳೆಯುವದು. ಲಜ್ಜೆ ಬಾರದಿದ್ದರಂತೂ ನೀವು ನಿಃಸಂಶಯ ವಾಗಿ ಯುರೋಪಿಯನ್ನರೇ. ಸಣ್ಣಪುಟ್ಟ ಮಾತುಗಳಿಗಾಗಿ ಯುರೋ

ಹಿಯುನ್ನ ಸ್ತ್ರೀಯರು ತಮ್ಮ ಮುಖಕ್ಕೆ ಲಜ್ಜೆಯ ಲಾಂಛನವು ತಗಲದಂತೆ ಎಚ್ಚರವುಳ್ಳವರಾಗಿರುವರು" ಎಂದು ನಾನು ನನ್ನ ಅಭಿಪ್ರಾಯವನ್ನು ವ್ಯಕ್ತ ಪಡಿಸಿದೆನು.

ನನ್ನ ಮಾತು ಕೇಳಿ ನಮ್ಮ ಶ್ಯಾಮರಾಯರು ಜಾಣತಾಗಿ ನಕ್ಕರು. ಅದನ್ನು ಕಂಡು ಮಾತ್ರ ಗುಲ್‌ಬಾಯಿಯು ಲಜ್ಜಾವನತಮುಖಿಯಾದಳು. ಆವಳ ತಗ್ಗಿದ ಮೊಗದಲ್ಲಿ ಕೊಂಚ ಮುಗುಳನಗೆಯು ಜುಳಿತಾಡಿದಹೂ ತೋರಿ ದಂತಾಯಿತು.

"ಗುಲ್‌ಬಾಯಿ, ಇದೆಲ್ಲ ಹಾಗಿರಲಿ. ಇಂದು ನಾಟಕದವರು ಯಾವ ಪ್ರಯೋಗವನ್ನು ಮಾಡತಕ್ಕವರು ?" ಎಂದು ಮಾಧವರಾಯರು ವಿಷ ಯಾಂತರವನ್ನು ಮಾಡಲಿಚ್ಛಿಸಿ ಕೇಳಿದರು.

"ಇಂದು ಮಹಾರಾಷ್ಟ್ರ ಅಭಿನವ ನಾಟಕ ಮಂಡಳಿಯವರ 'ವಿನೋದ' ನಾಟಕದ ಪ್ರಯೋಗವಿರುವದು, ನಿಮಗೆ ಗೊತ್ತೇ ಇಲ್ಲನೇನು ? ಊರತುಂಬ ಹಸ್ತಪತ್ರಿಕೆಗಳನ್ನು ಹಂಚಿದರಲ್ಲ.

"ವಿನೋದ!" ಎಂದು ಉದ್ಗಾರ ತೆಗೆದು ಮಾಧವರಾಯರಂದರು : "ಗುಲ್‌ಬಾಯಿ, ವಿನೋದ ನಾಟಕದಲ್ಲಿ ಕಥಾಭಾಗವಿಲ್ಲ; ನೀತಿಯ ಮಾತು ಗಳಿಲ್ಲ; ಕಲಿತುಕೊಳ್ಳತಕ್ಕ ಸಂಗತಿಗಳಿಲ್ಲ. ಕೈಗೆ ಸಿಕ್ಕಿದ ಚೂರುಗಳನ್ನು ಹಾಕಿ ಹೊಲಿದ ಕಂತೆಯೇ ಅದು."

ಗುಲ್‌ಬಾಯಿಗೆ ಈ ಮಾತು ರುಚಿಸಲಿಲ್ಲ. ಅವಳು ಉದ್ರೇಕದಿಂದ ಮುಖವನ್ನೆತ್ತಿ "ಕಥಾಭಾಗ ತತ್ವನಿರೂಪಣಗಳೇ ನಿಮಗೆ ಬೇಕಾಗಿರುವಲ್ಲಿ ನೀವು ಬಿಟ್ಟುಬಿಡದಲೆ ಪುರಾಣಗಳನ್ನು ಕೇಳಿರಿ! ನಾಟಕದ ಮುಖ್ಯ ಉದ್ದೇ ಶವು ಮನೋರಂಜನವೇ ಹೊರತಾಗಿ ಮತ್ತೊಂದಿಲ್ಲ. ಅದು ಹಾಗಿರಲಿ. ನಿಮಗೆ ಮಾನ್ಯವಾಗಿರುವ ಸೌಭದ್ರ ನಾಟಕದಲ್ಲಿ ಅಂಗಭೂತವಾಗಿರುವ ನೀತಿತತ್ವಗಳಾವವು ? ಯಾಕೆ, ತೊಂದರೆಯಲ್ಲಿ ಬಿದ್ದಿರುವಿರೇನು ?" ಎಂದು ನುಡಿದಳು.

ಮಾಧವರಾಯರು ಮುಗುಳುನಗೆ ನಕ್ಕು "ಗುಲ್‌ಬಾಯಿ, ನಾಟಕ ದಲ್ಲಿ ಕೇವಲವಾದ ಮನೋರಂಜನವನ್ನೇ ಹುಡುಕುವವರಾದ ನಿಮಗೆ ಬೇರೆ ಸಂಗತಿಗಳ ಅರಿಕೆಯಾಗುವದೆಂತು ? ನೀವಿನ್ನೂ ಚಿಕ್ಕವರು. ಈ ವಿಷಯವು

ಸದ್ಯಕ್ಕೆ ಹಾಗಿರಲಿ.” ಎಂದು ನುಡಿದು ಗುಲ್‌ಬಾಯಿಯ ಉತ್ಸಾಹವನ್ನೆಲ್ಲ ಕೆಡಿಸಿಬಿಟ್ಟರು.

ಮಾಣಿಕಬಾಯಿಯು ಮಧ್ಯದಲ್ಲಿಯೇ ಬಾಯಿಹಾಕಿ ಹೇಳಿದ್ದು: “ವಿನೋದ ನಾಟಕದ ಮೇಲೆ ಗುಲ್‌ಬಾಯಿಯ ಮನಸ್ಸು ಇಷ್ಟೇಕೆಂಬ ದನ್ನು ಹೇಳುತ್ತೇನೆ ಕೇಳಿರಿ. ನಾಟಕದಲ್ಲಿ ಪಿಯಾನೋ ಬಾರಿಸುವವನು ಬಲು ಇಂಪಾಗಿ ಬಾರಿಸುವನಂತೆ; ನಾಯಕ ನಾಯಿಕೆಯರು ಬಲು ಮಧುರವಾಗಿಯೂ ಶಾಸ್ತ್ರೋಕ್ತವಾಗಿಯೂ ಹಾಡುವರಂತೆ. ಗಾನಪ್ರಿಯ ರಾದ ನಮ್ಮ ಬಾಯಿಯವರು ನಾಟಕವೆಂದರೆ ಮೂಗು ಕೊಯ್ಯಿಸಿಕೊಳ್ಳು ತ್ತಾರೆ.”

“ಹೆಚ್ಚಿನಾಕೆ ನೀನು ಮಾಣಿಕಬಾಯಿ” ಎಂದು ಗುಲ್‌ಬಾಯಿಯು ಮಾಣಿಕಳನ್ನು ನಿಷೇಧಿಸಿ ನನ್ನನ್ನು ಕುರಿತು ಅಂದದ್ದು “ಅಣ್ಣಾಸಾಹೇಬ,

रम्याणि वीक्ष्य मधुरांश्च निशम्य शब्दान् ।
पर्युत्सकीभवति यः सुखितोऽपि जंतुः ॥

ಎಂಬ ಉಕ್ತಿಯು ಸಂಪೂರ್ಣವಾದ ವ್ಯಾಪ್ತಿಯುಳ್ಳದ್ದಾಗಿದೆಯಷ್ಟೆ? ನಮ್ಮ ಮಾಣಿಕಬಾಯಿಯು ರಾಗಜ್ಞಾನದಲ್ಲಿ ಶೂಂತಳಾಗಿದ್ದರೂ ಇವಳು ಗಾನ ವಾದನಗಳನ್ನು ಕೇಳಿದಾಗಲೆಲ್ಲ “ಅಹಹಾ, ಏನು ಚಂದ ಬಾರಿಸುತ್ತಾನೆ!” “ಓ ನೋಡೆ! ಕೋಗಿಲ ಬೇರೆಯಲ್ಲ ಈಕೆ ಬೇರೆಯಲ್ಲ” ಎಂದು ಹಾವ ಭಾವಗಳನ್ನು ಮಾಡಿ ಉದ್ಗಾರ ತೆಗೆಯುತ್ತಾಳೆ. ಮತ್ತೆ ಹೇಳುತ್ತಾಳೆ, ನಾನೇ ಮೂಗು ಕೊಯ್ಸಿಕೊಳ್ಳುವೆನೆಂದು!”

ಗುಲ್‌ಬಾಯಿಯು ಸಮಯೋಚಿತವಾಗಿ ಶಾಕುಂತಲದಲ್ಲಿಯ ಶ್ಲೋಕಾ ರ್ಥವನ್ನು ಉದಹರಿಸಿದ್ದು ಕೇಳಿ ಅವಳು ಚನ್ನಾಗಿ ಕಲಿತವಳಾಗಿರಬಹು ದೆಂದು ನಾವು ತರ್ಕಿಸಿ ಅವಳ ಸ್ತುತಿ ಮಾಡಿದೆವು.

“ಯಾತರದರಿ! ನನ್ನ ಅಧ್ಯಯನವೆಷ್ಟರದು, ನಾನೆಷ್ಟರವಳು? ಹಾಗೂ ಹೀಗೂ ಮಾಡಿ ಮ್ಯಾಟ್ರಿಕ್ಯೂಲೇಶನ್ನ ಪರೀಕ್ಷೆಯೊಂದನ್ನು ದಾಟಿ ದ್ದೇನೆ. ಇಲ್ಲಿ ಕುಳಿತವರೇ ನಮ್ಮ ಗುರುಗಳು ಕಾಲೇಜದ ಅಭ್ಯಾಸವನ್ನು ಕೈಕೊಳ್ಳಬೇಕೆಂದರೆ, ಹೆಣ್ಣುಮಕ್ಕಳಿಗಾಗಿ ಸ್ವತಂತ್ರವಾದ ಕಾಲೇಜವಿಲ್ಲ. ಗಂಡುಮಕ್ಕಳ ಕಾಲೇಜಕ್ಕೆ ಹೋದರೆ ‘ಇವಳು ಹದಿನೆಂಟು ವರ್ಷದ ದೊಡ್ಡ

ಹೆಂಗಸಾಗಿದ್ದರೂ ಇವಳಿಗಿನ್ನೂ ಮದುವೆ ಇಲ್ಲವೆಂದು ಕುಚೇಷ್ಟೆ ಮಾಡು ತ್ತಾರೆ."

"ಇನ್ನೂ ನಿಮ್ಮ ಮದುವೆಯಾಗಿಲ್ಲವೆ ? ಏಕೆ ? ಕೇಳಿದ್ದಕ್ಕೆ ಕ್ಷಮೆ ಇರಲಿ" ಎಂದು ನಾನು ಕೇಳಿಕೊಂಡೆನು.

ಗುಲ್‌ಬಾಯಿಯು ಮಂದಸ್ಮಿತೆಯಾಗಿ "ಇಷ್ಟಕ್ಕೇಕೆ ಕ್ಷಮೆ ಅಣ್ಣಾ ಸಾಹೇಬ ? ಮದುವೆಯಾದ ಕೂಡಲೆ ಪತಿರಾಯರ ಮನೆಯ ವಾರಂಟು ಬಂದಿತೇ ! ಬಳಿಕ ವಿದ್ಯಾರ್ಜನವೆಲ್ಲಿ, ಆನಂದ ವಿನೋದಗಳೆಲ್ಲಿ ? " ಎಂದು ನುಡಿದಳು.

"ಬಹು ಸೂಕ್ಷ್ಮವಾದ ವಿಚಾರವಿದು ಗುಲ್‌ಬಾಯಿ. ಹೆಚ್ಚಾಗಿ ಮಾತಾಡಲು ನಮಗೆ ಬಾಯಿ ಬಾರದು. ಆದರೂ ಪತಿಯ ಮನೆಗೆ ಹೋದ ಮೇಲೆ ನಿಮ್ಮ ಆಕ್ಷೇಪಗಳೆಲ್ಲ ನಿರಾಧಾರವಾದವುಗಳಾಗಿ ನಿಮಗೆಯೇ ಕಾಣು ವವು" ಎಂದು ನಾನು ತೂಕದ ಮೇಲೆ ಮಾತಾಡಿದೆನು.

ನನ್ನ ಮಾತು ಕೇಳಿ ಆ ಸುದತಿಯು ಸುಮ್ಮನೆ ಮುಗುಳುನಗೆ ನಕ್ಕು ಕಿಟಕಿಯಲ್ಲಿ ಮೋರೆಯನ್ನು ಹಾಕಿ ಹೊರಗಿನ ಶೋಭೆಯನ್ನು ನೋಡುವದ ರಲ್ಲಿ ಮಗ್ನಳಾಗಿರುವಂತೆ ನಟಿಸಿದ್ದು ನೋಡಿ, ಹೊಸ ಪರಿಚಯದವರೂ ಪರ ಪುರುಷರೂ ಆದವರೊಡನೆ ಇಂಥ ಮಾತುಗಳನ್ನು ಆವಳು ಬೆಳಿಸಲಿಚ್ಛಿಸಲಿಲ್ಲ ವೆಂದು ಗ್ರಹಿಸಿ ನಾವೂ ಕೂಡ ಆ ಮಾತನ್ನು ಅಲ್ಲಿಯೇ ನಿಲ್ಲಿಸಿದೆವು. ಮುಂದೆ ಮೂರು ನಾಲ್ಕು ನಿಮಿಷಗಳ ವರೆಗೆ ಸಂಪೂರ್ಣವಾದ ಸ್ತಬ್ಧತೆಯು ವ್ಯಾಪಿಸಿ ಕೊಂಡಿತು. ಮಾಧವರಾಯರಿಗೆ ಈ ಪರಿಸ್ಥಿತಿಯು ಸೇರಲಿಲ್ಲಾದ ಕಾರಣ ಅವರು ಮೆಲ್ಲನೆ ಗುಲ್‌ಬಾಯಿಯ ಮಾಸ್ತರರನ್ನು ಕುರಿತು, "ಯಾಕೆ ಮಾಸ್ತರರೆ, ನಿಮ್ಮ ಸೊಲ್ಲೇ ಇಲ್ಲ. ತಮ್ಮ ಪರಿಚಯವಾದರೂ ನಮಗಿರ ಬೇಕೆಂದು ನಾವು ಬಯಸುತ್ತೇವೆ. ತಮ್ಮ ಅಭಿಧಾನವೇನು? " ಎಂದು ಕೇಳಿದರು.

"ನನ್ನ ಹೆಸರು ಕೇಳಿದಿರಾ ? ನನ್ನನ್ನು ಧೊಂಡೋ ವ್ಯೈರಾಳ ಫಡ್ ಫೇರೆ ಎಂದು ಕರೆಯುವರು."

ಧೋಂಡೋಪಂತ ಫಡ್‌ಫೇರೆಯವರು ತಮ್ಮ ಹೆಸರಿಗನುರೂಪವಾಗಿ ಕಲ್ಲಿನಲ್ಲಿ ಒಡೆಮೂಡಿದ ಮೂರ್ತಿಯೇ ಆಗಿ ಕಾಣಿಸುತ್ತಿದ್ದರು. ಮುಳ್ಳಾಡಿಸಿದ

ಆಸೆಯು ಕಲ್ಲಿನಂತೆ ಅವರ ಮೋರೆಯು ತುಂಬೆಲ್ಲ ಹುಳುಕು ಮೆತ್ತಿತ್ತು. ಮೆಂತೆಯನ್ನಾದರೂ ಅವರು ಅಗ್ಗ ಮಾಡಿದ್ದರು. ಮೀಸೆಯೊಡೆದ ಹೆಂಗಸಿಗಿಂತ ಕೊಂಚ ಹೆಚ್ಚಾದ ಕೂದಲುಗಳು ಅವರ ಮೇಲ್ದುಟಿಯ ಮೇಲೆ ವಿರಳವಾಗಿ ಕಾಣುತ್ತಿದ್ದವು. ಅವರ ಕಿರಿಗಣ್ಣುಗಳ ದೃಷ್ಟಿಯು ಯಾವಾಗಲೂ ನೆಲವನ್ನೇ ನೋಡುತ್ತಿರುವದಾಗಿ ತೋರಿತು. ದಪ್ಪವಾಗಿರುವ ಕೆಳದುಟಿಯ ಮೂಲಕವಾಗಿಯೂ ಕಸಿಬಿದ್ದ ಕುತ್ತಿಗೆಯ ಮೂಲಕವಾಗಿಯೂ ಧೋಂಡೋಪಂತರು ಗೊಗ್ಗರ ಧ್ವನಿಯಿಂದ ತಮ್ಮ ಹೆಸರನ್ನು ಹೇಳಬೇಕಾದರೆ ತುಸು ಪ್ರಯಾಸವನ್ನು ಹೊಂದಿದರು. ರಾ. ಘಂಡೇರೆಯವರು ಘೋರ ಸ್ವರದಲ್ಲಿ ತಮ್ಮ ಹೆಸರು ಹೇಳಿದ್ದು ಕೇಳಿ ಕುಚೇಷ್ಟೆಗಾಗಿಯೋ ಏನೋ ಹುಡುಗಾಟಿಗೆಯ ಹೊಸಪ್ರಾಯದವರಾದ ನಮ್ಮ ಶ್ಯಾಮರಾಯರು ಅವರನ್ನು ಕುರಿತು, “ಧೋಂಡೋಪಂತ, ನಿಮ್ಮ ಶಿಷ್ಯರಾದ ಈ ಗುಲ್‌ಬಾಯಿಯವರಿಗೆ ಗಾನವನ್ನಾದರೂ ನೀವೆ ಕಲಿಸುವಿರೇನು?” ಎಂದು ಕೇಳಿದರು. ವಿಪರೀತವಾಗಿರುವ ಈ ಪ್ರಶ್ನವನ್ನು ಕೇಳಿದಾಕ್ಷಣವೇ ಗುಲ್‌ಬಾಯಿಗೆ ಹುಚ್ಚು ನಗೆ ತುಂಬಿತು. ಯಥೇಷ್ಟವಾಗಿ ನಗುವಳೇ, ಅದು ಅಪ್ರಶಸ್ತವಾದ ಮಾತಾಗಿತ್ತು. ಆ ನಗೆಯನ್ನು ಬಿಗಿದುಹಿಡಿಯುವಳೇ ಅದು ಅಸಾಧ್ಯವಾಗಿತ್ತು. ಅವಳು ತನ್ನ ಮುಖವನ್ನು ಎರಡೂ ಕೈಗಳಿಂದ ಮುಚ್ಚಿಕೊಂಡು ಕಿಟಿಕೆಯ ಕಡೆಗೆ ತಿರುಗಿ ಕುಳಿತಳು. ಗುಲ್‌ಬಾಯಿಯ ಆಚರಣವನ್ನು ಕಂಡು ಶ್ಯಾಮರಾಯರ ಪ್ರಶ್ನವು ಕುಚೇಷ್ಟಾಯುತವಾಗಿರುವದೆಂದು ಶಂಕಿಸಿ, ಕುಚೇಷ್ಟೆ ಮಾಡುವಿರೇನೆಂದು ಧೋಂಡೋಪಂತರು ಕ್ರುದ್ಧರಾಗಿ ಕೇಳಿದರು.

“ಕ್ಷಮಿಸಿರಿ ಮಾಸ್ತರರೆ. ತನ್ಮೊಡನೆ ಕುಚೇಷ್ಟೆಯೇ? ತಮ್ಮ ವೇಷವನ್ನು ನೋಡಲಾಗಿ ತಾವು ಗಾನಶಾಸ್ತ್ರಿಗಳ ಮನೆತನದಲ್ಲಿ ಹುಟ್ಟಿದವರಾಗಿ ತೋರಿದ್ದರಿಂದ ಹಾಗೆ ಪ್ರಶ್ನ ಮಾಡಿದೆನು.” ಎಂದು ಶ್ಯಾಮರಾಯರು ವಿನೀತರಂತೆ ನುಡಿದರು.

ಘಂಘೇರೆಯವರ ತಲೆಯ ಮೇಲೆ ಪೇಶ್ವಾಯಿ ಕಾಲದ ಕೆಂಪು ಮುಂಡಾಸವಿತ್ತು. ಜಗನ್ನಾಥೀ ಅರಿವೆಯ ಅವರ ಉದ್ದಂಗಿಯು ಮೊಳಕಾಲ ಕೆಳಗೆ ಒಂದು ಗೇಣು ಇಳಿಬಿದ್ದಿತ್ತು. ಉಟ್ಟಿರುವ ಸೊಲ್ಲಾಪುರದ ಗಿರಣಿಯ ದೋತರವು ಕಲ್ಲು ನೀರುಗಳ ಹೊಡೆತವನ್ನು ಎರಡು ವರ್ಷಗಳ ವರೆಗೆ ಸಹಿಸಿ

ದ್ದರೂ ಹಣಿದಿದ್ದಿಲ್ಲ. ಗಾದಿಯ ಮೇಲೆ ಹಾಸುವ ಮುಗ್ಗಲಾಸಿಗೆಯಂಥ ಉರುಟಾದ ಚಾದರವನ್ನು ಅವರು ಮೈಮೇಲೆ ಹೊದ್ದುಕೊಂಡಿದ್ದರು. ಧೋಂಡೋಪಂತರು ತಮ್ಮ ವೇಷವನ್ನು ನೋಡಿಕೊಂಡರು. ಕರ್ಮ-ಧರ್ಮ ಸಂಯೋಗದಿಂದ ಅವರ ತಂದೆಯಾದ ವೈರಾಳ ಶಾಸ್ತ್ರಿಯು ಹೆಸರಾದ ಗಾಯಕನಾಗಿದ್ದನು. ಶ್ಯಾಮರಾಯರ ತರ್ಕವು ಯಥಾರ್ಥವಾಗಿರುವದು ಕಂಡು ಮಾಸ್ತರರ ಕೋಪವೆಲ್ಲ ಇಳಿದುಹೋಯಿತು. ಆದರೂ ಅವರ ಮುಖದಲ್ಲಿ ನಗೆಯ ಚಿಹ್ನವಾಗಲಿ ಮಾತಾಡುವ ಯತ್ನವಾಗಲಿ ಕಂಡು ಬರಲಿಲ್ಲ.

" ಗುಲ್‌ಬಾಯಿ, ನಿಮಗೆ ಗಾಯನವಾದನಗಳಲ್ಲಿ ಪರಿಶ್ರಮ ಉಂಟೇನು ಎಂದು ನಾನು ಕೇಳಿದೆನು.

" ಅವರ ಬೆರಳಲ್ಲಿರುವ ತಂತಿಯ ಉಗುರುಂಗುರವೇ ಸಾಕ್ಷಿಯು. ಸತಾರವನ್ನು ಬಾರಿಸುವದರಲ್ಲಿ ಅವರಿಗೆ ಪರಿಶ್ರಮವಿರುವದರಿಂದಲೇ ಅವರು ಯಾವಾಗಲು ಅದನ್ನು ತಮ್ಮ ಬೆರಳಿನಲ್ಲಿಟ್ಟುಕೊಂಡಿರುವರು. " ಎಂದ. ಶ್ಯಾಮರಾಯರು ತರ್ಕಿಸಿ ಹೇಳಿದರು.

" ಇಷ್ಟು ಸೂಕ್ಷ್ಮವಾಗಿ ಅನ್ಯರ ಅಂಗಾಂಗಗಳನ್ನು ನಿರೀಕ್ಷಿಸುವವರು ಇಲ್ಲಿ ಇರುವರೆಂದು ತಿಳಿದಿದ್ದರೆ ನಾನು ನೆನಪಿನಿಂದ ಈ ಉಂಗುರವನ್ನು ಮನೆಯಲ್ಲಿ ಬಿಟ್ಟು ಬರುತ್ತಿದ್ದೆನು.." ಎಂದು ಗುಲ್‌ಬಾಯಿಯು ನುಡಿದು ಲೀಲೆಯಿಂದ ಆ ಉಂಗುರವನ್ನು ತೆಗೆದು ತನ್ನ ರೌಗಯ ಜೇಬಿನಲ್ಲಿಟ್ಟುಕೊಂಡಳು.

ಗುಲ್‌ಬಾಯಿಯು ಉಡಿಗೆತೊಡಿಗೆಗಳ ಸೊಬಗಿನವಳೂ ಅಲಂಕಾರ ಪ್ರಿಯಳೂ ಎಂಬದು ಅವಳು ಧರಿಸಿದ ಮೇಲ್ತರದ ವಸ್ತ್ರಾಲಂಕಾರಗಳಿಂದ ಕಂಡುಬಂದಿತು. ಅವಳ ಎಗ್ಗಳವಾದ ಮಾತಿನಿಂದ ಅವಳು ದಿಟ್ಟೆಯಾದ ಹುಡಿಗೆಯೆಂದಾದರೂ ನಮ್ಮ ನಂಬಿಗೆಯಾಯಿತು. ಆದರೂ ಅವಳಲ್ಲಿ ಕಾಮಿನಿಯರ ವಿಲಾಸ-ಚೇಷ್ಟೆಗಳಿಷ್ಟುಮಾತ್ರವೂ ಇರಲಿಲ್ಲ. ನೋಡಿದರೆ, ಅವಳು ಸರ್ವಾಂಗ ಸುಂದರಿಯೂ ತುಂಬಿದ ಅವಯವಗಳುಳ್ಳವಳಾದ ತರುಣಿಯೂ ಆಗಿದ್ದಳು. ಅವಳ ಮಾತುಗಳು ಬಾಣಹೊಡೆದಂತೆ ಸರಳವಾಗಿದ್ದವಲ್ಲದೆ ಅವುಗಳಲ್ಲಿ ಕೊಂಕು-ಕೌಟಿಲ್ಯಗಳಿರಲಿಲ್ಲ. ಸುಶಿಕ್ಷಿತಳಾದ ಸ್ತ್ರೀಯು ಹೇಗೆ ನಡಕೊಳ್ಳುತ್ತಿರಬೇಕೆಂಬ ಮಾತಿನ ತಪ್ಪುತಿಳುವಳಿಕೆ

ಯಿಂದಾಗಲಿ, ಶ್ರೀಮಂತನೂ ಅಪತ್ಯವತ್ಸಲನೂ ಆಗಿರುವ ತಂದೆಯ ಆಜ್ಞೆಯಲ್ಲಿ ವಿಶೇಷವಾಗಿ ಬೆಳೆದವಳಾಗಿದ್ದ ಗುಲ್‌ಬಾಯಿಯು ಸ್ತ್ರೀಸ್ವಾತಂತ್ರ್ಯದ ಆಡಂಬರವನ್ನು ಅಧಿಕವಾಗಿ ಬೆಳಿಸಿಕೊಂಡಿರಬಹುದೆಂದು ನಾವು ತರ್ಕಿಸಿದೆವು.

ಪರರ ಅಂಗಾಂಗಗಳನ್ನು ನಿರೀಕ್ಷಿಸುವವರೆಂಬ ಆರೋಪವು ತಮ್ಮ ಮೇಲೆ ಹೊತ್ತಿತೆಂಬದನ್ನು ಅರಿತು ಶ್ಯಾಮರಾಯರು ಒಳಿತಾಗಿ ನಾಚಿಕೊಂಡು ಅಬಲೆಯರಂತೆ ಅಧೋಮುಖರಾಗಿ ಕುಳಿತರು. ಮಾಧವರಾಯರು ಅವರ ಪಕ್ಷವನ್ನು ವಹಿಸಿ "ಗುಲ್‌ಬಾಯಿ, ಶ್ಯಾಮರಾಯರ ಮೇಲೆ ನೀವು ಅನ್ಯಾಯವಾಗಿ ಆರೋಪವನ್ನು ಹೊರಿಸಿದಿರಿ. ಇವರೊಳ್ಳೇ ಗಾನಕಲಾಪಟುಗಳೂ ಸತಾರ-ರುದ್ರವೀಣಾದಿಗಳನ್ನು ಬಾರಿಸುವದರಲ್ಲಿ ಒಳ್ಳೇ ನಿಪುಣರೂ ಆಗಿರುವರು. ಅವರವರಿಗೆ ಪ್ರಿಯವಾದ ವಸ್ತುಗಳೇ ಬೇಗನೆ ಕಾಣುವವೆಂಬಂತೆ ನಿಮ್ಮ ಉಗುರುಂಗುರವು ಶ್ಯಾಮರಾಯರ ಕಣ್ಣಿಗೆ ಕಂಡಿತೇ ಹೊರತಾಗಿ, ನೀವು ಧರಿಸಿರುವ ಹಾರ-ಕಂಕಣಾದಿಗಳ ಮೇಲೆ ಅವರ ಲಕ್ಷ್ಯವಿಲ್ಲವೆಂದು ನಾನು ಹೇಳುತ್ತೇನೆ."

ಗುಲ್‌ಬಾಯಿಯು ತೊಂದರೆಯಲ್ಲಿ ಬಿದ್ದಳು. ಕೊಂಚ ವಿಚಾರ ಮಾಡಿ "ಮಾಧವರಾಯರೆ, ಕ್ಷಮಿಸಿರಿ. ಶ್ಯಾಮರಾವ್‌ಜೀಯವರಿಗೆ ಗಾನಕಲೆಯಲ್ಲಿ ಅಭಿರುಚಿಯಿರುವದೆಂದು ನಾನು ತಿಳಿದಿದ್ದಿಲ್ಲ." ಎಂದು ನುಡಿದು ಮುಗ್ಧೆಯಂತೆ ನಕ್ಕಳು.

"ಬಾಯಿ, ನಿಮಗೆ ಪಾಶ್ಚಾತ್ಯ ಜನರ ಆಚಾರ ವಿಚಾರಗಳ ಸೇರಿಕೆಯಾಗಿರುವಂತೆ ಕಾಣುತ್ತದೆ. ನೀವೂ ಗಾನಕಲಾಭಿಜ್ಞರು; ನಮ್ಮ ಶ್ಯಾಮರಾಯರೂ ಆ ಕಲೆಯಲ್ಲಿ ನಿಷ್ಣಾತರು. ನಿಮ್ಮಿಬ್ಬರಲ್ಲಿ ವಿಶೇಷವಾದ ಪರಿಚಯವಿರಬೇಕೆಂದು ನಾನು ಬಯಸಿದರೆ ಅದು ನಿಮಗೆ ಅಪ್ರಿಯವಾಗಿ ತೋರಲಿಕ್ಕಿಲ್ಲವೆಂದು ನಂಬುತ್ತೇನೆ. ನಮ್ಮ ಶ್ಯಾಮರಾಯರಂಥ ಪಿಯಾನೋವಾದನ ನಿಪುಣರು ಮಹಾರಾಷ್ಟ್ರ-ಕರ್ನಾಟಕ ದೇಶಗಳೆರಡರಲ್ಲಿಯೂ ಇಲ್ಲವೆಂದರೆ ಅತಿಶಯೋಕ್ತಿಯಾಗದು." ಎಂದು ನಾನು ಹೇಳಿದೆನು.

"ಅವಶ್ಯ ಅವಶ್ಯ! ನನಗೂ ಪಿಯಾನೋ ವಾದನವನ್ನು ಕೇಳುವ ಅಭಿಲಾಷೆ ಬಹಳ."

ಅಷ್ಟರಲ್ಲಿ ಗಾಡಿಯು ಗಕ್ಕನೆ ನಿಂತಿತು. ಪೋರ್ಟರನು "ಕೊಲ್ಹಾ

ಪೂರ ಕೊಲ್ಹಾಪೂರ" ಎಂದು ಕೂಗಿದನು.

"ಇಷ್ಟರಲ್ಲಿ ಕೊಲ್ಹಾಪುರ ಬಂತೆ?" ಎಂದು ಗುಲ್‌ಬಾಯಿಯು ಚಕಿತಳಾಗಿ ಕೇಳಿದಳು.

"ನಿಮ್ಮ ಹರಟೆಗೆ ಮುಂಬಯಿ ಪಟ್ಟಣವು ಕೂಡ ಹೇಳದೆ ಕೇಳದೆ ಬರಬಹುದು." ಎಂದು ಮಾಣಿಕಬಾಯಿಯು ನಗುತ್ತ ನುಡಿದು ತನ್ನ ಮಗುವನ್ನು ಎತ್ತಿಕೊಂಡು ಎದ್ದು ನಿಂತಳು.

ನಾವೆಲ್ಲರೂ ಕೆಳಗಿಳಿದು ಪ್ಲಾಟ್‌ಫಾರ್ಮದ ಮೇಲೆ ಬಂದೆವು. ನಾಟಕಕ್ಕೆ ಬರುವಿರೇನೆಂದು ಗುಲ್‌ಬಾಯಿಯು ನಮ್ಮನ್ನು ಕೇಳಿದಳು. ಕೆಲಸದ ಮೂಲಕ ನಮಗೆ ನಾಟಕಕ್ಕೆ ಹೋಗುವಂತಿದ್ದಿಲ್ಲ.

"ಉಪಾಯವಿಲ್ಲ. ಅಣ್ಣಾಸಾಹೇಬ ಮಾಧವರಾವ ಶ್ಯಾಮರಾವಜೀ, ನೀವು ನಾಳೆಗೆ ನಮ್ಮ ಮನೆಗೆ ದಯಮಾಡಿ ಬಂದರೆ ಒಳ್ಳೇದಾಗುವದು. ನಿಮ್ಮಂಥ ಸಜ್ಜನರ ಪರಿಚಯವೇ ದುರ್ಲಭ. ಯಾವ ಸಮಯವು ನಿಮಗೆ ಅನುಕೂಲವಾಗುವದೆಂದು ಹೇಳಿದರೆ ಆ ಸಮಯಕ್ಕೆ ನಾನು ತಮ್ಮ ಸ್ವಾಗತದ ಸಿದ್ಧತೆ ಮಾಡಿಕೊಂಡಿರುವೆನು" ಎಂದು ಮುಂದಾಗತಕ್ಕವಳಾದ ಆ ಸ್ತ್ರೀ ಕುಲಾವತಂಸೆಯು ಒಳ್ಳೇ ಆದರದೊಂದಿಗೆ ಬೆಸಗೊಂಡಳು.

"ಅವಶ್ಯ ಅವಶ್ಯ" ಎಂದು ಶ್ಯಾಮರಾಯರು ಒಳ್ಳೇ ಉತ್ಸಾಹದಿಂದ ಒಪ್ಪಿಕೊಂಡರು.

ಗುಲ್‌ಬಾಯಿ ಮುಂತಾದವರು ನೆಟ್ಟಗೆ ನಾಟಕ ಗೃಹದ ಮಾರ್ಗವಾಗಿ ನಡೆದರು. ನಾವು ನಾರಾಯಣರಾಯರ ಮನೆಗೆ ಬಂದೆವು. ನನ್ನನ್ನು ಕಂಡ ಕೂಡಲೆ ನಾರಾಯಣರಾಯರು ಸ್ನೇಹಾತಿರೇಕದಿಂದ "ಅಲಭ್ಯಲಾಭ, ಅಲಭ್ಯಲಾಭ! ಏನಿದು ರಾಯರೆ, ನಮ್ಮ ನಿಮ್ಮ ದರ್ಶನಗಳಾಗದೆ ಅನೇಕ ಶತಮಾನಗಳು ಕಳೆದುಹೋದಂತೆ ಭಾಸವಾಗುತ್ತದೆ." ಎಂದು ಉದ್ಗಾರ ತೆಗೆದರು.

"ನಾರಾಯಣರಾವ, ತಾರುಣ್ಯವೆಲ್ಲ ಅಳಿದುಹೋದ ಬಳಿಕ ಏಕತ್ರರಾದ ವಿರಹಿಗಳ ನಿರರ್ಥಕವಾದ ಸಂದರ್ಶನದಂತೆ ಸ್ನೇಹಿತರ ಸಂದರ್ಶನವಲ್ಲ. ಅದು ಯಾವಾಗಲೂ ಇಷ್ಟವೆ."

"ಕಾಲೇಜದೊಳಗಿರುವಾಗಿನ ಕುಚೇಷ್ಟಿತಗಳೆಲ್ಲ ಅಖಂಡವಾಗಿ

ಉಳಿದಿವೆ.'' ಎಂದು ಹೇಳಿ ನಾರಾಯಣರಾಯರು ನಕ್ಕರು.

"ಇನ್ನೊಂದು ಹತ್ತು ನಿಮಿಷಗಳು ಹೋಗಲಿ, ನಿಮ್ಮ ಗುಣಗಳಾದರೂ ಹೊರಬೀಳದೆ ಇರವು.''

"ಹಾಃ ಹಾಃ ಹಾ" ಎಂದು ನಕ್ಕು "ಇಂದು ಗಡಿಬಿಡಿಮಾಡಿದ ಕಾರಣವೇನು?" ಎಂದು ಮನೆಯ ಯಜಮಾನರು ಕೇಳಿದರು.

ಮಿರ್ಜಿಯಲ್ಲಿಯ ಬಂಗಲೆಯು ಬೇಕಾಗಿದೆಂಬದನ್ನು ಕೇಳಿದ ಕೂಡಲೆ ನಾರಾಯಣರಾಯರು ಸಂತೋಷದಿಂದ ಯಾಕಾಗಲೊಲ್ಲದೆಂದು ಒಪ್ಪಿಕೊಂಡು ಬಂಗಲೆಯ ಬೀಗದಕೈಯನ್ನು ಆಗಿಂದಾಗಲೇ ಕರಿಸಿ ನನ್ನ ಸ್ವಾಧೀನ ಮಾಡಿದರು. ಸಮಯೋಚಿತವಾದ ಭೋಜನವೂ ಆದರೋಪಚಾರಗಳ ಹರಟೆಯೂ ಪರಸ್ಪರರ ಗೃಹಕೃತ್ಯಗಳ ಪರಾಮರ್ಶೆಗಳೂ ಆಗುವಷ್ಟರಲ್ಲಿ ರಾತ್ರಿ ಹನ್ನೊಂದು ಗಂಟೆಯಾಯಿತು. ಸುಖನಿದ್ರೆಗೈದು ನಾವು ಬೆಳಗುಮುಂಜಾವಿನ ಗಾಡಿಗೆ ಮಿರ್ಜಿಗೆ ಹೊರಟೆವು. ನಾಳಿನ ಆದಿತ್ಯವಾರ ನಮ್ಮ ಅನುಕೂಲತೆಯನ್ನು ಅವಲೋಕಿಸುವದಕ್ಕಾಗಿ ತಾವೂ ಮಿರ್ಜಿಗೆ ಬರುವೆವೆಂದು ನಾರಾಯಣರಾಯರು ಅಭಿವಚನವನ್ನಿತ್ತರು.

ಸ್ಟೇಶನದಲ್ಲಿ ಸೆಕಂಡಕ್ಲಾಸಿನ ಡಬ್ಬಿಯೊಂದು ತೆರವೇ ಇತ್ತು. ಅದನ್ನು ನಾವು ಆಕ್ರಮಿಸಿಕೊಂಡು ಕುಳಿತು ಯಥೇಷ್ಟವಾಗಿ ಸಿಗರೆಟ್ಟು ಸೇದುತ್ತ ಕುಳಿತೆವು. ಅಷ್ಟರಲ್ಲಿ ಯುರೋಪಿಯನ್ನನಾದ ಸ್ಟೇಶನ ಮಾಸ್ತರನು ನಾವಿದ್ದಲ್ಲಿಗೆ ಬಂದು "I am sorry gentlemen, you will have to get down. This is reserved for ladies. (ಉಪಾಯವಿಲ್ಲ ರಾಯರೆ, ತಮಗೆ ಇಳಿಯಬೇಕಾಗಿರುವದು. ಇದು ಮಹಿಲಾಜನರಿಗಾಗಿ ಬೇರಿರಿಸಲ್ಪಟ್ಟ ಡಬ್ಬಿಯು)" ಎಂದು ಹೇಳಿದನು.

"ಮಹಿಲಾ ಜನರೆಲ್ಲಿ? ಸುಮ್ಮನೆ ನಮಗೇಕೆ ತೊಂದರೆ ಕೊಡುವಿರಿ?'' ಎಂದು ಶ್ಯಾಮರಾಯರು ಆಕ್ಷೇಪ ತೆಗೆದುಕೊಂಡರು.

"ಇಕೋ, ಇಲ್ಲಿಯೇ ಇಬ್ಬರಿದ್ದಾರೆ ಕಾಣಿರೋ? ಸುಮ್ಮಸುಮ್ಮನೆ ನಾನೇಕೆ ನಿಮಗೆ ತೊಂದರೆ ಕೊಡಲಿ?" ಎಂದು ಸ್ಟೇಶನ್ ಮಾಸ್ತರನು ನುಡಿಯುವಷ್ಟರಲ್ಲಿ ಗುಲ್‌ಬಾಯಿಯು ಬಂದು ನಮ್ಮನ್ನು ನೋಡಿ, ಸ್ಟೇಶನ್ ಮಾಸ್ತರನನ್ನು ಕುರಿತು "O! Never mind master, these gentlemen

are our friends. Do'nt disturb them please. (ಏನು ಚಿಂತೆ ಯಿಲ್ಲ ಮಾಸ್ತರರೆ, ಈ ಮಹನೀಯರು ನನ್ನ ಸ್ನೇಹಿತರೇ ಆಗಿರುವರು. ಕುಳ್ಳಿರಲೊಲ್ಲರೇಕೆ) ' ಎಂದು ವಿಧಿಸಿದಳು. ಶಂಭು ಸ್ವಯಂಭು ಹರರೇ ಉರುಳಾಡುವಾಗ, ಪಾಪ ಬಡ ಸ್ಟೇಶನ್ ಮಾಸ್ತರನ ಪಾಡೇನು? ಆತನು ಸುಮ್ಮನೆ ಹೊರಟುಹೋದನು. ಗುಲ್‌ಬಾಯಿ, ಮಾಣಿಕಬಾಯಿಯರು ಒಳಗೆ ಬಂದು ಒಂದು ಮಗ್ಗಲಿಗೆ ಕುಳಿತರು. ನಾವು ಮೂವರು ಮತ್ತೊಂದು ಮಗ್ಗಲಿಗೆ ಕುಳಿತೆವು.

" ಹೇಗೆ ರಾಯರೆ? ನಾನಿಲ್ಲದಿದ್ದರೆ ಸ್ಟೇಶನ್ ಮಾಸ್ತರನು ನಿಮ್ಮನ್ನು ಇಳಿಸಿಬಿಡುತ್ತಿದ್ದನು. ನಿನ್ನಿನ ಉಪಕಾರವು ಮುಟ್ಟಿತು. " ಎಂದು ಗುಲ್ ಬಾಯಿಯು ವಿನೋದಗೈದು ನುಡಿದಳು.

" ಮುಟ್ಟಿತು, ಮುಟ್ಟಿತು. ನಾಟಕವು ಹೇಗಾಯಿತು? " ಎಂದು ಮಾಧವರಾಯರು ಕೇಳಿದರು.

" ಅಪ್ರತಿಮವಾಯಿತು! ನಾಟಕವೆಂದರೆ ವಿನೋದ ನಾಟಕವೇ ನಾಟಕವು. "

" ಮೊದಲೇ ನೀವು ಅದನ್ನು ಕೊಂಡಾಡುತ್ತಿದ್ದಿರಿ; ಪ್ರತ್ಯಕ್ಷವಾಗಿ ನೋಡಿದ ಬಳಿಕೇನು ಕೇಳುವದು? ರಂಗಭೂಮಿಯ ದೀಪ್ತಿಯೇ ಬೇರೆ. " ಎಂದು ನಾನು ಆಡಿದೆನು.

" ಅಣ್ಣಾಸಾಹೇಬ, ಪಾತ್ರಗಳ ವೇಷ-ವೈಚಿತ್ರ್ಯವೇನು, ಭಾಷಾ ಸರಣಿಯೇನು, ಮಾತುಮಾತಿಗೆ ಹೊಸ ಮಾದರಿಯ ಉಪಮೆಗಳೇನು, ಎಲ್ಲವೂ ಒಳ್ಳೇ ಮನೋವೇಧಕವಾಗಿತ್ತು."

" ಪಿಸ್ಸಾ! ಅನುರಕ್ತಳಾದ ಸ್ತ್ರೀಗೆ ಟಾರ್ಪೆಡೋದ ಉಪಮೆ, ಮತ್ತೇ ತಕ್ಕೆಯೋ ತೋಫಿನ ಗುಂಡುಗಳ ಉಪಮೆ. ಗುಲ್‌ಬಾಯಿ, ಅದೆಲ್ಲ ನಿಮಗೆಯೇ ಚಂದಕಾಣಿಸಿದ್ದೀತು ನೋಡಿರಿ! " ಎಂದು ಮಾಣಿಕಬಾಯಿಯು ಹಳಿದು ನುಡಿದಳು.

ಮಿರ್ಜಿಯ ಸ್ಟೇಶನಕ್ಕೆ ಬರುವ ವರೆಗೆ ನಾಟಕದ ಮಾತೇ ಮಾತು ಗಳು. ಗಾಡಿಯಿಂದಿಳಿದು ನಾವು ಸ್ಟೇಶನ್ನದ ಹೊರಗೆ ಬಂದ ಕೂಡಲೆ ಗುಲ್‌ಬಾಯಿಯು ನಮ್ಮನ್ನು ಕರೆದು " ಅಣ್ಣಾಸಾಹೇಬ, ನೋಡಿರಿ, ಇದೇ

ನಮ್ಮ ಬಂಗಲೆಯು,'' ಎಂದು ಸ್ಟೇಶನಕ್ಕೆ ಸಮೀಪವಾಗಿರುವದೊಂದು ರಮ್ಯ ವಾದ ಮಂದಿರವನ್ನು ತೋರಿಸಿ '' ಇಂದು ಮೂರು ಘಂಟೆಗೆ ಅವಶ್ಯವಾಗಿ ದಯಮಾಡಬೇಕು ಕಂಡಿರೋ '' ಎಂದು ಪ್ರಾರ್ಥಿಸಿ ಹೊರಟುಹೋದಳು.

ನಾವು ನೆಟ್ಟಗೆ ನಮಗೆ ದೊರಕಿದ ಹೊಸ ಬಂಗಲೆಗೆ ಬಂದು ಅಲ್ಲಿ ಉಡುಗುವದು, ಹಾಸುವದು ಮುಂತಾದ ವ್ಯವಸ್ಥೆಗಳನ್ನು ಮಾಡಿಸಿದೆವು. ಬಂಗಲೆಯು ನಿಜವಾಗಿ ನಮ್ಮ ಸಾಧೀನಕ್ಕೆ ಬಂದಿರುವದೆಂಬ ನೆಚ್ಚಿಗೆಗಾಗಿ ಅಲ್ಲಿಯೇ ನಾವು ಕ್ಷಣಹೊತ್ತು ಸ್ವೇಚ್ಛೆಯಿಂದ ಕೈಕಾಲು ಚಾಚಿಕೊಂಡು ಮಲಗಿ ಸುತ್ತಲೂ ಔತ್ಸುಕ್ಯದಿಂದ ನೋಡಿದೆವು. ಕಟ್ಟಡವು ಭದ್ರವಾಗಿಯೂ ರಮಣೀಯವಾಗಿಯೂ ಕಟ್ಟಿದ್ದಾಗಿತ್ತು. ಅಲ್ಲಲ್ಲಿ ಬೆಲೆಯುಳ್ಳ ಕುರ್ಚಿ-ಮೇಜು ಗಳೂ ಪಲಂಗು-ಕೋಚಗಳೂ ಚಿತ್ರಪಟ-ಕನ್ನಡಿಗಳೂ ಒಳ್ಳೇ ವ್ಯವಸ್ಥೆಯಿಂದ ಇರಿಸಲ್ಪಟ್ಟಿದ್ದವು. ಸುತ್ತಲಿನ ಗಿಡಗಳೊಳಗಿಂದ ಹಾಯ್ದು ಬಂದಿ ರುವ ತಂಗಾಳಿಯು ಒಳ್ಳೇ ಸುಖಪ್ರದವಾಗಿತ್ತು. ಅದನ್ನೆಲ್ಲ ನೋಡಿ ದೊಡ್ಡ ದೊಂದು ಸಂಪತ್ತೇ ಪ್ರಾಪ್ತವಾದಷ್ಟು ಸಂತೋಷವು ನಮಗಾಯಿತು. ಇಳಿ ಯಲಿಕ್ಕೆ ಮುರುಕ ಧರ್ಮಸಾಲೆ ಕೂಡ ಸಿಕ್ಕದಿರುವಾಗ ಅಂಥ ಸುರಮ್ಯ ವಾದ ಮಂದಿರವನ್ನು ಕಂಡು ಸಂತೋಷವಾಗದಿರುವದೆ? ನಮ್ಮ ಜನ ರೆಲ್ಲರೂ ಬಂದು ಕೆಳಗಿನ ಮನೆಯಲ್ಲಿ ಅಡಿಗೆಯನ್ನು ಹೂಡಿದರು. ಇನ್ನೇನು ಚಿಂತೆಯಿಲ್ಲವೆಂದು ನೆನೆದು ಗುಂಡೇರಾಯರ ಸಮಾಚಾರಕ್ಕಾಗಿ ನಾವು ಔಷ ಧಾಲಯಕ್ಕೆ ನಡೆದೆವು.

ಏನಿದ್ದ ಸಮಾಚಾರವನ್ನು ನಾವು ಡಾಕ್ಟರ ಸಾಹೇಬರ ಮುಖಾಂತರ ವಾಗಿಯೇ ಅರಿತುಕೊಳ್ಳಬೇಕಾಗಿತ್ತು. ರೋಗಿಯಿದ್ದಲ್ಲಿಗೆ ಹೋಗಿ ಅವ ರನ್ನು ಮಾತಾಡಿಸಲು ನಮಗೆ ಅಪ್ಪಣೆಯಿದ್ದಿಲ್ಲ. ಗುಂಡೇರಾಯರ ಕಣ್ಣಿಗೆ ಡಾಕ್ಟರರು ಶಸ್ತ್ರಪ್ರಯೋಗವನ್ನು ಮಾಡಿ, ಗೋಡೆಗಳನ್ನೆಲ್ಲ ಹಸರು ಬಣ್ಣ ದಿಂದ ಸಾರಿಸಿದ ಕೋಣೆಯಲ್ಲಿ ಅವರನ್ನು ಮಲಗಿಸಿದ್ದರು. ಅವರ ಆರೈಕೆ ಗಾಗಿ ತಜ್ಞಳಾದ ಯುರೋಪಿಯನ್ ಸ್ತ್ರೀಯೊಬ್ಬಳೇ ಅವರ ಬಳಿಯಲ್ಲಿ ಇರತಕ್ಕವಳು. ಅವಳಾಗಲಿ, ಡಾಕ್ಟರ ವಾಲ್ಸೀಸ್ ಸಾಹೇಬರಾಗಲಿ ಇಬ್ಬರೇ ರೋಗಿಯ ಸಮೀಪಕ್ಕೆ ಹೋಗತಕ್ಕವರು. ನಾವು ನೆಟ್ಟಗೆ ಡಾಕ್ಟರರ ಬಳಿಗೆ ಹೋಗಿ ಸಮಾಚಾರವನ್ನು ಕೇಳಲಾಗಿ, ಅವರು " O! He is progress-

ing well! Good morning (ಅವರಿಗೋ, ವಾಸಿಯಾಗುತ್ತಲೇ ನಡೆದಿದೆ. ನೀವಿನ್ನು ಹೋಗಬಹುದು)" ಎಂದವರೇ ಮತ್ತೆಲ್ಲಿಗೋ ಹೊರಟುಹೋದರು.

ಮನೆಗೆ ಬಂದು ಭೋಜನವನ್ನು ತೀರಿಸಿಕೊಂಡು ತಾಂಬೂಲಾದಿಗಳನ್ನು ಸೇವಿಸಿ, ವಾಮಕುಕ್ಷಿಗಾಗಿ ಅಟ್ಟದಮೇಲೆ ಬಂದು ಅಡ್ಡಾದೆವು. ಶ್ಯಾಮರಾಯರು ಮಲಗಿದಲ್ಲಿಯೇ "ಜಗತ್ತಿನ ಇಂಗಿತ (Riddle of the Universe)" ವೆಂಬ ಪುಸ್ತಕವನ್ನೋದುವುದರಲ್ಲಿ ತೊಡಗಿದಂತೆ ಕಂಡರು. ನನಗೂ ಮಾಧವರಾಯರಿಗೂ ಬೇಗನೆ ಜಂಪು ಹತ್ತಿತು. ಕೆಲಹೊತ್ತಿನ ಮೇಲೆ ಶ್ಯಾಮರಾಯರ ಬೂಟುಗಾಲಿನ ಚಟ್ರಚಟ್ರೆಂಬ ಸಪ್ಪಳಕ್ಕೆ ನಾನು ಎಚ್ಚತ್ತೆನು. ರಾಯರು ಅಂಗಾಲಿನಿಂದ ಕುತ್ತಿಗೆಯ ವರೆಗೆ, ಪ್ರತಿಷ್ಠಿತನಾದ ಯುರೋಪಿಯನ್ನನಂತೆ, ಬೂಟು ಪ್ಯಾಂಟ್ ಕೋಟ ಜಾಕೆಟ್ ನೆಕ್‌ಟಾಯಿ ಕಾಲರ ಮುಂತಾದವುಗಳನ್ನು ಧರಿಸಿಕೊಂಡು ನಿಲುವುಗನ್ನಡಿಯ ಮುಂದೆ ನಿಂತಿದ್ದರು. ಅವರನ್ನು ಕಂಡು ನಾನು "ಏನು ರಾಯರೆ, ನಿಮ್ಮ ಕಣ್ಣಿಗೆ ಕಣ್ಣು ಹತ್ತಿದಂತೆ ಕಾಣುವದಿಲ್ಲ. ಈಗಾಗಲೇ ಈ ವೇಷವೇಕೆ?" ಎಂದು ಕೇಳಿದೆನು.

"ಗುಲ್‌ಬಾಯಿಯ ಮನೆಗೆ ಹೋಗುವ ಸಿದ್ಧತೆ ಕಾಣುತ್ತದೆ" ಎಂದು ಮಲಗಿದವರಾದ ಮಾಧವರಾಯರು ಮುಸುಗು ತೆಗೆಯದೆ ಸೂಚಿಸಿದರು.

"ಮಾಧವರಾವಜೀ, ಏಳಿರಿನ್ನು, ಚೇಷ್ಟೆ ಮಾಡಿದಂತಲ್ಲ. ಇಲ್ಲಿ ನೋಡಿರಿ, ಎರಡೂಕಾಲು ಘಂಟೆಯಾಗಿದೆ" ಎಂದು ಹೇಳಿ ಶ್ಯಾಮರಾಯರು ಜೇಬಿನೊಳಗಿಂದ ತಮ್ಮ ಚಿನ್ನದ ಗಡಿಯಾರವನ್ನು ತೆಗೆದು ತೋರಿಸಿದರು.

"ಅಯ್ಯೊ! ಗುಲ್‌ಬಾಯಿಯ ಮನೆಗೆ ಹೋಗಬೇಕಾದರೆ ಇನ್ನೂ ನಾಲ್ವತ್ತೈದು ನಿಮಿಷಗಳಿವೆ. ಇಷ್ಟೇಕೆ ಅವಸರ?" ಎಂದು ಮಾಧವರಾಯರು ಎದ್ದುಕೂಡಲು ಪ್ರಯತ್ನ ಮಾಡದೆ ಮಾತಾಡಿದರು.

"ನೀವು ಎದ್ದು ಮುಖ ತೊಳೆದುಕೊಂಡು ಪೋಷಾಕು ಮಾಡಿಕೊಳ್ಳುವಷ್ಟರಲ್ಲಿ ನಾಲ್ವತ್ತೈದು ಮಿನಿಟುಗಳಾಗಲಿ ಇಪ್ಪತ್ತೇಳುನೂರು ಸೆಕಂಡುಗಳಾಗಲಿ ಹೊರಟುಹೋಗುವವು."

ಮಾಧವರಾಯರು ಎದ್ದು ಕುಳಿತು "ನನ್ನ ಪೋಷಾಕಿಗೆ ಸಮಯವೇ ಬೇಡ. ಆ ಕೋಟು ತೊಟ್ಟುಕೊಂಡು ರುಮಾಲು ಸುತ್ತಿ ಕೊಳ್ಳಲಿಕ್ಕೆ ಎರಡೇ ನಿಮಿಷಗಳು ಸಾಕು. ರಥವನ್ನು ತರಿಸಲಿಕ್ಕೆ ಆಳಿಗೆ ಹೇಳಿರುವಿರೇನು?" ಎಂದು ಕೇಳಿದರು.

"ಹೊರಗೆ ಫೈಟನ್ (ಒಂದು ಪ್ರಕಾರದ ರಥ). ಬಂದು ನಿಂತೇ ಇದೆ. ಏಳಿರಿ."

ಮೂರು ಗಂಟೆಗೆ ಸರಿಯಾಗಿ ನಾವು ಗುಲ್‌ಬಾಯಿಯ ಮಂದಿರಕ್ಕೆ ಹೋದೆವು. ರಮಣೀಯವಾಗಿರುವ ಪುಷ್ಪೋದ್ಯಾನದ ಮಧ್ಯದಲ್ಲಿ ಮೆರೆಯುತ್ತಿರುವ ಆ ಮಂದಿರವು ಅತಿ ರಮಣೀಯವಾಗಿ ತೋರಿತು. ರಥದಿಂದಿಳಿದ ಕೂಡಲೆ ಮನೆಯ ಗುಮಾಸ್ತನು ನಮ್ಮನ್ನು ಆದರದಿಂದ ಉಪ್ಪರಿಗೆಯ ಮೇಲೆ ಕರೆದೊಯ್ದನು. ಶ್ರೀಮಂತರ ಮನೆಯೇ ಅದು. ಅಲ್ಲಿಯ ಶೋಭೆಯನ್ನು ವರ್ಣಿಸುವದೇತಕ್ಕೆ? ಗುಲ್‌ಬಾಯಿಯ ತಂದೆಯವರಾದ ಲಲ್ಲೂಭಾಯಿಯವರು ಗುಜರಾಥೀ ಸಭ್ಯಗೃಹಸ್ಥರಿಗುಚಿತವಾದ ಪೋಷಾಕುಮಾಡಿಕೊಂಡು ತೂಲಿಕಾಮಯವಾದ ಆರಾಮಕುರ್ಚಿಯಲ್ಲಿ ಕುಳಿತಿದ್ದರು. ಅವರ ಬಳಿಯಲ್ಲಿ ಅವರ ಮುಖ್ಯ ಮನೀಮನಾದ ಶ್ಯಾಮಲದಾಸನೂ ಅವನ ಹೆಂಡತಿಯಾದ ಮಾಣಿಕಬಾಯಿಯೂ ಕುಳಿತಿದ್ದರು. ಲಲ್ಲೂಭಾಯಿಯವರ ಬಲಕ್ಕೆ ವಸ್ತ್ರಾಲಂಕಾರ ವಿಭೂಷಿತೆಯಾಗಿ ಕುಳಿತ ಗುಲ್‌ಬಾಯಿಯು ಮೂರ್ತಿಮತಿಯಾದ ಈಪ್ಸಿತಾರ್ಥ-ದೇವತೆಯಂತೆ ನಯನಾಭಿರಾಮೆಯಾಗಿ ಕಂಗೊಳಿಸಿದಳು. ಆ ಸುಂದರಿಯ ದಿವ್ಯವಾದ ರೂಪಕ್ಕೆ ಕೆಟ್ಟಜನರ ದೃಷ್ಟಿ ತಗಲಬಾರದೆಂದು ಅಲ್ಲೊಂದು ದೃಷ್ಟಿಯ ಗೊಂಬೆಯನ್ನು ಕುಳ್ಳಿರಿಸಿರುವರೋ ಎಂಬಂತೆ ನಮ್ಮ ಧೋಂಡೋಪಂತ ಢಂಢೇರೆಯವರ ಮಹಾಪ್ರಸ್ಥವು ಗುಲ್‌ಬಾಯಿಯ ಬಳಿಯಲ್ಲಿ ಕುಳಿತಿತ್ತು. ಗಾಯಕನೋರ್ವನು ತಂಬೂರಿಯ ಸ್ವರವನ್ನು ಸರಿಯಾಗಿ ಮಾಡುವದರಲ್ಲಿ ನಿಮಗ್ನನಾಗಿ ಕುಳಿತು, ಮದ್ದಲೆಯವನಿಗೆ ಆಗಾಗ್ಗೆ ಪೆಟ್ಟುಹಾಕಿ ತೋರಿಸೆಂದು ಸೂಚಿಸುತ್ತಿದ್ದನು.

ನಾವು ಒಳಕ್ಕೆ ಬಂದದ್ದನ್ನು ಕಂಡು ಗುಲ್‌ಬಾಯಿಯು ನಗೆಮೊಗವನ್ನು ತಾಳಿ ನಮಗೆ ಇದಿರಾಗಿ ಬಂದು ನಮ್ಮನ್ನು ತನ್ನ ತಂದೆಯ ಬಳಿಗೆ ಕರೆದೊಯ್ದು "ಇವರೇ ಆ ಸದ್‌ಗೃಹಸ್ಥರು," ಎಂದು ಹೇಳಿದಳು. ಲಲ್ಲೂ

ಭಾಯಿಯವರು ಆದರದಿಂದೆದ್ದು ನಿಂತು ನಮ್ಮ ಕರಸ್ಪರ್ಶಮಾಡಿ "ಹೀಗೆ ವಿಶ್ರಮಿಸಿಕೊಳ್ಳಬೇಕು" ಎಂದು ಹೇಳಿ ನಮಗೆ ಕುಳ್ಳಿರಲು ಕುರ್ಚಿಗಳನ್ನು ತೋರಿಸಿದರು. ನಾವು ಆಸನಸ್ಥರಾದ ಬಳಿಕ ಎಲ್ಲರೊಡನೆ ಆದರೋಪಚಾರಗಳ ಮಾತುಗಳು ನಡೆದವು.

ಗಾಯಕನು ತಂಬೂರಿಯನ್ನು ಸರಿಮಾಡುವಷ್ಟರಲ್ಲಿಯೇ ಅದರದೊಂದು ತಂತಿಯು ಥಟ್ಟನೆ ಹರಿದುಹೋಯಿತು. ಹೊಸ ತಂತಿಯನ್ನು ತರಿಸಬೇಕೆಂದು ಬಾಯಿಯವರು (ಗಾಯಕನು) ಹೇಳಿದನು.

"ಬುವಾ, ಪಿಯಾನೋದ ಸ್ವರದೊಡನೆ ಹಾಡಿರಿ. ಇನ್ನು ತಂತಿಯನ್ನು ತರಿಸಲು ಅವಕಾಶವಿಲ್ಲ. ಇಲ್ಲಿ ಬಂದಿರುವ ಮಹನೀಯರಾದ ಶ್ಯಾಮರಾಯರು ಪಿಯಾನೋ ಬಾರಿಸುವದರಲ್ಲಿ ಕುಸಲರಾದವರಂತೆ!" ಎಂದು ಹೇಳಿ ನಮ್ಮ ಶ್ಯಾಮರಾಯರನ್ನು ಕುರಿತು: "ರಾಯರೆ, ನನ್ನ ದಿಟ್ಟ ವಿಜ್ಞಾಪನೆಯನ್ನು ಮನ್ನಿಸುವಿರೆಂದು ಕೋರುತ್ತೇನೆ" ಎಂದು ಪ್ಯಾನೋಆಸನವನ್ನು ತಳಿಸಿ ಮನವೊಲಿಸುವಂತೆ ಬೇಡಿಕೊಂಡಳು.

ಒಲ್ಲೆನೆನ್ನಲು ಶ್ಯಾಮರಾಯರಿಗೆ ಎದೆ ಸಾಲದು. ಅವರು ಸುತ್ತೊಂದು ಮಾತಾಡದೆ ಪೇಟಿಯ ಮೇಲೆ ಕುಳಿತು, ಸಾ,ರಿ,ಗ,ಮ,ಪ,ಧ,ನಿ ಸಾ ಎಂದು ಸ್ವರಸ್ಥಾನಗಳ ಮೇಲೆ ಕೈಯಾಡಿಸಿ ಸ್ವರಗಳು ಸರಿಯಾಗಿವೆಯಿಲ್ಲವೋ ನೋಡಿದರು. ಅಷ್ಟರಿಂದಲೇ ಅವರು ಆ ಕಲೆಯಲ್ಲಿ ಒಳ್ಳೇ ನಿಷ್ಣಾತರೆಂಬುದು ಎಲ್ಲರಿಗೆ ತಿಳಿದುಹೋಯಿತು. ಗುಲ್‌ಬಾಯಿಯ ಮುಖದಲ್ಲಿ ಸಮಾಧಾನದ ಚಿಹ್ನವು ವ್ಯಕ್ತವಾಗಿ ತೋರಿತು. ಗಾಯಕನು "ಘೋಲನ ಮೋರೆ ಘರ ಆವೆ" ಎಂದು ಗಾನಕ್ಕೆ ಪ್ರಾರಂಭಮಾಡಿದನು. ಇದು ಪರೀಕ್ಷೆಯ ಸಮಯವೆಂದರಿತು ಶ್ಯಾಮರಾಯರು ಒಳ್ಳೇ ಮನಸ್ಸುಕೊಟ್ಟು ತಮ್ಮ ಕೌಶಲ್ಯವನ್ನೆಲ್ಲ ವೆಚ್ಚಮಾಡಿ ಬಾರಿಸಿದರು. ಗಾಯಕನಾದರೂ ಕಡಿಮೆಯವನಲ್ಲ. ಗಾಯನವು ಭರಕ್ಕೆ ಬಂದಹಾಗೆ ಹಾಡುವವನಿಗಿಂತಲೂ ಬಾರಿಸುವವನ ಜಾಣ್ಮೆಯು ಅಧಿಕವಾದದ್ದೆಂಬ ಮಾತು ಎಲ್ಲರ ಮನಸ್ಸಿಗೂ ತಟ್ಟಿತು. ಒಂದು ಸಂಧಿಯಲ್ಲಿ ಶ್ಯಾಮಲದಾಸನು ಆನಂದೋದ್ರೇಕದಿಂದ "ವಾಃವಾ, ವಾಃವಾ! ರಾವಸಾಹೇಬ, ಕ್ಯಾಬಾತ್ ಹಾಯ್!" ಎಂದು ಶ್ಯಾಮರಾಯರ ಕಡೆಗೆ ತನ್ನ ಎರಡೂ ಕೈಗಳನ್ನು ಚಾಚಿ ಸಂಭಾವಿಸಿದನು. ಶ್ಯಾಮಲದಾಸನು

ಗಾಯನಕಲಾಭಿಜ್ಞನು. ಅವನ ಉದ್ಗಾರವನ್ನು ಕೇಳಿ ಗಾಯಕನ ಹೊಟ್ಟೆ ಯಲ್ಲಿ ಮತ್ಸರವು ಹೊಕ್ಕಿತು. ಅವನು ಅಡ್ಡತಿಡ್ಡವಾಗಿ ಹಾಡಿ ಶ್ಯಾಮ ರಾಯರ ಕೈ ನಿಂದಿರಸಬೇಕೆಂದು ಜಿಗಿದಾಡಿ ಪ್ರಯತ್ನ ಮಾಡಿದರೂ ಅದೆಲ್ಲ ವ್ಯರ್ಥವಾಯಿತು. ಗಾಯಕನ ಇಂಗಿತವನ್ನರಿತು "ಬುವಾ, ಶ್ಯಾಮರಾಯ ರನ್ನು ತಪ್ಪಿಸಹೋಗಿ ನೀವೇ ಅಡ್ಡ ಹಾದಿಗೆ ಬಿದ್ದು ನಗೆಗೇಡಾಗುವಿರಿ. ಕೆಲಸವು ಸರಳವಾಗಿ ನಡೆಯಲಿ. ರಾಯರು ಹೊಟ್ಟೆ ತುಂಬಿಸಿಕೊಳ್ಳ ಲೆಂದು ಬಾರಿಸಬಂದಿಲ್ಲ. ಅವರು B. A. LL B. ಇದ್ದಾರೆ. ನಾಳೆ ಈ ಸಂಸ್ಥಾನದ ನ್ಯಾಯಾಧೀಶರಾದರೂ ಆಗುವರು." ಎಂದು ಸೂಚಿಸಲಾಗಿ ಬುವಾನವರು ಹಾದಿಗೆ ಬಂದರು. ಕೆಲಸವು ಯಥಾಪ್ರಕಾರವಾಗಿ ಸಾಗಿತು. ಗಾಯಕನು ಹಾಡುವದನ್ನು ಮುಗಿಸಿದಕೂಡಲೆ ಶ್ಯಾಮರಾಯರು ಅದೇ ಪದ ವನ್ನು ಪಿಯಾನೋದಲ್ಲಿ ಬಹು ಸುಶ್ರಾವ್ಯವಾಗಿ ಬಾರಿಸಿ, ಬೆರಗಾಗಿ ಕುಳಿತಿ ರುವ ಗುಲ್‌ಬಾಯಿಯನ್ನು ಕುರಿತು "How is that umpire ( ಹೇಗಾ ಯಿತು ನಿರ್ಣಾಯಕರೆ ? ) " ಎಂದು ಆಥ್ಯತೆಯಿಂದ ಕೇಳಿದರು.

ತಾನಾದರೂ ಉತ್ತಮಳಾದ ಬಾರಿಸುವಾಕೆಯೆಂಬ ಜಂಬವು ಗುಲ್ ಬಾಯಿಗೆ ಇತ್ತು. ಆದರೆ ಈಗ ಶ್ಯಾಮರಾಯರು ತೋರಿಸಿದ ನಿಃಸೀಮ ವಾದ ಪ್ರಾವೀಣ್ಯವನ್ನು ಕಂಡು ಅವಳ ಹೃದಯದೊಳಗಿನ ಅಭಿಮಾನವೆಲ್ಲ ಕರಗಿ ನೀರಾಗಿ ಹರಿದುಹೋಯಿತು. ತನಗೂ ಅವರಿಗೂ ಅಜಗಜನ್ಯಾಯ ವೆಂದು ತನ್ನೊಳಗೆ ತಾನೇ ಒಪ್ಪಿಕೊಂಡಳು. ಅವಳು ಅನಿವಾರ್ಯಹಕ್ಕಾಗಿ ಶ್ಯಾಮರಾಯರ ಪ್ರಶ್ನಕ್ಕೆ ಉತ್ತರ ಕೊಡಲೆಂದು ತನ್ನ ಮುಖವನ್ನು ಮೆಲ್ಲನೆ ಮೇಲಕ್ಕೆತ್ತಿ "O ! Most exquisite ( ಉತ್ತಮೋತ್ತಮ ) " ಎಂದು ಹೇಳಿದರೂ ನೆಟ್ಟನೆ ಶ್ಯಾಮರಾಯರ ಮುಖವನ್ನು ನೋಡಲು ಅವಳಿಗೆ ಧೈರ್ಯ ಸಾಲಲಿಲ್ಲ.

ಆಗ ಲಲ್ಲೂಭಾಯಿಯವರು ಎದ್ದು ಶ್ಯಾಮರಾಯರ ಬಳಿಗೆ ಬಂದು ಅವರ ಹಸ್ತಸ್ಪರ್ಶವನ್ನು ಮಾಡಿ "ರಾವಸಾಹೇಬ, ನಮ್ಮ ಗುಲ್‌ಬಾಯಿಯು ಅನ್ಯರ ಸ್ತುತಿಮಾಡಿದ್ದನ್ನು ನಾನು ಇದೇ ಮೊದಲು ಕೇಳಿದೆನು. ಅರ್ಥಾತ್ ನಿಮ್ಮಂಥ ವಾದನ ಕಲಾಪ್ರವೀಣರು ದುರ್ಲಭರೆಂಬದರಲ್ಲಿ ಸಂದೇಹವಿಲ್ಲ." ಎಂದು ಮನಃಪೂರ್ವಕವಾಗಿ ನಮ್ಮ ಮಿತ್ರನನ್ನು ಸಂಭಾವಿಸಿದರು.

ಗಾಯನವಾದ ಬಳಿಕ ಉಪಹಾರಕ್ಕೆ ಪ್ರಾರಂಭವಾಯಿತು. ಅಂಜೂರಿ, ದ್ರಾಕ್ಷ, ಮಾವು, ನಾರಿಂಗ ಮುಂತಾದ ಫಲಗಳೂ ಒಡೆ, ಚಕ್ಕುಲಿ, ಗುಳ್ಳೋರಿಗೆ ಮುಂತಾದ ಪದಾರ್ಥಗಳೂ ಬೆಳ್ಳಿಯ ತಟ್ಟೆಸಟ್ಟೆಗಳಲ್ಲಿ ತುಂಬಿಬಂದವು. ಗುಲ್‌ಬಾಯಿ ಮಾಣಿಕಬಾಯಿಯರೆದ್ದು ಆ ಪದಾರ್ಥಗಳನ್ನೆಲ್ಲ ನಮ್ಮ ಹರಿವಾಣಗಳಲ್ಲಿ ಒಳ್ಳೇ ಉಬ್ಬಿನಿಂದ ಬಡಿಸಿದರು. ಉಪಹಾರವು ಯಥೇಚ್ಛವಾಗಿ ಸಾಗಿತು. ವಾಚಕರೇ, ನಗಬೇಡಿರಿ. ಲಲ್ಲೂಭಾಯಿಯವರೆಂದರೆ ಗುರ್ಜರರಾಷ್ಟ್ರದೇಶದ ವಣಿಜರೆಂದು ನೀವು ತಿಳಿದಿರುವಿರಾದೀತು. ಹಾಗಲ್ಲ. ಅವರು ಆ ದೇಶದಲ್ಲಿ ಶ್ರೇಷ್ಠರೆಂದೆನಿಸಿಕೊಂಡ ನಾಗರ ಬ್ರಾಹ್ಮಣರ ವರ್ಗಕ್ಕೆ ಸೇರಿದವರು. ಇಷ್ಟು ಮಾತ್ರ ಸರಿ, ಅವರಾದರೂ ನಮ್ಮಂತೆಯೂ ನಮ್ಮ ಸ್ನೇಹಿತರಂತೆಯೂ ಸುಧಾರಣಾಪ್ರಿಯರು. ಇಲ್ಲವಾದರೆ ನಾಗರ ಬ್ರಾಹ್ಮಣರು ನಮ್ಮ ಬ್ರಾಹ್ಮಣರೊಡನೆ ಉಣ್ಣುವದಿಲ್ಲ; ನಾವು ಅವರೊಡನೆ ಉಣ್ಣುವದಿಲ್ಲ.

ಫಲಾಹಾರ ತಾಂಬೂಲ ಗಂಧಪುಷ್ಪಗಳ ಸಮರ್ಪಣಗಳಾದ ಬಳಿಕ ನಾವು ನಮ್ಮ ಮನೆಗೆ ಹೋಗಲು ಯಜಮಾನರ ಅಪ್ಪಣೆ ಕೇಳಿದೆವು. ಲಲ್ಲೂಭಾಯಿಯವರೆದ್ದು ನಿಂತು ಕೈಜೋಡಿಸಿ "ತಮ್ಮ ಪರಿಚಯದಿಂದ ನಾನು ಕೃತಾರ್ಥನಾಗಿರುವೆನು. ಹೇಗೋ ತಾವಿನ್ನು ನಮ್ಮ ಸ್ನೇಹಿತರಾಗಿರುವಿರಿ. ಕೂಡಿದಾಗ ಈ ಮನೆಗೆ ಬಂದು ಹೋಗುತ್ತಲಿರಬೇಕೆಂದು ಪ್ರಾರ್ಥಿಸುತ್ತೇನೆ" ಎಂದು ಬಹು ಸೌಜನ್ಯಯುತರಾಗಿ ಹೇಳಿಕೊಂಡರು. "ನಾಳಿಗೆ ನಮ್ಮ ಮನೆಯಲ್ಲಿ ತಾವೆಲ್ಲರೂ ತಮ್ಮ ಪಾದಧೂಳಿಯನ್ನು ಕೆಡಹುವಿರೆಂದು ಬೇಡಿಕೊಳ್ಳುತ್ತೇವೆ" ಎಂದು ನಾನೂ ಕೇಳಿಕೊಂಡೆನು. ಅದಕ್ಕೆ ಅವರಾದರೂ ಒಪ್ಪಿಕೊಂಡರು. ನಾವು ನಮ್ಮ ಮನೆಗೆ ಬಂದೆವು

ಲಲ್ಲೂಭಾಯಿಯವರೂ ಅವರ ಮನೆಯವರಾದ ಗುಲ್‌ಬಾಯಿ ಮುಂತಾದವರೂ ಇಂದು ನಮ್ಮ ಮನೆಗೆ ಬರುವರೆಂದು ಅವರ ಸ್ವಾಗತಕ್ಕಾಗಿ ನಾವು ಬಹುಪರಿಯಾಗಿ ವ್ಯವಸ್ಥೆಗಳನ್ನು ಮಾಡಿದ್ದೆವು. ಮುಖ್ಯವಾಗಿ ನಾವಿರುವ ಬಂಗಲೆಯು ಪ್ರಶಸ್ತವಾಗಿಯೂ ಹಾಸಿಗೆ ದಿಂಬ ಕುರ್ಚಿ ಮೇಜು ಕೋಚಗಳಿಂದ ಪರಿಷ್ಕೃತವಾಗಿಯೂ ಇತ್ತು. ಉಪಹಾರದ ವ್ಯವಸ್ಥೆಯನ್ನಾದರೂ ನಮ್ಮ ಅಡಿಗೆಯವನು ಬಲು ಚನ್ನಾಗಿ ಮಾಡಿದ್ದನು. ತಾಂಬೂಲ

ಹಾರತುರಾಯಿಗಳಿಗೆ ಮಿರ್ಜಿಯ ಗ್ರಾಮವು ಆಗರವೇ ಆಗಿತ್ತು. ನಮ್ಮ ಸತ್ಕಾರಕ್ಕೆ ಮೆಚ್ಚಿದವರಾಗಿ ಲಲ್ಲೂಭಾಯಿಯವರು ನಮ್ಮೊಡನೆ ಯಥೇಚ್ಛವಾಗಿ ಹರಟೆಯನ್ನು ಬಿಚ್ಚಿದರು. ಅತ್ತಿತ್ತ ಸುತ್ತಾಡಿ ಹರಟೆಯು ಅಶ್ವಮೇಧದ ಕುದುರೆಯಂತೆ ಸ್ವೇಚ್ಛೆಯಿಂದ ಸ್ತ್ರೀಸ್ವಾತಂತ್ರ್ಯದ ವಿಷಯವನ್ನು ಪ್ರವೇಶಿಸಿತು. ಆ ವಿಷಯದ ಸ್ವಾಮಿನಿಯಾದ ಗುಲ್‌ಬಾಯಿ ಪ್ರಮಿಲೆಯು ತನ್ನ ಬತ್ತಳಿಕೆಯೊಳಗಿನ ಪ್ರಮಾಣಾಸ್ತ್ರಗಳನ್ನು ತೆಗೆತೆಗೆದು ಎಸೆಯಲಾರಂಭಿಸಿದಳು. ಆಗ ನಮ್ಮ ಶ್ಯಾಮರಾಯರು ಮುಂದರಿದು ಬಂದು "ಗುಲ್‌ಬಾಯಿ ಸ್ತ್ರೀಸ್ವಾತಂತ್ರ್ಯವೆಂದರೇನು? ಪುರುಷರೆಲ್ಲರನ್ನು ನರ್ಮದೆಯ ಆಚೆಗೆ ಅಟ್ಟಿ ಈಚೆಗೆ ನೀವೆಲ್ಲರೂ ನಿಂತುಕೊಂಡು ಪರಸ್ಪರರೊಡನೆ ಪರಸ್ಪರರ ಸಂಬಂಧವಿಲ್ಲದಂತೆ ಇರತಕ್ಕದ್ದೆಂಬದು ನಿಮ್ಮ ಅಭಿಪ್ರಾಯವೊ?" ಎಂದು ಕೇಳಿದರು.

ಈ ಚಮತ್ಕಾರವಾದ ಪ್ರಶ್ನಕ್ಕೆ ಉತ್ತರವನ್ನೀಯಲು ಗುಲ್‌ಬಾಯಿಗೆ ಸಹಸಾ ಬುದ್ಧಿ ಸಾಲದೆ ಅವಳು ಮೂಢೆಯಂತೆ ಶ್ಯಾಮರಾಯರ ಮುಖವನ್ನು ನೋಡಿ "ಹಾಗಲ್ಲ...." ಎಂದು ಉಪಕ್ರಮಿಸಿದರೂ ಮುಂದೆ ಮಾತೇ ಬರಲೊಲ್ಲವು.

"ತಿಳಿಯಿತು. ಹಾಗೆ ನಮ್ಮನ್ನು ನಿಷ್ಠುರತೆಯಿಂದ ಅಟ್ಟಿಕೊಡಲು ನಿಮಗೆ ಧೈರ್ಯವಿಲ್ಲ. ಆದರೂ ಸ್ತ್ರೀಪುರುಷರು ಒಂದೇ ಊರಿನಲ್ಲಾಗಲಿ, ಮನೆಯಲ್ಲಾಗಲಿ ಇದ್ದುಕೊಂಡರೂ ಅವರು ಅನ್ಯೋನ್ಯರ ಅರಿಕೆಯಿಲ್ಲದಂತೆ ಸ್ವತಂತ್ರರಾಗಿರಬೇಕೆಂಬದು ನಿಮ್ಮ ಅಭಿಪ್ರಾಯವು."

"ಹೀಗೆ ತೋರುತ್ತದೆ." ಎಂದು ಆಯತ್ತವಾಗಿ ಉದ್ಭವಿಸಿದ ಆಧಾರದ ಮೇಲೆ ಕಾಲೂರಿ ನಿಂತುಕೊಂಡಂತೆ ನಟಿಸಿ ಗುಲ್‌ಬಾಯಿಯು ನುಡಿದಳು.

"ಗುಲ್‌ಬಾಯಿ, ಹೀಗೆ ಮಾತಾಡಿದರೆ ನಿಮಗೆ ಅರ್ಥಶಾಸ್ತ್ರದ ನಿಯಮಗಳಾಗಲಿ ಇತಿಹಾಸದ ತತ್ತ್ವಗಳಾಗಲಿ ವ್ಯವಹಾರದ ಜ್ಞಾನವಾಗಲಿ ಚನ್ನಾಗಿ ವಿದಿತವಾಗಿಲ್ಲವೆನ್ನಬೇಕಾಗುವದು."

"ಅದೇಕೆ?" ಎಂದು ಆ ಬಾಲೆಯು ಕಿಂಚಿತ್ ಕ್ರುದ್ಧಳಾಗಿ ಕೇಳಿದಳು.

ಶ್ಯಾಮರಾಯರು ನಕ್ಕು "ಬಾಯಿಯವರೇ, ನೇಕಾರನಾಗಲಿ ಜವಳಿಯವನಾಗಲಿ ಇಲ್ಲದಿದ್ದರೆ ನಿಮಗೆ ಆ ಅಂದವಾದ ಸೀರೆಕುಪ್ಪಸಗಳು ಸಿಕ್ಕುತ್ತಿದ್ದಿಲ್ಲ. ಅಕ್ಕಸಾಲಿಗನಿಲ್ಲದಿದ್ದರೆ ನೀವು ಅಪ್ಯತೆಯಿಂದಿಟ್ಟುಕೊಂಡಿರುವ ಆ ವಜ್ರಕಂಕಣಗಳೇ ಹುಟ್ಟುತ್ತಿದ್ದಿಲ್ಲ. ಇದು ಹಾಗಿರಲಿ, ಇಂಗ್ಲಂಡ, ಫ್ರಾನ್ಸಗಳಂಥ ಸ್ವತಂತ್ರವಾದ ರಾಷ್ಟ್ರಗಳು ತಮ್ಮ ತಮ್ಮ ರಾಷ್ಟ್ರಗಳಲ್ಲಿ ಬೇಕಾದ ಸೌಕರ್ಯಗಳನ್ನು ಗಳಿಸಿಕೊಳ್ಳುತ್ತಿದ್ದರೂ ಒಂದು ರಾಷ್ಟ್ರವು ಮತ್ತೊಂದು ರಾಷ್ಟ್ರಕ್ಕೆ ಅನುಕೂಲವಾಗದಿದ್ದರೆ ಆ ಎರಡೂ ರಾಷ್ಟ್ರಗಳಿಗೂ ಅನೇಕವಾದ ತೊಂದರೆಗಳುಂಟಾಗುವವು"

ಆಗ ಲಲ್ಲೂಭಾಯಿಯವರು ತಮ್ಮ ಮಗಳನ್ನು ಕುರಿತು "ಗುಲ್, ಈ ಮಾತುಗಳನ್ನು ನೀನು ಪುಸ್ತಕಗಳಲ್ಲಿ ಓದಿಕೊಳ್ಳಲಿಲ್ಲವೇನು ?" ಎಂದು ಕೇಳಿದರು.

"ಓದಿಕೊಂಡಿದ್ದೇನೆ. ಅದಕ್ಕಾಗಿಯೇ ಈ [illegible] ನಾನು ನಿರುತ್ತರಳಾಗಿರುವೆನು."

"ಹಾಗಾದರೆ ಇನ್ನು ಸ್ತ್ರೀಸ್ವಾತಂತ್ರ್ಯವೆಂಬುದು ಹೇಗಿರಬೇಕು ಹೇಳಿರಿ. ಮದುವೆಯಾದ ಪತಿಯ ಮನೆಯಲ್ಲಿ ನೀವು ಸೇರಿಕೊಂಡು ಅವನನ್ನೇ ಹೊರಗೆ ಹಾಕಬೇಕೆನ್ನುವಿರಾ ?" ಎಂದು ಶ್ಯಾಮರಾಯರು ಕುಚೇಷ್ಟೆಗಾಗಿ ಕೇಳಿದರು.

ಗುಲ್‌ಬಾಯಿಯು ಒಳಿತಾಗಿ ನಾಚಿಕೊಂಡು ದೃಷ್ಟಿಯನ್ನು ಕೆಳಗಿರಿಸಿ "ಹಾಗಲ್ಲ, ಈ ಲೋಕದಲ್ಲಿ ಸ್ತ್ರೀಪುರುಷರು ಒಬ್ಬರೊಬ್ಬರಿಗೆ ಸಮಾನರಾದವರಲ್ಲೆ ?" ಎಂದು ಮಂದಸ್ಮಿತೆಯಾಗಿ ಕೇಳಿದಳು.

"ಈ ಮಾತಿಗೆ ನನ್ನ ಒಪ್ಪಿಗೆಯಿಲ್ಲ. ಪುರುಷನು ಹೆಂಗಸಿಗೆ ಸಮಾನನೆಂದು ಹೇಳಿದರೆ ಅದು ಅವನ ನಿಂದೆಯು."

ಶ್ಯಾಮರಾಯರು ಆಡಿದ ಈ ಮಾತಿಗೆ ಗುಲ್‌ಬಾಯಿಯು ಬಹು ವಿನೋದಪಟ್ಟು ನಕ್ಕು "ಸ್ತ್ರೀಯು ಪುರುಷನಿಗೆ ಸಮಾನಳೆಂದು ಹೇಳಿದರಾದರೂ ಒಪ್ಪುವಿರೋ ಇಲ್ಲವೊ ?" ಎಂದು ಕೇಳಿದಳು.

"ಸ್ತ್ರೀಯು ಪುರುಷನಿಗೆ ಸಮಾನಳೇ ಆಗಿದ್ದ ಪಕ್ಷದಲ್ಲಿ ಹಾಗೆ ಒಪ್ಪಬಹುದು. ಪುರುಷರೊಡನೆ ಸಮಾನತೆಯನ್ನು ಪಡೆದರೆ ನೀವು ಧನ್ಯರಾಗು

ವಿರಷ್ಟೆ? ನಿಮ್ಮ ಸುಂದರವಾದ ಮುಖವು ಚಂದ್ರನಿಗೆ ಸಮಾನವಾಗಿರುವ ದೆಂದು ಹೇಳಿದರೂ ನೀವು ಧನ್ಯರಾಗುವಿರಿ. ಆದರೆ ಏನು ಮಾಡಿದರೂ ನಿಮ್ಮ ಮುಖವು ಚಂದ್ರಮಂಡಲವಾಗದೆಂಬದನ್ನು ಮಾತ್ರ ನೀವು ಒಪ್ಪಿ ಕೊಳ್ಳಲೇಬೇಕು."

"ಅಂದರೆ ಸ್ತ್ರೀಯರೆಲ್ಲರೂ ನಿಮ್ಮ ಚರಣದಾಸಿಯರೆಂದು ನೀವು ತಿಳು ಕೊಂಡಿರುವಿರಾಗಿ ತೋರುತ್ತದೆ!" ಎಂದು ಗುಲ್‌ಬಾಯಿಯು ಕೋಪ ವನ್ನು ತಾಳಿ ಕೇಳಿದರೂ ಅಪಜಯದಿಂದ ಅವಳ ಮುಖವು ಸೋತು ಬಾಡಿ ಹೋಗಿತ್ತು.

"ಹಾಃ ಹಾಃ! ನಮ್ಮ ಉಪಕಾರಕ್ಕಾಗಿ ನೀವು ಹೀಗೆ ಹೇಳಬೇಕಾ ಗಿಲ್ಲ. ನಿಮ್ಮ ಮಾತೆಯವರನ್ನು ಮೊದಲುಮಾಡಿಕೊಂಡು ಜಗನ್ಮಾತೆಯ ರಾದ ಪಾರ್ವತೀ ಲಕ್ಷ್ಮೀದೇವಿಯರು ಕೂಡ ತಾವು ತಮ್ಮ ಪತಿರಾಯರ ಚರಣದಾಸಿಯರೆಂದು ಒಪ್ಪಿಕೊಂಡಿರುವರು. ಇನ್ನು ನೀವು ಒಬ್ಬ ಗುಣ ಹೀನೆಯನ್ನಾಗಲಿ ಚಂಡಿಯನ್ನಾಗಲಿ ನಿಮ್ಮ ಗುರುವನ್ನಾಗಿ ಮಾಡಿಕೊಂಡರೆ ನನ್ನ ಯತ್ನವಿಲ್ಲ."

ಲಲ್ಲೂಭಾಯಿಯವರು ಈ ಮಾತು ಕೇಳಿ ಉದ್ರೇಕದಿಂದ ಚಪ್ಪಳಿ ಹೊಡೆದು ಅಂದದ್ದು: "ವಾಃವಾಃ! ಈ ವಾದದ ನಿರ್ಣಯವಾದಂತಾಯಿತು. ಇತಿಶ್ರೀ ಗುಲ್‌ಬಾಯಿ ಶ್ಯಾಮರಾವ ಸಂವಾದೇ ಶ್ಯಾಮರಾವ ವಿಜಯೋ ನಾಮ ಪ್ರಥಮೋಧ್ಯಾಯಃ! ಇಂಥದೇ ಬೇರೊಂದು ವಾದವನ್ನು ಮತ್ತೊಂದು ಪ್ರಸಂಗದಲ್ಲಿ ತೆಗೆಯೋಣ."

ತನ್ನ ತಂದೆಯು ಕೂಡ ಪರಪಕ್ಷಕ್ಕೆ ಸೇರಿದ್ದು ಕಂಡು ಗುಲ್‌ಬಾ ಯಿಯು ನಿರ್ವಿಣ್ಣಳಾದಳು. ಅವಳ ಮುಖದಲ್ಲಿಯ ಅಹ್ಮತೆಯೆಲ್ಲ ಅಳಿದು ಹೋಗಿ ಅಲ್ಲಿ ಲಜ್ಜೆಯ ಅಧಿಷ್ಠಾನವು ನಿರಂತರವಾಗಿ ಸ್ಥಾಪಿತವಾಯಿತು. ವಿಷಾದದ ಭರಕ್ಕಾಗಿ ಅವಳು ಅವನತಮುಖಿಯಾಗಿ ಸುಮ್ಮನೆ ಕುಳಿತು ಕೊಂಡಳು. ಶ್ಯಾಮರಾಯರು ಅವಳ ಸ್ಥಿತಿಯನ್ನು ಕಂಡು ಕನಿಕರವುಳ್ಳವ ರಾಗಿ ಅವಳ ಮನಸ್ಸಿಗೆ ಉತ್ಸಾಹ ಬರಲೆಂದು ಚಿಂತಿಸಿ ಅಂದದ್ದು:

"ಗುಲ್‌ಬಾಯಿ, ಪತಿಯಲ್ಲಿ ಪತ್ನಿಯ ದಾಸೀಭಾವವು ಸ್ಥಾಪಿತ ವಾಯಿತೆಂದು ನೀವು ವಿಷಾದಪಡಬೇಡಿರಿ. ಪ್ರೇಮದ ಪರವಶತೆಗಾಗಿ ಉತ್ತಮೆ

ಯರಾದ ಸತಿಯರು ತಾವು ತಮ್ಮ ಪತಿಯ ದಾಸಿಯರೆಂದು ಹೇಳುವದು ಆದರಮೂಲವಾದ ಮಾತು. ಪ್ರೀತಿಯುತನಾದ ಪತಿಯು ಕೂಡ ತಾನು ತನ್ನ ಅರ್ಧಾಂಗಿಯ ದಾಸನೆಂದು ಹೇಳಿಕೊಂಡಿರುವದನ್ನು ನೀವು ಪುರಾಣೇತಿಹಾಸಗಳಲ್ಲಿಯೂ, ಕಾವ್ಯನಾಟಕಗಳಲ್ಲಿಯೂ ಓದಿರಬಹುದು. ಇದು ಹಾಗಿರಲಿ, ಸ್ತ್ರೀಯರು ಪುತ್ರವತಿಯರಾದರೆಂದರೆ ಅವರ ಯೋಗ್ಯತೆಯು ಮಿತಿ ಮೀರಿ ಬೆಳೆಯುವದು. ಸಮರವಿಜಯಿಯಾದ ವೀರನಾಗಲಿ, ಭೂಮಂಡಲವನ್ನಾಳುವ ಸಾರ್ವಭೌಮನಾಗಲಿ, ಅವನು ತನ್ನ ಮಾತೆಯನ್ನು ಪರದೈವತವೆಂದರಿತು ನಿತ್ಯದಲ್ಲಿಯೂ ಪೂಜಿಸುತ್ತಾನೆ. ಮೊದಲು ತಾಯಿಯನ್ನು ಪೂಜಿಸೆಂದೂ ಅನಂತರದಲ್ಲಿ ತಂದೆಯನ್ನು ಪೂಜಿಸೆಂದೂ ಗುರುಮಂತ್ರವು (ಶಿಕ್ಷಾ) ನಮಗೆ ಆಜ್ಞಾಪಿಸುತ್ತಿರುವದರಿಂದ ತಂದೆಗಿಂತಲೂ ತಾಯಿಯ ಯೋಗ್ಯತೆಯು ಹೆಚ್ಚಾಗಿರುವದು ಶಾಸ್ತ್ರಸಮ್ಮತವಾದ ಮಾತು. ತಂದೆಗೆ ವಿರೋಧಿಯಾಗಿದ್ದ ಅಲೆಕ್ಝಾಂಡರ ಬಾದಶಹನು ತನ್ನ ತಾಯಿಯ ದಾಸಾನುದಾಸನು. ಆ ಬಾದಶಹನು ದಿಗ್ವಿಜಯಕ್ಕಾಗಿ ಹೊರಗೆ ಹೊರಟಾಗ ತನ್ನ ರಾಜ್ಯದ ವ್ಯವಸ್ಥೆಯನ್ನು ತನ್ನ ಮುಖ್ಯಪ್ರಧಾನನಾದ ಫಾರ್ಮೆನಿಯೋನ ಕೈಯಲ್ಲಿ ಕೊಟ್ಟು ಹೋಗಿದ್ದನು. ಆದರೆ ಬಾದಶಹನ ತಾಯಿಯು ರಾಜ್ಯಕಾರಭಾರದಲ್ಲಿ ಆಗಾಗ್ಗೆ ಕೈಹಾಕುತ್ತಿದ್ದಳಾದ ಕಾರಣ ಅವಳ ವಿರುದ್ಧವಾಗಿ ಫಾರ್ಮೆನಿಯೋನು ಅನೇಕವಾದ ಪತ್ರಗಳನ್ನು ಬಾದಶಹನಿಗೆ ಬರೆದನು. ಆಗ ಅಲೆಕ್ಝಾಂಡರನು ಫಾರ್ಮೆನಿಯೋನಿಗೆ ಒಂದೇ ಉತ್ತರವನ್ನು ಕೊಟ್ಟಿದ್ದೇನೆಂದರೆ 'ಫಾರ್ಮೆನಿಯೋ, ನನ್ನ ತಾಯಿಯ ಕಣ್ಣೀರಿನ ಒಂದೇ ಹನಿಯು ನೀನು ಬರೆದ ಸಾವಿರ ಪತ್ರಗಳನ್ನೆಲ್ಲ ಒಮ್ಮೆಲೆ ಅಳಿಸಿಬಿಡುವದು, ಗೊತ್ತಿರಲಿ.' ಇದು ಮಾತೆಯ ಅಧಿಕಾರವು; ಇದು ಮಾತೆಯ ಯೋಗ್ಯತೆಯು; ಇದೇ ಮಾತೆಯ ಧನ್ಯತೆಯು!"

ಈ ಮಾತು ಕೇಳಿ ಗುಲ್‌ಬಾಯಿಯು ಒಂದು ಬಗೆಯ ನಗೆ ತೋರಿದಳಲ್ಲದೆ ಅವಳು ಮತ್ತೊಂದು ಮಾತಾಡಲಿಲ್ಲ. ಆಗ ಮಾಧವರಾಯರು ಮುಂದಾಗಿ ಬಂದು "ಗುಲ್‌ಬಾಯಿ, ಇಷ್ಟೆಯೋ ಅಲ್ಲ. ಪತ್ನಿಯು ತಾನು ಪತಿಯ ದಾಸಿಯೆಂದು ಹೇಳುಹೇಳುತ್ತಿರುವಾಗಲೇ ಅವನನ್ನು ತನ್ನ ದಾಸನಾಗಿಯೇ ಮಾಡಿಕೊಂಡಿರುವ ಮಾತು ಎಲ್ಲ ಪತ್ನಿಯರ ಹೃದ್ಗತವು. ಬೇಕಾ

ದರೆ ಈ ನಿಮ್ಮ ಮಾಣಿಕಬಾಯಿಯ ಮುಖದಿಂದಲೇ ಕೇಳಿಕೊಳ್ಳಿರಿ.” ಎಂದು ನುಡಿದು ಕುಳಿತ್ತವರೆಲ್ಲರ ಮುಖವನ್ನು ನೋಡಿದರು.

ಲಲ್ಲೂಭಾಯಿಯವರು ಗಹಗಹಿಸಿ ನಕ್ಕು ಈ ಮಾತಿಗೆ ತಾವು ಸಾಕ್ಷಿಗಳೆಂದು ಹೇಳಿದರು. ಮಾಣಿಕಬಾಯಿಯು ಮುಗುಳುನಗೆಯ ಮಿಷದಿಂದ ನಿಜಸ್ಥಿತಿಯು ಹೀಗೆಯೇ ಎಂದು ಸೂಚಿಸಿದಳು. ಶ್ಯಾಮಲದಾಸನು ತನ್ನ ಹೆಂಡತಿಯಾದ ಮಾಣಿಕಬಾಯಿಯ ಮುಖವ ನೋಡಿ ಸಂತೋಷದಿಂದ ನಕ್ಕು ತಾನು ಸ್ವಸಂತೋಷದಿಂದಲೇ ತನ್ನ ಪ್ರಿಯಭಾರ್ಯೆಯ ದಾಸನಾಗಿ ಹುವೆನೆಂದು ಪ್ರತ್ಯಕ್ಷವಾದ ಸಾಕ್ಷಿಯನ್ನು ಹೇಳಿದನು. ಬಳಿಕ ಲಲ್ಲೂಭಾಯಿಯವರು ನಮ್ಮೆಲ್ಲರ ಅಪ್ಪಣೆ ತೆಗೆದುಕೊಂಡು ಸಹಪರಿವಾರವಾಗಿ ತಮ್ಮ ಮನೆಗೆ ದಯಮಾಡುವವರಾದರು.

ಬಸಂತರಾಜನ ಆಡಳಿತದ ಕಾಲವದು. ಗಿಡಬಳ್ಳಿಗಳೆಲ್ಲ ಹೊಸ ತಳಿರು ಹೂವೊಗ್ಗೆಗಳನ್ನಾಂತು ಸೊಬಗಿನಿಂದ ಜಗಜಗನೆ ಹೊಳೆಯುತ್ತಿದ್ದವು. ಗಿಳಿ ಕೋಗಿಲೆ ಮುಂತಾದ ಚಲುವಕ್ಕಿಗಳು ಇನಿದಾದ ಸರಗೈದು ಉಬ್ಬಿನಿಂದ ಹಾಡುತ್ತಿದ್ದವು. ಮುಂಜಾವಿನ ಎಳೆಬಿಸಿಲಿನ ಹೊಂಬಣ್ಣದಿಂದೊಪ್ಪುವ ಹಸಿರು ಬಣ್ಣದ ಹೊಸ ಸೀರೆಯನ್ನುಟ್ಟು ಒಯ್ಯಾರದಿಂದ ಮೆಲ್ಲಡಿಗಳನ್ನಿಕ್ಕುತ್ತ ಅತ್ತಿತ್ತ ಸುಳಿದಾಡಿ ತನ್ನ ಐಸಿರಿಯನ್ನು ಕಂಡು ಹಿಗ್ಗಿ ಮುಗುಳುನಗೆದೋರುತ್ತಿರುವ ಬನಸಿರಿಯ ಚಲುವಿಕೆಯನ್ನು ಕಂಡು ಮನಸೋತವನಾಗಿ ಮಾರುತನು ಮೆಲ್ಲನೆ ಬಂದು ಆ ಗಾಡಿಕಾರತಿಯನ್ನು ಬಿಗಿದಪ್ಪಿ ಅವಳ ಪೂಗಂಪಿನ ಮೊಗಕ್ಕೆ ಮುದ್ದಿಟ್ಟನು. ಎರಳೆನೋಟದ ಆ ಹರದೆಯು ಬೆದರಿ ನಿಂತು ತನ್ನ ಮೈಮುಟ್ಟಿ ಬಂದ ಅರಿವುಗೇಡಿ ಯಾರೆಂದು ಮುನಿಸಿನಿಂದ ಹೊರಳಿ ನೋಡಿದಳು. ಇದಿನ್ನು ಸರಿಯಲ್ಲವೆಂದು ತಂಬೆಲರನು ಆ ತಾಣವನ್ನು ಬಿಟ್ಟೋಡಿ ಗಿಡಬಳ್ಳಿಗಳನ್ನೆಡವುತ್ತ ಮುಗ್ಗುತ್ತ ಹೇಗೋ ನಮ್ಮ ಗುಲ್‌ಬಾಯಿಯು ಕುಳಿತಿರುವ ಮನೆಯಲ್ಲಿ ಹೊಕ್ಕು ಅಡಗಿಕೊಂಡನು.

ಗುಲ್‌ಬಾಯಿಯು ತನ್ನ ವಿಚಾರಗಳಲ್ಲಿಯೇ ನಿಮಗ್ನಳಾಗಿ ಹೋಗಿರುವದರಿಂದ ಅವಳಿಗೆ ಆ ಮಾರುತನ ಔದ್ಧತ್ಯವು ಕಾಣಲಿಲ್ಲ; ತನಗುಂಟಾದ ಮಾನಭಂಗವನ್ನು ಸಹಿಸದೆ ಕೋಪಯುತಳಾಗಿ ನಿಂತಿರುವ ಆ ಬನಸಿರಿಯ ಆರಕ್ತವಾದ ಮುಖದ ಶೋಭೆಯು ಕಾಣಲಿಲ್ಲ. ಗುಲ್‌ಬಾಯಿಯು ಒಂದು

ಮಾಸಿಕ ಪುಸ್ತಕವನ್ನು ತೆರೆದು ಓದುತ್ತಿರುವಂತೆ ಕಂಡರೂ ಶೂನ್ಯವಾದ ಆವಳ ದೃಷ್ಟಿಗೆ ಒಂದು ಅಕ್ಷರವಾದರೂ ತೋರಲಿಲ್ಲ. ಓದುವ ಸವ್ಯಾಸ ವನ್ನು ಬಿಟ್ಟು ಅವಳು ತನ್ನ ಕೆನ್ನೆಯು ಮೇಲೆ ಕೈಯಿಟ್ಟುಕೊಂಡು ಮಂದ ದೃಷ್ಟಿಯಿಂದ ಅತ್ತಿತ್ತ ನೋಡಿದಳು. ಬಳಿಯಲ್ಲಿಯೇ ಕುಳಿತಿರುವ ಮಾಣಿಕ ಬಾಯಿಯನ್ನು ನೋಡಿ “ಮಾಣಿಕ, ಏನು ಮಾಡುತ್ತಿರುವಿ ?” ಎಂದು ಕೇಳಿದಳು.

“ಕುಪ್ಪಸವನ್ನು ಹೊಲಿಯುತ್ತೇನೆ ಕಾಣದೆ? ಗುಲ್‌ಬಾಯಿ, ಇಂದು ನಿನ್ನ ಚಿತ್ತವೃತ್ತಿಯು ಚಮತ್ಕಾರವಾಗಿ ತೋರುತ್ತದೆ.”

“ಮಾಣಿಕ, ನಾನೊಂದು ಪ್ರಶ್ನವನ್ನು ಕೇಳುತ್ತೇನೆ. ನಿರ್ವಂಚನ ದಿಂದ ಉತ್ತರವನ್ನು ಕೊಡುವಿಯಾ ?”

“ನಮ್ಮ ನಿಮ್ಮ ನಡುವೆ ವಂಚನೆಯೇ ? ಸತ್ಯವಾಗಿ ನನಗೆ ತಿಳಿ ದದ್ದನ್ನೇ ಹೇಳುವೆನು.”

“ಆರ್ಯಕನ್ನಿಕೆಯರು ಅವಿವಾಹಿತರಾಗಿ ಉಳಿಯಕೂಡದೆಂಬ ಶಾಸ್ತ್ರ ನಿರ್ಬಂಧನಕ್ಕಾಗಿ ನಮ್ಮ ವಿವಾಹವೊ ? ಅಥವಾ ನಾವು ಅಬಲೆಯರಾಗಿರು ವದರಿಂದ ನಮ್ಮ ಯೋಗಕ್ಷೇಮವನ್ನು ಸ್ವತಂತ್ರವಾಗಿ ಗಳಿಸಿಕೊಳ್ಳಲು ಅಸ ಮರ್ಥರಾಗಿರುವ ನಿಮಿತ್ತವಾಗಿ ಪುರುಷರ ದಾಸ್ಯವನ್ನು ಸ್ವೀಕರಿಸಿ ಅವರ ಹೆಂಡ ರಾಗಿರಬೇಕೋ ? ಏನು ಸಮಾಚಾರವಿದು ?” ಎಂದು ಗುಲ್‌ಬಾಯಿಯು ಚಿಂತಾಕ್ರಾಂತವಾದ ಮುಖವುಳ್ಳವಳಾಗಿ ಕೇಳಿದಳು.

“ವಿವಾಹದ ಉದ್ದೇಶಗಳಿವೆರಡೇ ಎಂದು ನೀನು ತಿಳಿದಿರುವಿಯೇನು?” ಎಂದು ಮಾಣಿಕಬಾಯಿಯು ಮೃದುಸ್ಮಿತೆಯಾಗಿ ಗುಲ್‌ಬಾಯಿಯ ಮುಖವನ್ನು ಬಿಟ್ಟುಬಿಡದಲೆ ನೋಡುತ್ತ ಕೇಳಿದಳು. ಗುಲ್‌ಬಾಯಿ ಯಾದರೂ ತನ್ನ ಮುಖದಲ್ಲಿ ಮಂದಹಾಸವನ್ನು ತಳೆದು ಮಾತಾಡದೆ ಸುಮ್ಮ ನಿದ್ದಳು.

“ಪ್ರಿಯಸಖಿ, ವಿವಾಹದ ರಹಸ್ಯವೇ ಬೇರೆ. ನವತರುಣಿಯಾದ ನಿನಗೆ ಆ ರಹಸ್ಯದ ಆಕಲನವೆಷ್ಟು ಮಾತ್ರವೂ ಇಲ್ಲವೆಂದು ನಾನು ಹೇಳಲಾರೆನು. ಆದರೂ ನನಗೆ ತಿಳಿದದ್ದನ್ನು ಹೇಳುತ್ತೇನೆ ಕೇಳು. ಭರದಿಂದ ಬೆಳೆದ ಬಳ್ಳಿಯು ಪ್ರಫುಲ್ಲಿತವಾಗಿ ಪುಷ್ಪಗಳ ಮಕರಂದವನ್ನು ಬೀರುತ್ತಿರುವಂತೆ ನವ

ತರುಣಿಯರು ಅಂಗಸೌಷ್ಠವವನ್ನು ಹೊಂದಿ ನಿಸರ್ಗಜನ್ಯವಾದ ಪ್ರೇಮವೆಂಬ ಹೃದ್ಯವಾದ ಭಾವವನ್ನಾಂತು ಸಮಾನವತಾರನೂ ಸುಂದರನೂ ಗುಣಮಣಿಯೂ ಆದ ಪುರುಷನಲ್ಲಿ ಅನುರಾಗವನ್ನು ತಳೆದು ಅವನ ಪಾಣಿಗ್ರಹಣವನ್ನು ಮಾಡುವದು ಭಗವದಾಜ್ಞೆಯು ಮಾತು. ”

“ ಮಾಣಿಕಬಾಯಿ, ಇದನ್ನೆಲ್ಲ ನಾನು ಸೇಕ್ಸಪೀಯರನ ನಾಟಕಗಳಲ್ಲಿಯೂ ಕಾಲಿದಾಸನ ಕಾವ್ಯಗಳಲ್ಲಿಯೂ ಓದಿ ಅರಿತುಕೊಂಡಿದ್ದೇನೆ. ಆದರೆ ಸ್ವೇಚ್ಛೆಯಿಂದ ವಿಹರಿಸುವ ಚಕ್ರವಾಕಿಯು ಪ್ರೇಮದಿಂದ ತನ್ನ ಪ್ರಿಯತಮನನ್ನೊಡಗೂಡುವಂತೆ ಮನುಷ್ಯರಲ್ಲಿ ನಿಜವಾದ ಅನುರಾಗವುಳ್ಳ ಸತಿ ಪತಿಯರ ಸಮಾಗಮದ ವಾರ್ತೆಯೇ ಅಪರೂಪ. ಸುಧಾರಣೆಯ ಅತ್ಯುಚ್ಚವಾದ ಶಿಖರದ ಮೇಲಿರುವ ಇಂಗ್ಲಂಡದಲ್ಲಿ ಪ್ರೀತಿವಿವಾಹಗಳಿಗೆ ಮುಕ್ತದ್ವಾರವಿರುವದೆಂದು ಹೇಳುತ್ತಾರೆ ಮಾತ್ರ! ಆದರೆ ಅಲ್ಲಿ ಕೂಡ ಸ್ವಾರ್ಥಮೂಲವಾದ ವಿವಾಹಗಳೇ ಬಹಳ. ಸುಶಿಕ್ಷಿತಳೂ ರೂಪವತಿಯೂ ಆದ ನವತರುಣಿಯೋರ್ವಳು ಎಂಬತ್ತು ವರ್ಷದ ಮುದಿಹದ್ದಾಗಿರುವ ಆಗ್ರಾಯಿಲದ ಡ್ಯೂಕನ ಕೊರಳಿಗೆ ಮಾಲೆ ಹಾಕಿದ್ದು ಸ್ವರ್ಗೀಯ ಪ್ರೇಮದ ಸಮಾಚಾರವೆ? ಆಶ್ರಮವಾಸಿನಿಯಾಗಿದ್ದುಕೊಂಡು ನಗರವಾಸಿಗಳ ಕೌಟಿಲ್ಯವನ್ನರಿಯದ ಶಕುಂತಲೆಯೆಂಬ ಮುಗ್ಧವಧುವನ್ನು ಹಿಂಡುಹೆಂಡರ ಗಂಡನಾದ (ಪರಿಗ್ರಹ ಬಹುತ್ವೇಪಿ) ದುಷ್ಯಂತನು ವಂಚಿಸಲಿಲ್ಲೆ ? ”

“ ಗುಲ್‌ಬಾಯಿ, ಇಷ್ಟು ದಿನ ನೀನು ಮದುವೆಯನ್ನೇ ಒಲ್ಲೆನೆಂದು ಹೇಳುತ್ತಿದ್ದಿ. ಈಗ ಮಾತ್ರ ನಿನಗೆ ಅನುರೂಪನಾದ ಪತಿಯು ದೊರಕಿದರೆ ನೀನು ವಿವಾಹಕ್ಕೆ ಸಿದ್ಧಳಾಗಿರುವ ಸುವಾರ್ತೆಯನ್ನು ಕೇಳಿ ನನಗೆ ತುಂಬಾ ಸಂತೋಷವಾಗಿದೆ. ”

“ ನಾನು ಅನುರೂಪನಾದ ಪ್ರಿಯನಿಗೆ ಕೈಕೊಡುವೆನೋ ಆಗ್ರಾಯಿಲದ ಡ್ಯೂಕನಂಥ ವೃತಗಜದಾವವನ್ನು ಸ್ವೀಕರಿಸುವೆನೋ ಅದರ ಗೊಡವೆ ನಿನಗೇಕೆ ? ಯುಕ್ಲಿಡನ ಪ್ರಮೇಯಗಳನ್ನು ಕುರಿತು ವಿಚಾರ ಮಾಡುವಂತೆಯೇ ಈ ಪ್ರಶ್ನದ ವಿಚಾರವನ್ನಾದರೂ ನಾನು ನಿರಭಿಲಾಷವಾಗಿ ಮಾಡುವೆನೆಂದು ತಿಳಿ. ”

“ ಯುಕ್ಲಿಡವು ನನಗೆ ತಿಳಿಯುವದಿಲ್ಲ. ಆದರೆ ಪ್ರೇಮದ ಪ್ರಮೇಯ

ಗಳನ್ನು ಕುರಿತು ಆಸ್ಥೆಯಿಂದ ವಿಚಾರ ಮಾಡುವ ಪ್ರಸಂಗವು ಪ್ರಿಯಾಭಿಲಾಷಿಯಾಗಿಯೇ ಇರುವದೆಂಬದು ರೂಢಿಯಲ್ಲಿ ಅನುಭವಜನ್ಯವಾದ ಸಂಗತಿಯು.” ಎಂದು ಮಾಣಿಕಬಾಯಿಯು ಪರಿಹಾಸಮಾಡಿ ನಕ್ಕಳು.

“ಮೋರೆ ಮೇಲೆ ಬಿಡಿಸಿಕೊಳ್ಳುವಿ, ಎಚ್ಚರಿಕೆ!” ಎಂದು ನುಡಿದು ಗುಲ್‌ಬಾಯಿಯು ತಾನು ಸಿಟ್ಟಿಗೆರುವೆನೆಂದು ತೋರಿಸಲು ಯತ್ನ ಮಾಡಿದರೂ ಅದು ಸಾಧಿಸಲಿಲ್ಲ. ಅವಳು ಸುಮ್ಮನೆ ನಕ್ಕುಬಿಟ್ಟಳು.

“ನೋಡಿದಿಯಾ ಗುಲ್, ನೀರಲ್ಲಿ ಹಾಕಿದ ಸಕ್ಕರೆಯಂತೆ ನಿನ್ನ ಹುಡುಗಾಟಿಗೆಯೆಲ್ಲ ಕರಗಿ ನೀರಾಗಿಹೋಗಿದೆ. ಪ್ರೇಮದ ಮಹಿಮೆಯೇ ಬೇರೆ”

“ಸಾಕು ಮಾಡು ಮಾಣಿಕ್, ನಾನೊಂದು ಪ್ರಶ್ನವನ್ನು ಕೇಳಿದ್ದಕ್ಕೆ ನೀನು ನನ್ನನ್ನು ಕ್ಷಮಿಸು. ನಿನ್ನ ಪತಿಯಲ್ಲಿ ನಿನ್ನ ಪ್ರೇಮವು ನಿಜವಾಗಿ ನೆಲಸಿರುವದೇನು? ಸತ್ಯವಾಗಿ ಹೇಳು.”

“ದೇವರನ್ನು ಸ್ಮರಿಸಿ ಹೇಳುತ್ತೇನೆ ಗುಲ್! ನಾನು ನನ್ನ ಪತಿರಾಯರನ್ನು ಅನನ್ಯಭಾವದಿಂದ ಪ್ರೀತಿಸುತ್ತೇನೆ. ಅವರ ಪ್ರೇಮವಾದರೂ ನನ್ನಲ್ಲಿ ದೃಢವಾಗಿ ನೆಲಿಸಿರುವದು.” ಎಂದು ಮಾಣಿಕಬಾಯಿಯು ಬಹಳೇ ಗಾಂಭೀರ್ಯದಿಂದ ಹೇಳಿದಳು.

“ಪುಣ್ಯವಂತೆಯು ನೀನು! ನಿನ್ನಂತೆಯೇ ಸುಖಿಗಳಾಗಿರುವವರು ನಮ್ಮ ದೇಶದಲ್ಲಿ ಮತ್ತಿನ್ನಾರಾದರೂ ಇರುವರೇನು?”

“ರವಷ್ಟು ಹೆಚ್ಚುಕಡಿಮೆಯ ಪ್ರಮಾಣದಿಂದ ಅನೇಕ ಜನ ಗೃಹಿಣಿಯರು ಸುಖಿಗಳಾಗಿರುವರು. ಅಸುಖಿಗಳೇ ಕಡಿಮೆಯೆಂದು ನಾನು ನಂಬುತ್ತೇನೆ.”

ಅಷ್ಟರಲ್ಲಿ ಸೇವಕಳೊರ್ವಳು ಬಂದು, ಆ ಗೆಳತಿಯರೀರ್ವರನ್ನು ಉಪಹಾರಕ್ಕೆ ಕರೆದೊಯ್ದಳು. ಅದೇ ದಿವಸವೇ ಸಾಯಂಕಾಲದಲ್ಲಿ ಮಾಣಿಕಬಾಯಿಯು ಪಾರ್ಕಿನಲ್ಲಿ (ಉಪವನದಲ್ಲಿ) ನನಗೆ ಭೆಟ್ಟಿಯಾದಾಗ ಮೇಲ್ಕಂಡ ಸಂವಾದದ ಸಮಾಚಾರವನ್ನೆಲ್ಲ ನನಗೆ ಹೇಳಿದ ಮೇರೆಗೆ ನಾನದನ್ನು ಇಲ್ಲಿ ನಿರೂಪಿಸಿದ್ದೇನೆ.

* * * *

ಮೇಲಿನ ಸಂವಾದವಾದ ಬಳಿಕ ಒಂದೆರಡು ದಿವಸಗಳಲ್ಲಿ ನಾವು ಸರ

ತಿಯ ಮೇರಿಗೆ ಲಲ್ಲೂಭಾಯಿಯವರ ಮನೆಗೆ ಹೋದೆವು. ಭಾಯಿಯವರು ಸಾಮಾಜಿಕ ಸುಧಾರಣೇಚ್ಛುಗಳಾಗಿದ್ದು ಆ ವಿಷಯವನ್ನು ಕುರಿತು ಸಂವಾದ ಮಾಡಲು ಅವರಿಗೆ ಅಪೇಕ್ಷೆ ಬಹಳ. ಆದರೋಪಚಾರದ ಮಾತುಗಳ ಪ್ರಸ್ತಾವನೆಯಾದ ಬಳಿಕ ಸ್ತ್ರೀಶಿಕ್ಷಣದ ವಿಷಯವನ್ನು ಅವರು ತೆಗೆದರು. ನಮ್ಮ ಪಕ್ಷದಲ್ಲಿ ವಾದ ನಡೆಸುವವರು ಶ್ಯಾಮರಾಯರೇ ಆಗಿದ್ದರು. ವಾದವೆಂದರೆ ಸ್ತ್ರೀಶಿಕ್ಷಣವು ಬೇಕೋ ಬೇಡವೋ ಎಂಬುದಲ್ಲ. ಸ್ತ್ರೀಶಿಕ್ಷಣದ ಇತಿಕರ್ತವ್ಯತೆ ಯಾವುದೆಂಬುದೇ ನಮ್ಮ ವಾದದ ವಿಷಯವು. ಸರಕಾರದ ಸೇವೆಯಲ್ಲಿಯ ಅಧಿಕಾರಸ್ಥರ ಸ್ಥಾನಗಳನ್ನು ಪಡೆಕೊಳ್ಳಬೇಕಾಗಿ ಸ್ತ್ರೀಯರು ಶಿಕ್ಷಣವನ್ನು ಬಯಸುವರೇನೆಂಬ ಪ್ರಶ್ನಕ್ಕೆ ಗುಲ್‌ಬಾಯಿಯು ಇಲ್ಲವೆಂದು ಹೇಳಿದಳು. ಮುನಿಸಿಪಾಲಿಟಿ ಲೋಕಲ್‌ಬೋರ್ಡ ಕಾಯಿದೇ ಕೌನ್ಸಿಲ್‌ಗಳಲ್ಲಿ ಸೇರಿ ದೊಡ್ಡ ದೊಡ್ಡ ಭಾಷಣಗಳನ್ನು ಮಾಡುವದಾದರೂ ಸ್ತ್ರೀಯರ ಮನೀಷೆಯಲ್ಲವೆಂದು ಆ ಮಹಿಳೆಯು ಒಪ್ಪಿಕೊಂಡಳು. ಶ್ಯಾಮರಾಯರ ಚಮತ್ಕಾರವಾದ ಕೂಟಪ್ರಶ್ನಗಳಿಗೆ ವಿಭ್ರಮಗೊಂಡವಳಾಗಿಯೋ, ಇಲ್ಲವೆ ಅವಳ ಅಭಿಪ್ರಾಯದಲ್ಲಿಯೋ ಆಕಸ್ಮಾತ್ತಾಗಿ ವಿಲಕ್ಷಣವಾದ ಹೆಚ್ಚುಕಡಿಮೆಯಾಗಿತ್ತೋ ಶ್ಯಾಮರಾಯರಿಗೆ ಬೇಕಾದ ಉತ್ತರಗಳನ್ನೇ ಗುಲ್‌ಬಾಯಿಯು ಕೊಡಲಾರಂಭಿಸಿದಳು. ಗೃಹಮೇಧಿಗಳ ಕರ್ತವ್ಯವನ್ನು ಸತಿಯರು ಚತುರತೆಯಿಂದ ನೆರವೇರಿಸಲು ಸಮರ್ಥರಾಗಬೇಕೆಂತಲೂ ಗೃಹಕರ್ಮಗಳನ್ನು ಮಾಡಿ, ಉಳಿದ ಕಾಲದಲ್ಲಿ ಗೃಹಿಣಿಯರು ಅಬಲಾಜನರ ಉನ್ನತಿಗೆ ಸಹಾಯಕರ್ತ್ರಿಗಳಾಗಬೇಕೆಂತಲೂ, ಕೋಮಲಾಂತಃಕರಣೆಯರಾದ ನಾರಿಯರು ರೋಗಿಗಳ ಆರೈಕೆ, ಬಡಜನರ ಪರಾಮರಿಕೆ ಮುಂತಾದ ಸಾತ್ವಿಕವಾದ ಜನಸೇವೆಯನ್ನು ಮಾಡಲು ಆಸ್ಥೆಯುಳ್ಳವರಾಗಬೇಕೆಂತಲೂ, ತಮ್ಮ ಚಿಕ್ಕಮಕ್ಕಳು ದೊಡ್ಡವರಾದ ಬಳಿಕ ಲೋಕೋಪಕಾರಕವಾದ ಮಹತ್ಕಾರ್ಯಗಳನ್ನು ನೆರವೇರಿಸಲು ಕಾರ್ಯಕ್ಷಮರಾಗುವಂತೆ ಅವರಿಗೆ ಚಿಕ್ಕಂದಿನಲ್ಲಿಯೇ ಬೌದ್ಧಿಕ ಹಾಗೂ ನೈತಿಕ ಶಿಕ್ಷಣವನ್ನು ಕೊಡಲು ಮಾತೆಯರು ಸಮರ್ಥರಾಗಿರಬೇಕೆಂತಲೂ ಸ್ತ್ರೀಯರಿಗೆ ಶಿಕ್ಷಣವನ್ನು ಕೊಡತಕ್ಕದ್ದೆಂದು ಅವಳು ನಿವೇದಿಸಿದಳು.

“ಏನಿದು ಗುಲ್, ಹೀಗೆಂತು ವಿಪರೀತವಾದ ಮಾತುಗಳನ್ನಾಡುವಿ? ‘ಮರ್ಚಂಟ್ ಆಫ್ ವೇನಿಸ್’ (ಒಂದು ನಾಟಕ) ದಲ್ಲಿಯ ಪೋರ್ಶಿಯಾ

ಎಂಬ ನಾಯಿಕೆಯಂತೆ ನೀನು ಬ್ಯಾರಿಸ್ಟರಳಾಗಬೇಕೆನ್ನುತ್ತಿದ್ದಿ. ಹಿಂದೂ ಗೃಹಿಣಿಯರ ಶೋಚನೀಯವಾದ ಸ್ಥಿತಿಯನ್ನು ಬಯಲಿಗಿರಿಸಿ ಹಿಂದುಸ್ಥಾನದಲ್ಲೆಲ್ಲ ಪ್ರೀತಿವಿವಾಹದ ಪ್ರಚಾರವನ್ನು ಮಾಡತಕ್ಕದ್ದೆಂದು ಹವಣಿಸುತ್ತಿದ್ದಿ. ನ್ಯಾಯಾಧೀಶ, ವಕೀಲ, ಮಾಲಕೀ ಅಮಲದಾರರೆಲ್ಲ ಸ್ತ್ರೀಯರೇ ಆದರೆ ಸ್ತ್ರೀಸ್ವಾತಂತ್ರ್ಯದ ಧ್ವಜವು ಹಿಂದುಸ್ಥಾನದಲ್ಲೆಲ್ಲ ಅವ್ಯಾಹತವಾಗಿ ಮೆರೆಯುವದೆಂದು ನೀನು ಪ್ರತಿಪಾದಿಸುತ್ತಿದ್ದಿ. ಅದೆಲ್ಲ ಈಗ ಎಲ್ಲಿ ಹೋಯಿತು?" ಎಂದು ಲಲ್ಲೂಭಾಯಿಯವರು ಮಗಳಲ್ಲಿ, ಉಂಟಾಗಿರುವ ವಿಚಾರಕ್ರಾಂತಿಯನ್ನು ಕಂಡು ಸಮಾಧಾನಗೊಂಡವರಾಗಿ ಕೇಳಿದರು. ಲಲ್ಲೂಭಾಯಿಯವರಿಗೆ ಸಾಮಾಜಿಕ ಸುಧಾರಣೆಗಳಲ್ಲಿ ಕೆಲವು ಸುಧಾರಣೆಗಳು ಇಷ್ಟವಾಗಿದ್ದರೂ ಸ್ತ್ರೀಸ್ವಾತಂತ್ರ್ಯದ ಅತಿರೇಕವು ಅವರಿಗೆ ಸೇರುತ್ತಿರಲಿಲ್ಲ.

ಗುಲ್‌ಬಾಯಿಯು ತನ್ನ ತಂದೆಯಾಡಿದ ಪರಿಹಾಸೋಕ್ತಿಯನ್ನು ಕೇಳಿ ಮೆಲ್ಲಗೆ ನಕ್ಕು ನಮ್ಮ ಮೂವರ ಕಡೆಗೆ ಕೈಮಾಡಿ ತೋರಿಸಿ "ಅಪ್ಪಾ, ಈ ಜನರು ಪಾದ್ರಿಗಳಂತೆ ಸಂವಾದಗೈಯುತ್ತಲೂ ಬೋಧಿಸುತ್ತಲೂ ಉಪನ್ಯಾಸಗಳನ್ನು ಮಾಡುತ್ತಲೂ ಬೆಂಬಲವಿಲ್ಲದವಳಾದ ನನ್ನನ್ನು ಸೋಲಿಸಿ ನನ್ನ ವಿಚಾರಸರಣಿಯಲ್ಲಿ ಹೆಚ್ಚುಕಡಿಮೆ ಮಾಡಿಬಿಟ್ಟಿದ್ದಾರೆ." ಎಂದು ಕೊಂಚ ನಾಚಿಕೊಂಡವಳಾಗಿ ಹೇಳಿದಳು.

"ಮಗಳೇ, ಸ್ತ್ರೀಯರು ಪುರುಷರಿಗೆ ಸಮಾನರೆಂದು ಈ ನನ್ನ ಸ್ನೇಹಿತರು ಒಪ್ಪುತ್ತಾರಾಗಿ ತೋರುತ್ತದೆ; ಆಮೇಲಾದರೂ ನಿನಗೆ ಸಮಾಧಾನವಷ್ಟೆ? ಆ ದಿವಸ ಶ್ಯಾಮರಾಯರು ವಾದದ ಮಿಷಕ್ಕಾಗಿ ಪ್ರತಿಕೂಲವಾದ ಅಭಿಪ್ರಾಯವನ್ನು ಕೊಟ್ಟಿರಬಹುದು; ಅಹುದಲ್ಲವೆ ಶ್ಯಾಮರಾವಜಿ?" ಎಂದು ಲಲ್ಲೂಭಾಯಿಯವರು ನುಡಿದರು.

"ಭಾಯಿಜೀ, ಸ್ತ್ರೀಯರು ವಿನೀತೆಯರಾಗಿ ನಡೆದುಕೊಂಡರೆ ಜಗತ್ತೇ ಅವರದಾಗಿದೆ. ವಿಲಾಯತಿಯಲ್ಲಿ ಸ್ತ್ರೀಯರ ಅಧಿಕಾರವೆಷ್ಟೇ ಇರಲಿ, ಶ್ರುತಿ-ಸ್ಮೃತಿ-ಪುರಾಣಾದಿಗಳನ್ನು ನೋಡಲಾಗಿ ಆರ್ಯಸ್ತ್ರೀಯರ ಅಧಿಕಾರವು ಅತಿ ಸ್ಪೃಹಣೀಯವಾಗಿರುವದೆಂಬದರಲ್ಲಿ ಸಂದೇಹವಿಲ್ಲ." ಎಂದು ಶ್ಯಾಮರಾಯರು ಗುಲ್‌ಬಾಯಿಯ ಮುಖದಲ್ಲಿ ದೃಷ್ಟಿಯುಳ್ಳವರಾಗಿ ಹೇಳಿದರು.

"ಆಹಾಹಾ ನಿಮ್ಮ ಸ್ಮೃತಿಗಳೇ! 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ'

ಎಂಬದು ಪರಮ ಉದಾರವಾದ ವಚನವಲ್ಲೆ ? " ಎಂದು ಗುಲ್‌ಬಾಯಿಯು ವಿನೋದದಿಂದ ನಕ್ಕು ಶ್ಯಾಮರಾಯರನ್ನು ಓರೆಗಣ್ಣಿನಿಂದ ನೋಡುತ್ತ ಕೇಳಿದಳು.

" 'ನ ಸ್ತ್ರೀಸ್ವಾತಂತ್ರ್ಯಮರ್ಹತಿ' ಎಂಬು ಪ್ರಥಮತಃ ನಾರದರ ತಲೆಯೊಳಗಿಂದ ಹೊರಟಿರಬಹುದಾಗಿ ತೋರುತ್ತದೆ. ಕಲಹಪ್ರಿಯರೇ ಅವರು. ಅವರ ಮಾತುಗಳನ್ನು ಕಟ್ಟಿಕೊಂಡೇನು ಮಾಡುವಿರಿ ? " ಎಂದು ಮಾಧವರಾಯರು ನಗುತ್ತ ನುಡಿದರು.

" ಗುಲ್‌ಬಾಯಿ, ಯತ್ರ ನಾರ್ಯಸ್ತು ಪೂಜ್ಯಂತೆ ರಮಂತೆ ತತ್ರ ದೇವತಾಃ। ಮುಂತಾದ ಆಧಾರಗಳ ಮೇಲಿಂದ ಆರ್ಯರು ತಮ್ಮ ನಾರಿಯರನ್ನು ಎಷ್ಟು ಸರಿಯಾಗಿ ಸಂಭಾವಿಸುತ್ತಿದ್ದರೆಂಬದನ್ನು ಊಹಿಸಬಹುದು. ಇಂದಿಗಾದರೂ ನಾವು ನಮ್ಮ ಹೆಂಡರನ್ನು ಗೃಹಲಕ್ಷ್ಮಿಯೆಂದು ಅಕ್ಕರದಿಂದ ಕರೆಯುತ್ತೇವೆ. 'ನ ಗೃಹಂ ಗೃಹಮಿತ್ಯಾಹುಃ ಗೃಹಿಣೀ ಗೃಹಮುಚ್ಯತೆ' ಎಂದು ಮನ್ವಾದಿಗಳು ಗೃಹಿಣಿಯನ್ನು ಬಣ್ಣಿಸಿದ್ದಾರೆ. " ಎಂದು ಶ್ಯಾಮರಾಯರು ನಿಷ್ಪಕ್ಷಪಾತವಾಗಿರುವ ತಮ್ಮ ಅಭಿಪ್ರಾಯವನ್ನು ಹೇಳಿದರು.

ಅಂದಿನ ವಿಷಯವನ್ನು ಅಲ್ಲಿಗೆಯೇ ನಿಲ್ಲಿಸಿ ನಾವು ನಮ್ಮ ಮನೆಗೆ ಬಂದೆವು. ಆ ತರುವಾಯದಲ್ಲಿ ಗುಲ್‌ಬಾಯಿಗೂ ನಮಗೂ ಆದ ಸಂವಾದಗಳಲ್ಲಿ ಈರ್ಷೆಯು ಲೇಶವಿರಲಿಲ್ಲ. ಒಂದೇ ಪಕ್ಷದವರು ತಮ್ಮತಮ್ಮೊಳಗೆ ಆಪ್ತಾಲೋಚನವನ್ನು ಮಾಡುತ್ತಿರುವಂತೆ ನಮ್ಮ ವಿಚಾರಗಳು ನಡೆದವು. ಇಷ್ಟು ಮಾತ್ರ ಸರಿ, ಗುಲ್‌ಬಾಯಿಯು ಅಂದಿನಿಂದ ನಮ್ಮೊಡನೆ ಹೆಚ್ಚಾಗಿ ಮಾತಾಡಲು ನಾಚಿಕೊಳ್ಳಲಾರಂಭಿಸಿದಳು. ಗಟ್ಟಿಗಟ್ಟಿಸಿ ಮಾತಾಡುವದನ್ನು ಬಿಟ್ಟು ಅವಳು ವಿನೀತೆಯಾಗಿ ಬಲು ಮೆಲ್ಲಗೆ ಮಾತಾಡಲಾರಂಭಿಸಿದಳು. ವಿಲಾಯತಿಯ ಸ್ತ್ರೀಯರ ದರ್ಪದ ಆವಿರ್ಭಾವಗಳೆಲ್ಲ ಅವಳಲ್ಲಿ ಇಲ್ಲದಾಗಿಹೋದವು.

ಗುಂಡೇರಾಯರ ನೇತ್ರವಿಕಾರವೆಲ್ಲ ಹೊರಟುಹೋಯಿತು. ಅವರ ದೃಷ್ಟಿಯು ಸ್ವಚ್ಛವಾಯಿತು. ಇನ್ನೊಂದು ಹದಿನೈದು ದಿವಸ ಮಿರ್ಜೆಯಲ್ಲಿ ಇದ್ದರೆ ಒಳ್ಳೇದಾಗುವದೆಂದು ಡಾಕ್ಟರ ವಾಲ್ಲೇಸ್ ಸಾಹೇಬರು ಸೂಚಿಸಿದ್ದ ಮೇರೆಗೆ ನಮ್ಮ ಮಿರ್ಜೆಯ ನಿವಾಸವು ಬೆಳೆಯಿತು. ಗುಂಡೇರಾಯರಿಗೆ

ಗಂಜೀಪ ಆಡುವ ನಾದವಿರುವದರಿಂದ ನಾನೂ ಅವರೂ ಮಾಧವರಾಯರೂ ದಿನಾಲು ಭೋಜನೋತ್ತರ ಅಖಂಡವಾಗಿ ಮೂರುನಾಲ್ಕು ಗಂಟೆಯ ವರೆಗೆ ಅದೇ ಆಟವನ್ನು ನಡಿಸುತ್ತಿದ್ದೆವು. ಗುಂಡೇರಾಯರು ಬಹಳ ಹೊತ್ತು ಪುಸ್ತಕದಲ್ಲಿ ಕಣ್ಣಿಟ್ಟು ಓದಲಾಗದೆಂದು ಡಾಕ್ಟರರು ವಿಧಿಸಿದ್ದರಾದ ಕಾರಣ ನಾನೂ ಮಾಧವರಾಯರೂ ಬೇಸರವನ್ನು ಲೆಕ್ಕಿಸದೆ ಗಂಜೀಪದ ಆಟವನ್ನಾಡ ಬೇಕಾಗಿತ್ತು. ಶ್ಯಾಮರಾಯರಿಗೆ ನಮ್ಮ ವ್ಯವಸಾಯವು ಸೇರಲಿಲ್ಲ. ಅವರು ತಮ್ಮ ವಾಚನದಲ್ಲಿಯೂ, ಮಿರ್ಜಿಯಲ್ಲಿ ನಮಗೆ ಹೊಸ ಪರಿಚಯ ದವರಾದ ಬೇರೆ ಸ್ನೇಹಿತರೊಡನೆ ಮಾತುಕಥೆಯಾಡುವದರಲ್ಲಿಯೂ, ವನೋಪವನ ನದೀ ತೀರದಲ್ಲಿ ವಿಹರಿಸುವದರಲ್ಲಿಯೂ ಕಾಲ ಕಳೆಯು ತ್ತಿದ್ದರು.

ಗಂಜೀಪದ ಆಟಕ್ಕೆ ಬೇಸತ್ತು ಸಾಯಂಕಾಲದ ನಾಲ್ಕು ಗಂಟೆಗೆ ನಾನೂ ಮಾಧವರಾಯರೂ ಗುಂಡೇರಾಯರೂ ಕೂಡಿ ಸದಾಶಿವೋದ್ಯಾನದ ಕಡೆಗೆ ತಿರುಗಾಡಲಿಕ್ಕೆ ಹೋದೆವು. ಇಳಿಬಿಸಿಲಾಗಿಹೋಗಿದ್ದರೂ ಶಕೆ ಕುಚ್ಚುತ್ತಲೇ ಇತ್ತು. ತೋಟದಲ್ಲಿ ಅತ್ತಿತ್ತ ಸುಳಿದಾಡಿ ಬಿಡಿಹೂಗಳನ್ನೂ ಹೂಗೊಂಚಲಗಳನ್ನೂ ದವನ ಪಾಚ ಮುಂತಾದ ಸುಗಂಧಮಯವಾದ ಪಳ ಗಳನ್ನೂ ಕೊಯ್ದುಕೊಂಡು ಕೊಡೆಯಂತೆ ಗುಂಡಗೆ ಬೆಳೆದಿರುವ ಮಾವುರದ ದಟ್ಟಾದ ನೆಳಲಿಗೆ ಬಂದೆವು. ತೋಟಿಗನು ಆ ಗಿಡದಡಿಯಲ್ಲಿರುವ ಕಸಕಡ್ಡಿ ಗಳನ್ನೆಲ್ಲ ತೆಗೆದು ನೆಲವನ್ನು ಚೆನ್ನಾಗಿ ಉಡುಗಿ ಇಟ್ಟಿದ್ದನಾದ್ದರಿಂದ ನಾವು ನಮ್ಮ ರುಮಾಲುಗಳನ್ನು ತಲೆದಿಂಬಿಗಿಟ್ಟುಕೊಂಡು ಆಡ್ಡಾಗಿ ತಂಪಾಗಿ ಸೂಸುತ್ತಿರುವ ಸುಳಿಗಾಳಿಯನ್ನು ಯಥೇಚ್ಛವಾಗಿ ಸೇವಿಸಲಾರಂಭಿಸಿದೆವು.

ತುಸು ಹೊತ್ತಿನಲ್ಲಿಯೇ ನಾವೊಂದು ಚಮತ್ಕಾರವನ್ನು ಕಂಡೆವು. ರಂಗಭೂಮಿಯನ್ನು ಪ್ರವೇಶಿಸುವ ನಾಯಿಕೆಯಂತೆ ವಸ್ತ್ರಾಲಂಕಾರಗಳಿಂದ ವಿಭೂಷಿತೆಯಾದ ಲಲನೆಯೋರ್ವಳು ಆ ತೋಟದ ಮಧ್ಯಬೀದಿಯನ್ನು ಹಿಡಿದು ಮೆಲ್ಲಡಿಗಳನ್ನು ಚಲ್ಲುತ್ತ ನಡೆತಂದಳು. ಅವಳ ವನವು ಒಯ್ಯಾರ ಗಳನ್ನೂ ಉಡಿಗೆತೊಡಿಗೆಗಳ ಸೊಬಗನ್ನೂ ಗೌರವರ್ಣದಿಂದ ತೊಳಗುವ ಅವಳ ದುಂಡು ಮೊಗವನ್ನೂ ಕಂಡು ಕುತೂಹಲಯುತರಾಗಿ ನಾವು ಮಲಗಿ ದಲ್ಲಿಯೇ ತಲೆಯೆತ್ತಿ ಆ ಸುಂದರಿಯು ಯಾರಿರಬಹುದೆಂದು ನಿರೀಕ್ಷಿಸ

ಲಾರಂಭಿಸಿದೆವು. ಆ ಲೋಲೆಯು ತುಸು ಸಮೀಪಕ್ಕೆ ಬಂದ ಬಳಿಕ ಅವಳು ಗುಲ್‌ಬಾಯಿಯೇ ಎಂದು ಮಾಧವರಾಯರು ಗುರುತು ಹಿಡಿದು ಹೇಳಿದರು. ಇಂಥ ಸಮಯದಲ್ಲಿ ಅವಳನ್ನು ಮಾತಾಡಿಸುವದು ವಿಹಿತವಲ್ಲವೆಂದು ತಿಳಿದು ನಾವು ದಬ್ಬಿಕೊಂಡು ಮಲಗಿದೆವು. ಗುಲ್‌ಬಾಯಿಯು ಸಮೀಪದಲ್ಲಿರುವ ದೊಂದು ಮಲ್ಲಿಗೆಯ ಮಂಟಪದ ಬಳಿಗೆ ಬಂದು ಮೆಲ್ಲನೆ ಹಣಿಕಿಕ್ಕಿ ನೋಡಿ ಒಳಕ್ಕೆ ಪ್ರವೇಶಮಾಡಲು ಬಾಧಕವಿಲ್ಲೆಂದು ತಿಳಿದ ಬಳಿಕ ಒಳಹೊಕ್ಕಳು.

ಗುಲ್‌ಬಾಯಿಯ ತಂದೆಯು ಬೇಗನೆ ಅಲ್ಲಿಗೆ ಬರುವವನಿರಬಹುದೆಂದೂ ಅವನು ಬಂದಬಳಿಕ ನಾವೂ ಲತಾಮಂಟಪಕ್ಕೆ ಬಂದು ಎಲ್ಲರೂ ಮಿಲಿತರಾಗಿ ಯಥೇಚ್ಛವಾಗಿ ಹರಟೆಯನ್ನು ನಡಿಸಬಹುದೆಂದೂ ತಿಳಿದು ನಾವು ಕುಳಿತ ಲ್ಲಿಯೇ ಕುಳಿತು ಲಲ್ಲೂಭಾಯಿಯ ಮಾರ್ಗಪ್ರತೀಕ್ಷೆ ಮಾಡಿದೆವು. ಅರ್ಧ ಗಂಟೆಯವರೆಗೆ ಹಾದಿಯನ್ನು ನೋಡಿ ಬೇಸತ್ತು ನಾವಿನ್ನು ಮನೆಗೆ ತೆರಳು ವವರು, ಅಷ್ಟರಲ್ಲಿ ಆಕೋ! ಜಾದುಗಾರನ ಮಾಟದ ಮನೆಯೊಳಗಿಂದಲೋ ಎಂಬಂತೆ ಆ ಮಂಟಪದೊಳಗಿಂದ ಒಬ್ಬ ಗುಲ್‌ಬಾಯಿಯ ಸ್ಥಳದಲ್ಲಿ ಇಬ್ಬರು ಹೊರಬಿದ್ದರು. ಗುಲ್‌ಬಾಯಿಯ ಜೊತೆಗಾರನೆಂದರೆ ಮತ್ತೊಬ್ಬನಲ್ಲ, ಮಗುದೊಬ್ಬನಲ್ಲ. ನಮ್ಮ ಮಿತ್ರನಾದ ಶ್ಯಾಮರಾಯನೇ! ಆ ಬೂಟು ಆ ಪಾಟಲೋನು ಆ ವ್ಹೆನಿಶಿಯನ್ ಕೋಟುಗಳನ್ನು ಧರಿಸಿದವನು ಶ್ಯಾಮ ರಾಯನಲ್ಲದೆ ಮತ್ತೊಬ್ಬನಲ್ಲವೆಂದು ಮುಖ ನೋಡದೆ ಹೇಳಬಹುದಾಗಿತ್ತು. ನಾವಂತು ಅವನ ಪರಿಚಿತವಾದ ಮುಖವನ್ನು ನೋಡಿ ಮನಗಂಡೆವು. ನಾವಿನ್ನು ಆ ಪ್ರಣಯಿಗಳ ಕಣ್ಣಿಗೆ ಬೀಳುವದು ಸರ್ವಥಾ ಸರಿಯಲ್ಲವೆಂದು ಗುಲ್‌ಬಾಯಿ ಶ್ಯಾಮರಾಯರ ಕಡೆಗೆ ಬೆನ್ನುಮಾಡಿ ಮಲಗಿದೆವು. ಅವರು ಒಬ್ಬೊಬ್ಬರೊತ್ತಟ್ಟಿಗಾಗಿ ಲಗಬಗೆಯಿಂದ ಆ ತೋಟವನ್ನು ಬಿಟ್ಟು ಹೊರಬಿದ್ದು ನಡೆದರು.

ನಮಗೆ ಹುಚ್ಚುನಗೆ ತುಂಬಿತು. ಅವರು ಕಣ್ಮರೆಯಾದ ಕೂಡಲೆ ನಾವು ಬಿದ್ದುಬಿದ್ದು ನಕ್ಕೆವು. "ಇದು ಕೋರ್ಟಶಿಪ್ ಕಂಡಿರೋ?" ಎಂದು ಗುಂಡೇರಾಯರು ಉಪಕ್ರಮಿಸಿ, "ಇಂಗ್ಲಿಶ್ ಫ್ರೆಂಚ ಮುಂತಾದ ಕಾದಂಬರಿ ಗಳನ್ನೋದಿ ಪಾಶ್ಚಾತ್ಯರ ಪ್ರಿಯಾರಾಧನದ ಪದ್ಧತಿಯು ಬಹು ಸ್ವಾರಸ್ಯ ಮಯವಾಗಿರುವದೆಂಬ ಗ್ರಹವು ನಮ್ಮ ತರುಣರಲ್ಲಿ; ಆ ಸ್ವಾರಸ್ಯವನ್ನು

ಕಂಡುಕೊಳ್ಳುವ ಲವಲವಿಕೆಯು ಗುಲ್‌ಬಾಯಿಯಲ್ಲಾದರೂ ಹುಟ್ಟಿರ ಬಹುದು. '' ಎಂದು ತಮ್ಮ ಅಭಿಪ್ರಾಯವನ್ನು ಹೇಳಿದರು.

'' ಕಥೆ ಕಾದಂಬರಿಗಳು ಸಾಲದೆ 'ಕೋರ್ಟಶಿಪ್' (ಪ್ರಿಯಾರಾಧನ) ಎಂಬುದೊಂದೇ ವಿಷಯದ ಮೇಲೆ ತಜ್ಞರಾದ ಆಂಗ್ಲ ಸ್ತ್ರೀಪುರುಷರು ಶಾಸ್ತ್ರ ಗಳನ್ನೇ ಬರೆದಿರುತ್ತಾರೆ. ನನ್ನ ಪ್ರೇಮವು ಹೀಗಿದೆ, ನನ್ನ ಪ್ರೇಮವು ಇಂತಿಷ್ಟಾಗಿದೆ, ಇಂಥದೊಂದು ಪ್ರಸಂಗದಾರಭ್ಯ ನಾನು ನಿನಗೆ ಮೋಹಿತ ನಾದೆನು, ಎಂಬಿಂಥ ಮಾತುಗಳನ್ನು ಹೇಳುವದಾದರೆ ವಾಕ್ಯರಚನೆ ಹೇಗಿರ ಬೇಕು, ಅಲಂಕಾರಗಳೆಂಥವಿರಬೇಕು, ಇಂಥ ಮಾತುಗಳನ್ನು ಹೇಳುವಾಗ ಧ್ವನಿ ಹೇಗೆ ಹೊರಡಬೇಕು, ಎಂಬ ಮಾತುಗಳ ನಿರ್ಣಯವು ಆ ಶಾಸ್ತ್ರ ಗ್ರಂಥಗಳಲ್ಲಿ ಹೇಳಿದೆ. ಇದಲ್ಲದೆ ಮೊದಲು ಚುಂಬನವನ್ನಿಕ್ಕುವ ಅಧಿಕಾರ ವಾರದು, ಇಕ್ಕುವದಾದರೆ ಅದು ಕೆನ್ನೆಯ ಮೇಲೋ ಕೆಂದುಟಿಯ ಮೇಲೋ, ಒಬ್ಬರೊಬ್ಬರ ಮೇಲೆ ಭುಜಗಳನ್ನು ಚಲ್ಲುವ ಬಗೆ ಹೇಗೆ ಎಂಬದನ್ನು ಆ ಗ್ರಂಥ ಗಳು ನಿರೂಪಿಸುವದಲ್ಲದೆ ಆ ಪ್ರಣಯಿಗಳು ಅಗಲುವಾಗ ಪ್ರಿಯನು ಪ್ರಿಯಳ ಕೊಡೆಯನ್ನು ಮರೆತು ಎತ್ತಿಕೊಂಡು ಹೋಗಬೇಕೆಂತಲೂ, ಅವಳು ಅವನ ಕೈಯಲ್ಲಿಯ ಬೆತ್ತವನ್ನು ಮರೆತು ತೆಗೆದುಕೊಂಡು ಹೋಗಬೇಕೆಂತಲೂ ಅವುಗಳ ನಿರ್ಬಂಧನವಿರುತ್ತದೆ. ಅಂಥ ಗ್ರಂಥಗಳನ್ನು ಓದಿ ಪ್ರವೀಣರಾದ ವರೇ ಪ್ರಿಯಾರಾಧನ ಸುಖವನ್ನು ಸೇವಿಸಬಲ್ಲರು. ನಮ್ಮ ನಿಮ್ಮಂಥವರಿಗೆ ಅದು ಸರ್ವಥಾ ಸಾಧ್ಯವಲ್ಲ." ಎಂದು ಮಾಧವರಾಯರು ಹೇಳಿದರು.

ಸಾಯಂಕಾಲದ ಭೋಜನವು ತೀರುವ ವರೆಗೆ ನಾವು ಶ್ಯಾಮರಾಯರ ಹೆಸರು ತೆಗೆಯಲಿಲ್ಲ. ಉಂಡು ಕವಳವನ್ನು ಹಾಕಿಕೊಂಡು ನಾನೂ ಮಾಧವ ರಾಯರೂ ಗುಂಡೇರಾಯರು ಕೋಚಗಳ ಮೇಲೆ ಕುಳಿತುಕೊಂಡು ಸಾವ ಕಾಶವಾಗಿ ಧೂಮ್ರಪಾನವನ್ನು ನಡಿಸಿದೆವು. ಶ್ಯಾಮರಾಯರು ಆ ಗೋಡೆ ಯಿಂದ ಈ ಗೋಡೆಗೆ ಅಡ್ಡಾಡುತ್ತ ನೂರಡಿ ಮಾಡುತ್ತಿದ್ದರು. ಅವರ ಬೆನ್ನು ನಮ್ಮ ಕಡೆಗಾಗುತ್ತಲೆ ಗುಂಡೇರಾಯರು ಮಾಧವರಾಯರ ಭುಜ ವನ್ನು ಮೆಲ್ಲನೆ ಚಿವುಟಿ '' ಹೇಗೆ ತದೇಕಧ್ಯಾನರಾಗಿ ಅಡ್ಡಾಡುತ್ತಿರುವರು ನೋಡಿರಿ," ಎಂದು ನುಡಿದರು. '' ಹೊಸದೇನು ಹೇಳಿದಿರಿ? ಪ್ರಿಯಾ ಸಮೇತರಾಗಿ ತಾವು ಉಪವನದಲ್ಲಿ ವಿಹರಿಸುತ್ತಿರುವೆವೆಂದು ಅವರು ತಿಳು

ಕೊಂಡಿದ್ದಾರೆ ! '' ಎಂದು ಮಾಧವರಾಯರು ವಿನೋದಗೈದರು. ಶ್ಯಾಮ ರಾಯರು ನಮ್ಮ ಕಡೆಗೆ ಮುಖಮಾಡಿ ಈಚೆಗೆ ಬರುವಾಗ ನಾವು ಗಾಂಭೀರ್ಯದ ಮೌನವನ್ನು ತಳೆಯುತ್ತಿದ್ದೆವು. ಅವರ ಬೆನ್ನು ನಮ್ಮ ಕಡೆಗಾದ ಕೂಡಲೆ ನಾವು ಮತ್ತೆ ಗುಜುಗುಜು ನಡಿಸುತ್ತಿದ್ದೆವು. ಶ್ಯಾಮರಾಯರಿಗೆ ಸಂಶಯ ಬಂದು ತಲೆಯ ಮೇಲೂ ಬೆನ್ನು ಮೇಲೂ ಕೈಯಾಡಿಸಿ ತಮ್ಮ ಹಿಂಭಾಗಕ್ಕೆ ಏನಾದರೂ ಅಂಟಿಕೊಂಡಿರುವದೋ ಎಂದು ನೋಡಿಕೊಂಡರು. ನಾವು ಮೂವರು ಖೊಳ್ಳನೆ ನಕ್ಕೆವು.

"ಏನಾದರೂ ವಿಪರೀತವಾಗಿದೆಯೇನು? ಏತಕ್ಕಿಷ್ಟು ನಗೆ ರಾಯರೆ?" ಎಂದು ಶ್ಯಾಮರಾಯರು ಹುಚ್ಚರಾಗಿ ಕೇಳಿದರು.

" ಏನೂ ಇಲ್ಲ ! ' ಗುಲ್‌ನೇ ಸುನೋವರ್‌ಸೆ ಕ್ಯಾ ಕಿಯಾ ? ' ಎಂಬ ಗುಲ್ ಸುನೋವರದಲ್ಲಿಯ ಪ್ರಶ್ನಕ್ಕೆ ನಿಮ್ಮಲ್ಲಿ ಉತ್ತರವುಂಟೊ ? " ಎಂದು ಗುಂಡೇರಾಯರು ನಗುತ್ತ ಕೇಳಿದರು.

ಶ್ಯಾಮರಾಯರ ಎದೆಗೆ ಬಾಣ ಬಡಿದಂತಾಯಿತು. ಅವರು ಚಕಿತ ರಾಗಿ " ರಾಯರೆ, ನೀವು ಏನನ್ನುವಿರೋ ನನಗೆ ತಿಳಿಯಲೊಲ್ಲದು ! '' ಎಂದು ನುಡಿದರು.

" ಲೇಡಿ ಒಲಿವ್ಹಿಯಾ ಕೋಳೆಟ್ ಎಂಬ ಚತುರೆಯು ಬರೆದಿರುವ ' ಪ್ರಿಯಾರಾಧನವೂ ಅದರ ಸ್ವಾರಸ್ಯವೂ ' ಎಂಬ ಶೃಂಗಾರರಸ ಪ್ರಚುರ ವಾದ ಗ್ರಂಥವನ್ನು ನೀವು ಮೊನ್ನೆ ಮೊನ್ನೆ ಓದುತ್ತಿದ್ದಿರಿ. ಅದೀಗ ಎಲ್ಲಿಯೂ ಕಾಣುವದಿಲ್ಲ. ಗುಲ್‌ಬಾಯಿಗೆ ಕೊಟ್ಟಿರುವಿರೇನು ? '' ಎಂದು ಮಾಧವ ರಾಯರು ಕೇಳಿದರು.

ಶ್ಯಾಮರಾಯರ ಮುಖಕ್ಕೆ ಲಜ್ಜಾದೇವಿಯು ಒಂದು ಪ್ರಕಾರದ ಆವ ರಣವನ್ನಿಕ್ಕಿದಳು. ತಮ್ಮಲ್ಲಿ ಹುಟ್ಟಿದ ವಿಕಾರವನ್ನು ಅಡಗಿಸಿಕೊಳ್ಳಲು ಅವರು ಹಾಃ ! ಹಾಃ ! ಹಾಃ ! ಎಂದು ಒಳಿತಾಗಿ ನಕ್ಕು " ನಮ್ಮ ರಹ ಸ್ಯವು ನಿಮಗೆ ತಿಳಿದದ್ದು ಹೇಗೆ ? '' ಎಂದು ಕೇಳಿದರು.

" ಹೇಗಾದರೂ ತಿಳಿಯಿತು ! ನೀವು ನಿಮ್ಮ ವಾಕ್ಚಾತುರ್ಯದ ಬಲ ದಿಂದ ವಿದುಷಿಯಾದ ಸೌಂದರ್ಯಲಕ್ಷ್ಮಿಯನ್ನು ಗೆದ್ದುಕೊಂಡಿರಿ. ಒಳ್ಳೇ ಸಂತೋಷದ ಮಾತು. " ಎಂದು ನಾನು ನನ್ನ ಮಿತ್ರನನ್ನು ಸಂಭಾವಿಸಿದೆನು.

ಬಳಿಕ ಪಂಚಗೌಡರೂ ಪಂಚದ್ರಾವಿಡರೂ ಆಗಿರುವ ದಶವಿಧ ಬ್ರಾಹ್ಮಣರಲ್ಲಿ ಅನ್ಯೋನ್ಯ ವಿವಾಹಗಳು ಸಂಕೋಚವಿಲ್ಲದೆ ನಡೆಯಬೇಕೋ ಬಾರದೋ ಎಂಬ ವಿಷಯದ ಶಾಸ್ತ್ರಾರ್ಥವು ನಡೆಯಿತು. ಧರ್ಮಶಾಸ್ತ್ರಗಳ ಇಂಗಿತವನ್ನು ನೋಡಲಾಗಿ ಇಂಥ ವಿವಾಹಗಳಿಗೆ ಪ್ರತಿಬಂಧವಿಲ್ಲವೆಂಬ ನಿಷ್ಕರ್ಷೆಯಾಯಿತು. ಇನ್ನು ಆಂಗ್ಲ ವಿವಾಹಪದ್ಧತಿಯ ಪೂರ್ವಪೀಠಿಕೆಗೆ ಅನುಸರಿಸಿ ವರನೇ ವಧುವಿನ ತಂದೆಯ ಬಳಿಗೆ ಹೋಗಿ ಕನ್ಯಾದಾನವನ್ನು ಬೇಡಿಕೊಳ್ಳಬೇಕಾಗಿರುವ ಮೇರೆಗೆ ಶ್ಯಾಮರಾಯರೇ ಲಲ್ಲೂಭಾಯಿಯ ಬಳಿಗೆ ಕನ್ಯಾರ್ಥಿಗಳಾಗಿ ಹೋಗತಕ್ಕದ್ದೆಂದು ಮಾಧವರಾಯರು ವಿನೋದಗೈದರು.

"ಆಂಗ್ಲ ಪದ್ಧತಿಯೇಕೆ? ಆರ್ಯರ ಪದ್ಧತಿಯೇ ಇದು. वाचा दत्ता मया कन्या पुत्रार्थं याचिता त्वया (ಅಂದರೆ ಸಂತತಿಗಾಗಿ (ಪುತ್ರಾರ್ಥ) ನೀನು ನನ್ನ ಕನ್ಯೆಯನ್ನು ಬೇಡಿಕೊಂಡ ಮೇರೆಗೆ ಅವಳನ್ನು ನಾನು ನಿನಗೆ ವಚನ ಪೂರ್ವಕವಾಗಿ ಕೊಟ್ಟಿದ್ದೇನೆ) ಎಂಬುದು ನಮ್ಮಲ್ಲಿಯ ವಾಗ್ದಾನದ ವಿಧಿಯಾಗಿರುವದಷ್ಟೇ? ಆಧುನಿಕರೇ ಕನ್ಯೆಯ ವರಯೋಗ್ಯತೆಯನ್ನು ಕಡಿಮೆ ಮಾಡಿದ್ದರಿಂದ ನನ್ನ ಮಗಳನ್ನು 'ನೀವು ಸ್ವೀಕರಿಸುವಿರಾ?' ಎಂದು ಕಂಡಕಂಡವರನ್ನು ಕೇಳಿಕೊಳ್ಳುತ್ತ ಕನ್ಯೆಯ ಪಿತನು ಊರೂರು ತಿರುಗಬೇಕಾಗಿದೆ." ಎಂದು ಶ್ಯಾಮರಾಯರು ವಿಷಾದದಿಂದ ನುಡಿದರು.

"ವಾಃ ವಾಃ! ಈ ಮೇರೆಗೆ ಇಂದು ನೀವು ಲಲ್ಲೂಭಾಯಿಯವರ ಕಡೆಗೆ ಹೋಗಿ ಅವರ ಸಮ್ಮತಿಯನ್ನು ಪಡೆದು ಬನ್ನಿರಿ. ಅವರಾದರೂ ಸುಧಾರಣೇಚ್ಛುಗಳೇ ಆಗಿರುವರು. ರೂಢಿಯಲ್ಲಿ ಹಿತಾವಹವಾದ ಹೆಚ್ಚುಕಡಿಮೆ ಮಾಡಲು ಅವರು ಸಿದ್ಧರೇ ಇರುವರು. ನಿಮ್ಮಂಥ ಸಂಪನ್ನರಾದ ಅಳಿಯಂದಿರನ್ನು ಕಂಡಾಕ್ಷಣವೇ ಅವರು ತಮ್ಮ ಮಗಳನ್ನು ನಿಮಗೆ ಪ್ರೇಮಪೂರ್ವಕವಾಗಿ ಸಮರ್ಪಿಸುವರು." ಎಂದು ನಾನು ಅಭಿಪ್ರಾಯಪಟ್ಟೆನು.

*

"ಓ! ಗುಲ್, ನಾನು ನಿನ್ನನ್ನು ಕರಿಸಿದೆನೋ ಇಲ್ಲವೋ ಅಷ್ಟರಲ್ಲಿಯೇ ಬಂದುಬಿಟ್ಟೆಯಲ್ಲ!" ಎಂದು ಲಲ್ಲೂಭಾಯಿಯವರು ತಮ್ಮ ಮಗಳ ಮುಖವನ್ನು ನೋಡಿ ಸಂತೋಷದಿಂದ ನುಡಿದರು.

"ಆಜ್ಞೆಯಾದ ಮೇಲೆ ಬರಬೇಡವೆ?" ಎಂದು ಗುಲ್‌ಬಾಯಿಯು

ವಿನೀತೆಯಾಗಿ ನಿಂತುಕೊಂಡು ನುಡಿದಳು.

" ಪಿತ್ರಾಜ್ಞೆಯನ್ನು ನೀನು ಮೀರಿದವಳಲ್ಲ; ಆದರೂ ಇಷ್ಟು ಸೌಜನ್ಯ, ಇಷ್ಟು ವಿನಯ, ಇಷ್ಟು ನಮ್ರತೆಗಳನ್ನು ನೀನೆಲ್ಲಿ ಕಲಿತುಕೊಂಡಿ ? ಹಾಗೆ ಕೋಚದ ಮೇಲೆ ಕೂಡು. "

ಗುಲ್‌ಬಾಯಿಯು ಕೋಚದ ಮೇಲೆ ಕುಳಿತುಕೊಂಡು " ನನ್ನನ್ನು ಕರಿಸಿದ್ದೇಕೆ ? " ಎಂದು ಕೇಳಿದಳು.

" ಗುಲ್, ನಿನ್ನ ಪೂರ್ವದ ವಿಚಾರಗಳೆಲ್ಲ ತೊಳೆದುಹೋಗಿ ನೀನು ಪುರಾತನ ಪದ್ಧತಿಯ ನಾರಿಯಂತೆ ಆಚರಿಸಲಾರಂಭಿಸಿರುವಿ. ಅಣ್ಣಾಸಾಹೇಬ, ಮಾಧವರಾವ, ಶ್ಯಾಮರಾವ ಮುಂತಾದ ನಮ್ಮ ಹೊಸ ಸ್ನೇಹಿತರೊಡನೆ ವಾದವಿವಾದಗಳನ್ನು ಮಾಡುತ್ತ ತಿಂಗಳು ಹದಿನೈದು ದಿವಸಗಳಲ್ಲಿಯೇ ಇಷ್ಟು ವಿಚಾರಕ್ರಾಂತಿಯಾಯಿತೆ ? "

" ಅಪ್ಪಾ, ನಮ್ಮ ಹೊಸ ಸ್ನೇಹಿತರು ಒಳ್ಳೇ ಚತುರರಾದ ವಿವಾದ ಪಟುಗಳು. ಅವರ ವಿಶುದ್ಧವಾದ ಆಚರಣಗಳನ್ನೂ ಅವರಲ್ಲಿರುವ ಆರ್ಯ ಧರ್ಮದ ಅಭಿಮಾನವನ್ನೂ ಸಾರಾಸಾರ ವಿಚಾರಗಳನ್ನು ತೂಗಿ ಸುಧಾರಣೆಯ ಪಥದಲ್ಲಿ ಅನುಸರಿಸುತ್ತಿರುವ ಹೆಜ್ಜೆಗಳನ್ನೂ ಚನ್ನಾಗಿ ನಿರೀಕ್ಷಿಸಲಾಗಿ ಅವರು ಬೋಧಿಸಿದ ಎಲ್ಲ ಮಾತುಗಳು ನನಗೆ ಸಮ್ಮತವೇ ಆದವು. "

" ಸ್ತ್ರೀಸ್ವಾತಂತ್ರ್ಯದ ವಾದವೆಂಬ ಪ್ರಬಲವಾದ ಅಸ್ತ್ರವನ್ನಾದರೂ ನೀನು ಹಾಗೆ ಕೆಳಗಿಡಬಾರದಾಗಿತ್ತು " ಎಂದು ಲಲ್ಲೂಭಾಯಿಯವರು ಮುಗುಳುನಗೆ ನಗುತ್ತ ನುಡಿದರು.

" ಬ್ರಹ್ಮಾಸ್ತ್ರಕ್ಕೆ ಬ್ರಹ್ಮಾಸ್ತ್ರವು ! ಪುರುಷರಾದರೂ ಸ್ತ್ರೀಯರನ್ನು ಬಿಟ್ಟು ಸ್ವತಂತ್ರರಾಗಿ ಇರಲಾರರಷ್ಟೆ ? " ಎಂದು ಗುಲ್‌ಬಾಯಿಯು ತಂದೆಯ ಮುಖವನ್ನು ನೋಡುತ್ತ ಮಂದಸ್ಮಿತೆಯಾಗಿ ಕೇಳಿದಳು.

" ಓ ಹೋ ! ಲಗ್ನ ಮಾಡಿಕೊಳ್ಳುವದಿಲ್ಲೆಂದು ನೀನು ಸಾಧಿಸಿ ಹೇಳುತ್ತಿದ್ದಿ. ಆ ವಿಚಾರವನ್ನಾದರೂ ನೀನು ಕಳೆದುಕೊಂಡಿಲ್ಲವಷ್ಟೆ? "

ಕೆಂಪು ಹಗಲುಪಂಜಿನ ಬೆಳಕಿನಲ್ಲಿ ಎಲ್ಲ ವಸ್ತುಗಳು ಕೆಂಪಾಗಿ ಕಾಣುವಂತೆ ಲಲ್ಲೂಭಾಯಿಯವರ ಮಾತು ಕೇಳುತ್ತಲೆ ಗುಲ್‌ಬಾಯಿಯ ಸುಂದರವಾದ ಮುಖವು ವಿಲಕ್ಷಣವಾದ ರಕ್ತಿಮೆಯನ್ನು ತಳೆದಿತು. ಸಲಜ್ಜಸ್ಮಿತ

ಳಾಗಿ ಅವಳು ಮುಖವನ್ನು ತಗ್ಗಿಸಿಕೊಂಡು ಕುಳಿತಳೇ ಹೊರತಾಗಿ ತಂದೆಯು ಪ್ರಶ್ನೆಕ್ಕೆ ಮತ್ತೊಂದು ಉತ್ತರವನ್ನು ಹೇಳಬಲ್ಲಳೆ ?

" ಉತ್ತರವಿಲ್ಲವೆ ? ಹಾಗಾದರೆ ವಿವಾಹದ ವಿಷಯವಲ್ಲಾದರೂ ನೀನು ಶ್ಯಾಮರಾಯರ ಮತಕ್ಕೆ ಒಳಗಾಗಿರುವಿಯೆಂದು ನಾನು ಗ್ರಹಿಸುತ್ತೇನೆ. " ಎಂದು ತಂದೆಯು ಒಳಿತಾಗಿ ನಕ್ಕು ಕೇಳಿದನು.

ಗುಲ್‌ಬಾಯಿಯು ಭ್ರಾಂತಳಂತೆ ದಿಂಗುಬಡಿದು ಕುಳಿತಳು. ತಲೆಯೆತ್ತಿ ತಂದೆಯ ಮುಖವನ್ನು ನೋಡಲು ಅವಳಿಗೆ ಧೈರ್ಯ ಸಾಲಲಿಲ್ಲ. "ನೀವು ಏನೆನ್ನುವಿರೋ ನನಗೆ ತಿಳಿಯಲೊಲ್ಲದು " ಎಂದಿಷ್ಟು ನುಡಿಯಬೇಕಾದರೆ ಅವಳಿಗೆ ಸಾಕುಬೇಕಾಗಿಹೋಯಿತು.

" ನನಗಾದರೂ ಎಲ್ಲಿ ತಿಳಿಯುತ್ತಿತ್ತು ? ಇಂದು ಪ್ರಾತಃಕಾಲದಲ್ಲಿ ಶ್ಯಾಮರಾಯರೇ ನನ್ನ ಬಳಿಗೆ ಬಂದು ನಿನ್ನನ್ನು ತಮಗೆ ಕೊಡಬೇಕೆಂದು ಕೇಳಿಕೊಂಡರು. ನೀನು ಅಕ್ಕರತೆಯಿಂದ ಅವರ ಪಾಣಿಗ್ರಹಣಕ್ಕೆ ಒಪ್ಪಿರುವಿಯಂತೆ ! "

" ಇದರಲ್ಲಿ ನನ್ನದೇನಿದೆ ? ನೀವು ಕೊಡುವವರು ಅವರು ಸ್ವೀಕರಿಸತಕ್ಕವರು. "

" ಗುಲ್, ಈ ಸಂವಾದವು ಇಷ್ಟಕ್ಕೆಯೇ ಸಾಕು. ಹೆಚ್ಚಾಗಿ ವಿನೋದಗೈದು ನಿನ್ನ ಮುಖದ ಆರಕ್ತತೆಯನ್ನು ಹೆಚ್ಚಿಸುವದು ವಿಹಿತವಲ್ಲ. ಕೆಳಗೆ ಹೋಗಿ ನನಗಾಗಿ ಚಹಾ ತೆಗೆದುಕೊಂಡು ಬಾ " ಎಂದು ಲಲ್ಲೂಭಾಯಿಯವರು ಕೃತಕೃತ್ಯರಾಗಿ ನುಡಿದರು.

ಗುಲ್‌ಬಾಯಿಯು ಚಹೆ ತೆಗೆದುಕೊಂಡು ಮರಳಿ ಬರುವಷ್ಟರಲ್ಲಿ ಅವಳ ಚಿತ್ತವು ಕಿಂಚಿತ್ ಶಾಂತವಾಗಿತ್ತು. ಲಜ್ಜೆಯ ರಕ್ತಿಮೆಯು ಕಡಿಮೆಯಾಗಿತ್ತು.

" ಗುಲ್, ಲಗ್ನಮಾಡಿಕೊಳ್ಳದೆ ಹಾಗೆಯೆ ಇರತಕ್ಕದ್ದೆಂದು ನಿನಗೆ ಯಾರು ಬೋಧಿಸಿದ್ದರು ? "

" ಯಾರೂ ಇಲ್ಲ. ನನ್ನ ಶಿಕ್ಷಕರಾದ ಧೋಂಡೋಪಂತ ಢಂಢೇರೆಯವರ ಪರಿಚಯವಾದಂದಿನಿಂದ ಅವರಂತೆಯೇ ಎಲ್ಲ ಪುರುಷರ ಮನೋವೃತ್ತಿಗಳಿರುವವೆಂಬ ದುರ್ಗ್ರಹವಾದ ಅಭಿಪ್ರಾಯವು ನನ್ನಲ್ಲಿ ಸೇರಿತು. ಅದರಂತೆ

ಎಲ್ಲ ಪುರುಷರು ಸೆಟೆಪ್ಪನೆ ಸೆಟೆಕೊಂಡಿರುವರೆಂದೂ ಅವರಂತೆಯೇ ಎಲ್ಲರೂ ಸ್ತ್ರೀಯರ ವಿಷಯವಾಗಿ ಅನಾದರವುಳ್ಳವರೆಂದೂ ಅವರಂತೆಯೇ ಎಲ್ಲ ಪುರುಷರು ಅರಸಿಕರೆಂದೂ ನಾನು ತಿಳಿದಿದ್ದೆನು. ನಿಮ್ಮ ಸ್ನೇಹಿತರು ಬಂದು ನನ್ನಲ್ಲಿ ವಿಚಾರಕ್ರಾಂತಿಯನ್ನುಂಟು ಮಾಡಿದ್ದು ಸುಯೋಗವೇ ಎಂದು ತಿಳಿದು ಅವರಿಂದ ನಾನು ಉಪಕೃತಳಾಗಿದ್ದೇನೆ."

ವಾಚಕರೆ, ಇದೇ ತಿಂಗಳಲ್ಲಿ ಗುಲ್‌ಬಾಯಿ ಶ್ಯಾಮರಾಯರ ವಿವಾಹವಾಗತಕ್ಕದ್ದು. ನೀವು ಬಂದು ವಧೂವರರ ಮೇಲೆ ಅಕ್ಷತೆಗಳನ್ನು ಹಾಕಿದರೆ ವಿಹಿತವೇ. ಬರಲಿಕ್ಕೆ ಅನುಕೂಲವಿಲ್ಲದಲ್ಲಿ ನೀವಿದ್ದ ಸ್ಥಳಗಳಿಂದಲೇ ಆಶೀರ್ವಚನಯುಕ್ತವಾದ ಪತ್ರಗಳನ್ನು ಹಾಕಿರಿ. ನಿಮ್ಮೆಲ್ಲರಿಗೂ ಲೇಖನದ್ವಾರಾ ರಸಪೂರ್ಣವಾದ ಪಕ್ವಾನ್ನಗಳನ್ನು ಕಳಿಸಲು ಲಲ್ಲೂಭಾಯಿಯವರು ನಮಗೆ 'ಮುಕ್ತಿ' ಕೊಟ್ಟ ಮೇರೆಗೆ ಅಂಥ ಪಕ್ವಾನ್ನಗಳನ್ನು 'ಸಚಿತ್ರಭಾರತದಲ್ಲಿ' ತುಂಬಿ ಕಳಿಸುವೆವು. ಸ್ವೀಕರಿಸಬೇಕು.

# ಕರಿಗಾಲಿನ ಗಿರಿರಾಯರು

ಪ್ರಜಾಪೀಡಕನಾದ ಮೈಸೂರಿನ ಟೀಪ್ಪೂ ಸುಲ್ತಾನನನ್ನು ಶ್ರೀರಂಗ
ಪಟ್ಟಣದ ಯುದ್ಧದಲ್ಲಿ ಕೊಂದು ಅವನ ರಾಜ್ಯವನ್ನು ಇಂಗ್ಲಿಷ್ ಸರಕಾರ
ದವರು ತಮ್ಮ ವಶಕ್ಕೆ ತೆಗೆದುಕೊಂಡ ಕಾಲಕ್ಕೆ, ಉತ್ತರಕರ್ನಾಟಕದ ನಿವಾಸಿ
ಗಳಾದ ಅನೇಕ ಜನ ಕಾರ್ಯಧುರಂಧರರು ಇಂಗ್ಲಿಷ್ ಸರಕಾರಕ್ಕೆ ಕಾಯಾ
ವಾಚಾ ಮನಸಾ ಸಹಾಯ್ಯ ಮಾಡಿದ್ದರು. ಅವರಲ್ಲಿ ದಿವಾನ್ ಬಹಾ
ದ್ದೂರ ವೀರನಾರಾಯಣರಾಯರು ಒಬ್ಬರಾಗಿದ್ದರು. ದಿವಾನರವರು
ಮಾಡಿದ ಸಾಹಸದ ಸಹಾಯಕ್ಕೆ ಮೆಚ್ಚಿ ವಿಜಯಿಗಳಾದ ಆರ್ಥರ ವೆಲ್ಲಸ್ಲಿ
ಪ್ರಭುಗಳು ಅವರನ್ನು ಬಹುಪರಿಯಾಗಿ ಸಂಭಾವಿಸಿ, ಅವರಿಗೆ ಚಿನ್ನೂರು
ಎಂಬ ಗ್ರಾಮವನ್ನು ಉಂಬಳಿಯಾಗಿ ಹಾಕಿಕೊಟ್ಟಿದ್ದಲ್ಲದೆ ವೀರನಾರಾಯಣ
ರಾಯರ ಮಗ ಮೊಮ್ಮಕ್ಕಳಿಗೆ ತಿಂಗಳಾ ಇನ್ನೂರು ರೂಪಾಯಿನ ಮಾಸಾ
ಶನವು ಕೂಡ ಸಿಕ್ಕತಕ್ಕದ್ದೆಂದು ವ್ಯವಸ್ಥೆ ಮಾಡಿ ಕೊಟ್ಟಿದ್ದರು.

ವೀರನಾರಾಯಣರಾಯರು ಚಿಕ್ಕಂದಿನಿಂದಲೇ ದೊಡ್ಡ ಉದ್ಯೋಗಸ್ಥ
ರಾಗಿದ್ದು ಮುಂದವರು ಅಭಿವೃದ್ಧಿಯನ್ನು ಹೊಂದುತ್ತ ತಿಂಗಳಾ ಒಂದು
ಸಾವಿರ ರೂಪಾಯಿಯ ಸಂಬಳವುಳ್ಳ ದಿವಾನರಾದರು. ರಾಯರ ತಂದೆ
ಯವರು ಗಳಿಸಿಟ್ಟ ಹೇರಳವಾದ ಹಣಕ್ಕೆ ವರ್ಷಾ ಐದಾರು ಸಾವಿರ ರೂಪಾಯಿ
ಬಡ್ಡಿ ಬರುತ್ತಿತ್ತು. ಊರ ಉತ್ಪನ್ನವು ವರ್ಷಾ ಹತ್ತು ಸಾವಿರಕ್ಕೆ ಹೆಚ್ಚಾ
ಗಿತ್ತು. ಮದರಾಸು ಬಳ್ಳಾರಿ ಪಟ್ಟಣಗಳಲ್ಲಿ ದಿವಾನರವರು ಕಟ್ಟಿಸಿದ
ದಿವ್ಯವಾಗಿರುವ ಬಂಗಲೆಗಳಿಗೆ ವರ್ಷಾ ಐದು ಸಾವಿರ ರೂಪಾಯಿ ಬಾಡಿಗೆ
ನಿರ್ವಿವಾದವಾಗಿ ಬರುತ್ತಿತ್ತು. ದಿವಾನರು ಸಂಬಳದಿಂದುಳಿಸಿದ ಹಣವಾದರೂ
ವಿಪುಲವಾಗಿತ್ತು. ಹೆಣ್ಣುಮಕ್ಕಳ ಮೈಮೇಲಿನ ಮುತ್ತು ರತ್ನಗಳ ಅಲಂ
ಕಾರಗಳಿಗೆ ಬೆಲೆಯಿಲ್ಲ. ಮನೆಯಲ್ಲಿ ಕೊಡ, ಗಂಗಾಳ, ಪರಾತಗಳು
ಕೂಡ ಬೆಳ್ಳಿಯವು. ಹೀಗೆ ಸಮೃದ್ಧಿಯಾಗಿರುವ ಸಂಪತ್ತಿನಿಂದ ಸಂತುಷ್ಟ
ರಾದ ದಿವಾನ್ ಬಹಾದ್ದೂರರವರು ತಮ್ಮ ಸರಕಾರೀ ಉದ್ಯೋಗವನ್ನು
ಬಿಟ್ಟು ಬೇಗನೆ ಪೆನ್‌ಶನ್ ತೆಗೆದುಕೊಂಡು ತಮ್ಮ ಉಂಬಳಿಯ ಗ್ರಾಮದಲ್ಲಿ
ಸುಖದಿಂದ ಇರುವವರಾದರು.

ವೀರನಾರಾಯಣರಾಯರು ಸದಾಚರಣ ಸಂಪನ್ನರೂ, ಧರ್ಮಪರಾಯಣರೂ ದಾನಶೂರರೂ ಆಗಿರುವವರಿಂದ ಅವರು ಸರಕಾರದ ದಿವಾನಗಿರಿಯನ್ನು ಬಿಟ್ಟಿದ್ದರೂ ಅವರಿಗೆ ತುಂಗಭದ್ರೆಯ ಪ್ರಾಂತದಲ್ಲೆಲ್ಲ ವಿಶೇಷವಾದ ಮರ್ಯಾದೆಯಿತ್ತು. ರಾಯರ ಪತ್ನಿಯವರಾದ ಕೊಪ್ಪನ್ನಮ್ಮನವರು ತಮಗಿಷ್ಟು ಸಂಪತ್ತು ಇದ್ದರೂ ಮಕ್ಕಳಾಗಿರಲಿಲ್ಲವೆಂದು ಚಿಂತಾಕುಲರಾಗಿ ಅನೇಕ ದೇವರಿಗೆ ಹರಿಕೆ ಹೊತ್ತರು. ಅಶ್ವತ್ಥನಿಗೆ ಪ್ರದಕ್ಷಿಣೆ ಹಾಕಿ ಹಾಕಿ ಬೇಸತ್ತರು. ಕಡೆಗೆ ಆ ಅಶ್ವತ್ಥನ ಪ್ರಸಾದದಿಂದಲೋ ಮತ್ತಾವ ಗ್ರಾಮದೇವತೆಯ ಅನುಗ್ರಹದಿಂದಲೋ ಕೊಪ್ಪನ್ನಮ್ಮನವರು ಗರ್ಭವನ್ನು ತಳೆದು ಸೂರ್ಯಗ್ರಹಣದ ಸಮುಹೂರ್ತದಲ್ಲಿ ಮಗನನ್ನು ಪಡೆದರು.

ಮಗನು ಹುಟ್ಟಿದ ದಿನವೇ ರಾಯರಿಗೆ ಅರ್ಧಾಂಗವಾಯುವಿನ ವಿಕಾರವಾದರೂ ಅವರು ಪುತ್ರೋತ್ಸವದ ಸಮಾರಂಭವನ್ನು ಒಳ್ಳೇ ಸಂತೋಷದಿಂದ ನೆರವೇರಿಸಿದರು. ಚಿರಂಜೀವರಿಗೆ ಗಿರಿರಾಯನೆಂಬ ನಾಮಕರಣವನ್ನು ಮಾಡಿಸಿದರು. ವೃದ್ಧಾಪ್ಯದಲ್ಲಿ ಮಗನು ಹುಟ್ಟಿದ್ದರಿಂದ ತಂದೆ ತಾಯಿಗಳು ಅವನನ್ನು ಒಳ್ಳೇ ಪ್ರೀತಿಯಿಂದ ಬೆಳಿಸಿದರು. ಮಗುವು ದೊಡ್ಡದಾದ ಬಳಿಕ ಅದು ಕುಚೇಷ್ಟೆಗಳನ್ನು ಮಾಡಿದರೂ ಹಡೆದವರು ಹಿಗ್ಗುವರು; ಸೌಮ್ಯನಾಗಿದ್ದರೂ ಕಂಡು ಸಂತೋಷಬಡುವರು.

ಗಿರಿರಾಯನು ಮನೆಯಲ್ಲಿ ಎಂಥ ಕೆಟ್ಟ ಕೆಲಸ ಮಾಡಿದರೂ ಅವನನ್ನು ಯಾರೂ ತಡೆಯಕೂಡದೆಂದು ಕಟ್ಟಳೆಯಿತ್ತು. ರೊಕ್ಕ ರೂಪಾಯಿಗಳನ್ನು ಅವನು ಕೇಳಿ ತಕ್ಕೊಂಡರೂ ಚಿಂತೆಯಿದ್ದಿಲ್ಲ; ಕದ್ದುಕೊಂಡರೂ ಹೀಗೇಕೆಂದು ಯಾರೂ ಕೇಳುತ್ತಿದ್ದಿಲ್ಲ. ಚಿಕ್ಕರಾಯರು ಕದ್ದು ತಂದಿರುವ ಹಣವನ್ನು ಸೆಳೆದುಕೊಳ್ಳುವ ಸೇವಕರು ಅವನು ಬಡಿದರೂ ಬಡಿಸಿಕೊಳ್ಳುತ್ತಿದ್ದರು; ಬೇಕಾದ ಹಾಗೆ ಬೈದರೂ ಬೈಸಿಕೊಳ್ಳುತ್ತಿದ್ದರು. ಓಣಿಯಲ್ಲಿ ಹೊರೆ ಹೊತ್ತುಕೊಂಡು ಹೋಗುವವರನ್ನು ಅವನು ಥಕ್ಕನೆ ಹಾಯ್ದು ಕೆಡವುವನು. ಕಲ್ಲೊಗೆದು ಗೌಳಿಗಿತ್ತಿಯ ಮೊಸರುಗಡಿಗೆಯನ್ನೊಡೆದರೆ ಅದು ಕೃಷ್ಣಲೀಲೆಯೆಂದು ಹೇಳಿ ಗಿರಿರಾಯನ ತಾಯಿಯು ಯಥೇಷ್ಟವಾಗಿ ನಕ್ಕು, ಗೌಳಿಗಿತ್ತಿಗೆ ಮೊಸರುಗಡಿಗೆಗಳ ಹಾನಿಗಾಗಿ ಸಾಕಷ್ಟು ಹಣವನ್ನು ಕೊಡುವಳು. ವೀರನಾರಾಯಣರಾಯರಿಗೆ ಮಗನು ಮಾಡಿದ ಕುಚೇಷ್ಟೆ

ಗಳು ಸರಿಬರುತ್ತಿದ್ದಿಲ್ಲವಾದರೂ ಗಿರಿಯು ದೊಡ್ಡವನಾದ ಬಳಿಕಾದರೂ ಬುದ್ಧಿಗಲಿಯುವನೆಂದು ಸಮಾಧಾನವನ್ನು ಹಚ್ಚಿಕೊಳ್ಳುತ್ತಿದ್ದರು.

ರಾಜಕಾರಣಗಳಲ್ಲಿ ಕೂಡ ಒಳ್ಳೇ ದೂರದರ್ಶಿಗಳೆಂದು ಖ್ಯಾತಿಯನ್ನು ಹೊಂದಿದ ವೀರನಾರಾಯಣರ ದೃಷ್ಟಿಯು ಪುತ್ರವಾತ್ಸಲ್ಯವೆಂಬ ಆವರಣದಿಂದ ಅಂಧವಾಗಿ ಹೋಗಿತ್ತಾದ್ದರಿಂದ ವ್ರಾತ್ಯನಾದ ಗಿರಿರಾಯನ ಅವಸ್ಥೆ ಮುಂದೇನಾಗುವದೆಂಬ ಆಲೋಚನವು ಅವರಿಗೆ ತೋರಲಿಲ್ಲ. ಅಶಿಕ್ಷಿತನಾದ ಶಿಕ್ಷಕನೋರ್ವನು ನಿತ್ಯದಲ್ಲಿಯೂ ಮನೆಗೆ ಬರುತ್ತಿದ್ದರೂ ಗಿರಿರಾಯನ ಕಲಿಯುವ ಅಪೇಕ್ಷೆಯು ಒಮ್ಮೆಯಾದರೂ ತೋರಿಬರಲಿಲ್ಲಾದ್ದರಿಂದ ಅವನು ಸೇವಕರೊಡನೆಯೂ ಗಿರಿರಾಯನೊಡನೆಯೂ ಒಣಹರಟೆ ಕೊಚ್ಚಿ ಹೋಗುತ್ತಿದ್ದನು. ಈ ಮಾತು ರಾಯರ ಲಕ್ಷ್ಯಕ್ಕೆ ಬಂದಿದ್ದರೂ ಗರ್ಭಶ್ರೀಮಂತನಾದ ತನ್ನ ಮಗನಿಗೆ ವಿದ್ಯೆಬರದಿದ್ದರೆ ಬಿಡಲೊಲ್ಲದೇಕೆಂದು ಹೇಳುತ್ತಿದ್ದರು. ಮಂಗ, ಹೋತು, ನವಿಲು, ಪಾರಿವಾಳಗಳನ್ನು ಸಾಕುವ ಪ್ರೀತಿಯು ಗಿರಿರಾಯನಿಗೆ ಬಹಳಾಗಿತ್ತು. ಒಂದು ಮುಸುವನನ್ನು ಕೊಂಡು ಅದಕ್ಕೆ ಗೋವೆಯ ಕಿರಿಸ್ತಾನರಂಥ ಅಂಗಿ ಟೊಪ್ಪಿಗೆಗಳನ್ನು ಹಾಕಿ ಅವನು ಅದಕ್ಕೆ ಗೊನ್‌ಸಾಲ್‌ವ್ಹಿಸನೆಂಬ ಹೆಸರನ್ನಿಟ್ಟನು; ಗಡ್ಡದ ಬಿಳಿ ಹೋತಿಗೆ ಅವನು ಕಾಜೀ ಮಸ್ತಾನಸಾಹೇಬರೆಂದು ಕರೆದನು. ಇದಕ್ಕೆಲ್ಲ ಚಾತುರ್ಯವೆಂದು ಹೇಳಿ ದಿವಾನರವರು ಮಗನನ್ನು ಕೊಂಡಾಡುತ್ತಿದ್ದರು.

ವೀರನಾರಾಯಣರಾಯರ ಪ್ರಕೃತಿಯು ದಿನವೊಂದಕ್ಕೆ ಕ್ಷೀಣವಾಗುತ್ತ ನಡೆದದ್ದರಿಂದ ತಾವು ಬದುಕಿರುವಾಗಲೇ ಮಗನ ವಿವಾಹ ಸಮಾರಂಭವನ್ನು ಮುಗಿಸಿಬಿಡಬೇಕೆಂದೆಣಿಸಿ ಅವರು ತಮ್ಮ ಹೆಂಡತಿಯ ತಮ್ಮನಾದ ಕೃಷ್ಣಮೂರ್ತಿರಾಯರ ಅತಿ ಚಲುವೆಯಾದ ಮಗಳನ್ನು ತೆಗೆದುಕೊಂಡು ಹದಿನೈದು ವರುಷದ ಅಲ್ಪವಯಸ್ಕನಾದ ಗಿರಿರಾಯನ ಮದುವೆಯನ್ನು ಮಾಡಿಬಿಟ್ಟರು. ಇನ್ನೇನು ಚಿಂತೆಯಿಲ್ಲ; ಮನೆಯಲ್ಲಿ ಅಖಂಡವಾದ ಸಂಪತ್ತು; ಸೊಸೆ ರೂಪವತಿಯು; ಶ್ಲಾಘ್ಯರಾದವರೊಡನೆ ಶರೀರಸಂಬಂಧವಾಗಿರುವದು; ತಮ್ಮ ಮಗನು ತಮ್ಮ ಪಶ್ಚಾತ್ ಸುಖಿಯಾಗಿರುವನೆಂಬ ಸಂತೋಷದಿಂದ ರಾಯರು ಪರಲೋಕಕ್ಕೆ ತೆರಳುವವರಾದರು. ಮುಂದೆ ಒಂದೆರಡು ವರುಷಗಳಲ್ಲಿ ಗಿರಿರಾಯರ ಹೆಂಡತಿಯಾದ ವಿಶಾಲಾಕ್ಷಿಯು ನೈನೆರೆದು ಮನೆಗೆ

ಬಂದಳು. ಸಕಲ ಸಂಪತ್ತುಗಳು ಗಿರಿರಾಯರ ಸ್ವಾಧೀನವಾದವು.

ಗಿರಿರಾಯರ ಪ್ರೀತಿಪಾತ್ರನಾದ ಕಾಜೀ ಮಸ್ತಾನಸಾಹೇಬನು (ಹೋತಿನ ಹೆಸರು) ಮನಬಲ್ಲಂತೆ ಮೇದು ಮದವೇರಿ ಊರಲ್ಲಿಯ ಅಜಯೋಷಿತೆಯರ ಮರ್ಯಾದೆಯನ್ನು ಅಸಹ್ಯವಾಗಿ ಭಂಗಿಸಲಾರಂಭಿಸಿದನು. ಅದನ್ನು ಕಂಡು ಗಿರಿರಾಯರು ತಮ್ಮ ಸ್ನೇಹಿತರಾದ ಪತ್ತಾರ ಮಾನಪ್ಪ, ಸುಂಕದ ವೆಂಕಣ್ಣ, ಶಾನುಭೋಗರ ಬಾಳಪ್ಪ ಮುಂತಾದವರೊಡನೆ ವಿಚಾರಗೈದು ಕಾಜೀ ಸಾಹೇಬರನ್ನು ಅಷ್ಟಪಾದರನ್ನಾಗಿ ಮಾಡಬೇಕೆಂದು ನಿಶ್ಚಯಿಸಿದರು. (ದ್ವಿಭುಜರಾದ ದಂಪತಿಗಳಿಗೆ ಚತುರ್ಭುಜರೆಂದು ಹೇಳುವ ರೂಢಿಯುಂಟಷ್ಟೆ?) ಸಂಗಡಲೇ ಗಲಸ್ತನಿಯಾದ ಅಜಾಸುಂದರಿಯನ್ನು ವಧುವಾಗಿ ಗೊತ್ತುಪಡಿಸಿ ಗಿರಿರಾಯರು ಕಾಜೀ ಮಸ್ತಾನಸಾಹೇಬರ ವಿವಾಹಮಹೋತ್ಸವವನ್ನು ಒಳ್ಳೇ ವಿಜೃಂಭಣೆಯಿಂದ ಬೆಳೆಸಿದರು. ವರನ ಕೋಡುಗಳಿಗೆ ಬಂಗಾರದ ಅಣಸುಗಳನ್ನು ಹಾಕಿ ಅದರ ಮೈಗೆ ಬೆಲೆಯುಳ್ಳ ಕಲಾಬತ್ತಿನ ಜೂಲ ಹಾಕಿದರು. ವಧುವಿನ ಕೊರಳಲ್ಲಿ ಟಿಕ್ಕಿಸರಗಳನ್ನು ತೊಡಕಿಸಿ ಮೈಮೇಲೆ ಜರದ ಪೀತಾಂಬರವನ್ನು ಹೊದಿಸಿದರು. ಬೇಂಡಬಾಜಾ ಬಜಂತ್ರಿಗಳೊಂದಿಗೆ ವಧೂವರರ ಘನವಾದ ಮೆರವಣಿಗೆ ಹೊರಟಿತು. ತಾರಾಬಿೀ, ಪ್ಯಾರಾಜೀ, ಗುಲಾಬಜೀ ಮುಂತಾದ ವಾರಾಂಗನೆಯರ ಸೊಬಗಿನ ನೃತ್ಯಗಾಯನಗಳಾದವು. ಎಂಟಾನೆಂಟು ದಿವಸ ಬಂದು ಹೋದವರಿಗೆ ಪಕ್ವಾನ್ನದ ಭೋಜನಗಳು. ಈ ಗಲಸ್ತನೀ ಮಸ್ತಾನಸಾಹೇಬರ ಅಸದೃಶವಾದ ವಿವಾಹಮಹೋತ್ಸವಕ್ಕೆ ಐದಾರು ಸಾವಿರ ರೂಪಾಯಿಗಳ ವೆಚ್ಚವಾಯಿತು.

ಗಿರಿರಾಯರು ಒಳ್ಳೇ ರೂಪವಂತರೂ, ಹದಿನೆಂಟು ಹತ್ತೊಂಬತ್ತು ವರುಷದ ಪ್ರಾಯದವರೂ, ಮಿತಿಮೀರಿದ ಶ್ರೀಮಂತರೂ ಆಗಿರುವದರಿಂದ ಇಂಥ ವಸ್ತುವು ನ್ಯಾಯವಾಗಿ ತಮ್ಮದೇ ಎಂದು ಆ ಪ್ರಾಂತದ ವಾರಾಂಗನೆಯರ ಅಭಿಪ್ರಾಯವಾಯಿತು. ಅವರು ತಮ್ಮ ಇಷ್ಟಾರ್ಥ ಪ್ರಾಪ್ತಿಗಾಗಿ ಗಿರಿರಾಯರ ಸ್ನೇಹಿತರಾದ ಸುಂಕದ ವೆಂಕಣ್ಣ, ಶಾನುಭೋಗ ಮುಂತಾದವರ ಸಹಾನುಭೂತಿಯನ್ನು ಕೋರಿಕೊಳ್ಳಲಾರಂಭಿಸಿದರು. ಪ್ರಸಿದ್ಧರಾದ ವಾರಾಂಗನೆಯರು ತಮ್ಮ ಸಹಾಯವನ್ನು ಬಯಸುತ್ತಿರುವದನ್ನು ಕಂಡು

ವೆಂಕಣ್ಣನವರಿಗೂ ಶಾನುಭೋಗರಿಗೂ ಒಳ್ಳೇ ಗೌರವ ಬಂದಂತಾಗಿ ಆ ಸ್ತ್ರೀ-ಪಕ್ಷಪಾತಿಗಳು ವಾರಾಂಗನೆಯುಂಗೆ ಗಿರಿರಾಯರನ್ನು ಗೆದ್ದುಕೊಡುವ ಹವಣಿಕೆಗೆ ಬಿದ್ದರು.

ಕಡೆಗೆ ವೆಂಕಣ್ಣನ ಪಾಲಿಗೆ ಕೀರ್ತಿ ಬಂದಿತು. ತಾರಾಜಿಯ ದೈವವು ತೆರೆಯಿತು. ಗಿರಿರಾಯನು ಸೊಬಗಿನ ಉಡುಗೆತೊಡಿಗೆ ಮಾಡಿಕೊಂಡು ತನ್ನ ಮನೆಗೆ ಬಂದದ್ದು ಕಂಡು ತಾರಾಜಿಯು ಪರಮ ಸಂತುಷ್ಟಳಾಗಿ ವಿಲಾಸದಿಂದೆ ಮುಂದಪಾಕಗ್ಗೈಸು ರಾಯರನ್ನು ಪ್ರೇಮದಿಂದ ಕೈಹಿಡಿದು ಮಂಚದ ಮೇಲೆ ಕುಳ್ಳಿರಿಸಿದಳು. ತಾರುಣ್ಯದ ಭರದಲ್ಲಿದ್ದ ಆ ವಾರಾಂಗನೆಯು ಒಯ್ಯಾರದಿಂದ ಕೈಹಿಡಿದಾಕ್ಷಣವೇ ಗಿರಿರಾಯನ ಮೈಯೆಲ್ಲ ಜೋಂಪಿಸಿತು. ಆವನ ಚಿತ್ತವು ಬಹುಪರಿಯಾಗಿ ಚಂಚಲವಾಯಿತು. ಭ್ರಮಿಷ್ಟನಂತೆ ಆವನು ಆ ವಿಶ್ವಯೋಷಿತೆಯ ಸುಂದರವಾದ ಮುಖವನ್ನು ನೋಡುತ್ತ ಕುಳಿತನು.

ತಾರಾಜಿಯು ಕುಲುಕುಲು ನಗುತ್ತ ಸುಗಂಧಮಯವಾದ ಅತ್ತರವನ್ನು ತನ್ನ ಅಂಗೈಯಲ್ಲಿ ಹಾಕಿಕೊಂಡು ಆವನ್ನು ಗಿರಿರಾಯನ ವಿಶಾಲವಾದ ಎದೆಗೂ ಪುಷ್ಟವಾಗಿರುವ ಆವನ ಮುಂಗೈಗೂ ಕಾಮಪರವಶಳಾಗಿ ತಿಕ್ಕಿದಳು. ಬಳಿಕ ಶಾನುಭೋಗರ ಬಾಳಪ್ಪನು “ತಾರಾಜೀ, ರಾಯರಂಥ ದೊಡ್ಡವರು ನಿನ್ನ ಮನೆಗೆ ಬಂದಿದ್ದಾರೆ, ಸರಸವಾಗಿ ಗಾನ ಮಾಡಬೇಕಲ್ಲವೆ ?” ಎಂದು ಕೇಳಿದನು. ವೀಣಾಮೃದಂಗಗಳ ಸಂಯೋಗವು ಸಿದ್ಧವಾಗಿಯೇ ಇತ್ತು. ತಾರಾಜಿಯು “ಏನೀದಚ್ಚರಿ ಪ್ರಿಯಾ, ಏಣಾಂಕವದನೆಯ ನೀನಗಲಿರುವದು ಉಚಿತವೇನೋ” ಎಂಬ ಪದವನ್ನು ಅಭಿನಯದೊಂದಿಗೆ ಒಳ್ಳೇ ಮಂಜುಲವಾಗಿ ಹಾಡಿದಳು.

ಆಯಿತು, ತಾರಾಜಿಯ ಉದಯವಾಯಿತು. ಬಿದಿಗೆಯ ಚಂದ್ರರೇಖೆಯಂತಿರುವ ಮನೋಹರಳಾದ ವಿಶಾಲಾಕ್ಷಿಗೆ ಬೇಗನೆ ಅಸ್ತಸಮಯವೂ ಪ್ರಾಪ್ತವಾಯಿತು. ಕುಲಾಂಗನೆಯೂ, ವಿನಯವತಿಯೂ, ಮರ್ಯಾದೆಶೀಲಳೂ ಆಗಿರುವ ವಿಶಾಲಾಕ್ಷಿಯು ಕೇವಲ ಅರಸಿಕೆಯೆಂದೂ, ನಿಜವಾದ ಸ್ತ್ರೀಸುಖವು ಪ್ರಾಪ್ತವಾಗಬೇಕಾದರೆ ವಾರಾಂಗನೆಯರಿಂದಲೇ ಎಂದೂ ಗಿರಿರಾಯನ ದೃಢವಾದ ಅಭಿಪ್ರಾಯವಾಯಿತು. ತಾರಾಜಿಯು ಕೊಟ್ಟ ‘ಕಸ್ತೂರಿಕಾ ಕೇಶರ ಹೇಮಮಿಶ್ರ’ವಾದ ತಾಂಬೂಲವನ್ನು ಸ್ವೀಕರಿಸಿ

ಉಳಿದವರೆಲ್ಲರೂ ಹೊರಟುಹೋದರು. ಗಿರಿರಾಯನೊಬ್ಬನೇ ತಾರಾಜಿಯ ಮೋಹಜಾಲದಲ್ಲಿ ಸಿಕ್ಕಿಕೊಂಡನು.

ಎಷ್ಟು ಸುವರ್ಣರಾಶಿಯನ್ನು ಸುರಿಸಿದರೂ ವಾರಾಶಿಯ ಒಡಲೂ ವಾರಾಂಗನೆಯ ಒಡಲೂ ತುಂಬುವದುಂಟೇ? ದಿನವೊಂದಕ್ಕೊಂದರಂತೆ ಗಿರಿರಾಯನ ಮನೆಯ ಅನರ್ಘವಾದ ಅಲಂಕಾರಗಳು ತಾರಾಜಿಯ ಪಾಲಾಗುತ್ತ ನಡೆದವು. ಹಿಡಿಹೊನ್ನು ಅವಳ ನಿತ್ಯದ ವೆಚ್ಚಕ್ಕೆ ಸಾಲದಾಗಿತ್ತು. ರಾಯರು ಸ್ವತಃ ಮಾಡುವ ವ್ಯಯಕ್ಕಾದರೂ ಮಿತಿಯಿಲ್ಲ. ಇಂದು ಎರಡು ಸಾವಿರ ರೂಪಾಯಿಯ ಬೆಲೆಯುಳ್ಳ ಕುದುರೆಯ ಜೋಡು ತಂದಿದ್ದರೆ ಮುಂದಿನ ತಿಂಗಳಿಗೆ ಮತ್ತೊಂದು ಜೋಡು. ಇಂದಿನ ಬೆಲೆಯುಳ್ಳ ಪೋಷಾಕು ನಾಳೆ ಮುಜುರೆ ಮಾಡಿದವನ ಪಾಲು. ನೃತ್ಯಗಾಯನಗಳ ವೆಚ್ಚ; ಫಲಾಹಾರಗಳ ವೆಚ್ಚ; ಸುಗಂಧ ದ್ರವ್ಯಗಳ ವೆಚ್ಚ. ನೀರು ತೋಡಿಹಾಕಿದಂತೆ ರಾಯರ ಮನೆಯ ಧನಕನಕಾದಿಗಳೆಲ್ಲ ಎರಡು ಮೂರು ವರುಷಗಳಲ್ಲಿ ಸವೆದುಹೋದವು.

ವಿಶಾಲಾಕ್ಷಿಯ ಕೊರಳಲ್ಲಿಯ ಚಂದ್ರಹಾರವು ತಾರಾಜಿಗೆ ಬೇಕಾಯಿತು. ಅದನ್ನು ತಂದುಕೊಡಲಿಕ್ಕೆ ಗಿರಿರಾಯನು ಒಪ್ಪಲಿಲ್ಲ. ಆ ಕ್ಷಣದಲ್ಲಿಯೇ ಗಿರಿರಾಯನು ಸಿಟ್ಟುಬೆಂಕಿಯಾಗಿ ಆ ರಂಡೆಯ ಮನೆಯಿಂದ ಹೊರಬಿದ್ದದ್ದನ್ನು ಜನರು ಕಂಡರು. ಮರುದಿವಸ ಅವನು ಅವಳ ಮನೆಗೆ ಹೋಗಲಿಲ್ಲ. "ಏನು ಚಮತ್ಕಾರವಿದು?" ಎಂದು ವೆಂಕಣ್ಣನು ಬಾಳಪ್ಪನನ್ನು ಕೇಳಿದನು. "ಏನೋ ವಿಪರೀತವಾಗಿರಬಹುದು. ತಾರಾಜಿಯು ತನ್ನ ಮೆತ್ತಗಿನ ಪಾದರಕ್ಷದಿಂದ ಮೆಲ್ಲನೆ ಒಂದೇಟು ಹೊಡೆದರೂ ಹೊಡೆದಿರಬಹುದು! ಹಾಃ ಹಾಃ ಹಾಃ!" ಎಂದು ಬಾಳಪ್ಪನು ನಕ್ಕನು.

ಪತಿಯು ನಾಲ್ಕುದಿವಸ ಮನೆಯಲ್ಲಿಯೇ ಇರುವದನ್ನು ಕಂಡು ತಪಸ್ವಿನಿಯಾದ ವಿಶಾಲಾಕ್ಷಿಗೆ ಸಮಾಧಾನವಾಯಿತು. ಪತಿಯನ್ನು ಕಂಡು ಅಲಂಕಾರಗಳನ್ನು ಕಳಕೊಂಡ ವ್ಯಸನದ ಪರಿಮಾರ್ಜನವಾದಂತಾಗಿ ಅವಳು ಒಳ್ಳೇ ಪ್ರೇಮದಿಂದ ಆತನ ಸೇವೆಯನ್ನು ಮಾಡತೊಡಗಿದಳು. ಪಾಪ, ಅವಳು ಉಬ್ಬಿನಿಂದ ಸತ್ಯನಾರಾಯಣನ ವ್ರತವನ್ನು ಮಾಡಿದಳು. ಆದರೆ ಸತ್ಯನಾರಾಯಣನಾದರೂ ಏನು? ನಾಳೆ ವಿಶಾಲಾಕ್ಷಿಯ ವೈರಿಯಾದ

ಅನ್ಯಕೋರ್ವಳು ಅದೇ ವ್ರತವನ್ನು ಮಾಡಿದರೆ, ಆ ದೇವನು ಗಿರಿರಾಯನು. ನನ್ನೊಬ್ಬನ್ನು ಅನ್ಯಳ ಸ್ವಾಧೀನ ಮಾಡಿದನೇ! 'ನಾ ಮಾಡಿದ ಕರ್ಮ ಬಲವಂತನಾದರೆ, ನೀ ಮಾಡುವದೇನೋ ಹರಿಯೇ' ಎಂದು ಹರಿದಾಸರು ಹೇಳಿದ್ದು ಸಟಿಯೇ?

ಕರ್ಮಧರ್ಮ ಸಂಯೋಗದಿಂದ ಗಿರಿರಾಯನಿದ್ದ ಊರಿಗೆ ಡೊಂಬರಾಟ ಬಂದಿತು. ಅವರಲ್ಲಿಯ ಓರ್ವ ಮೋಹನಾಂಗಿಯಾದ ಯುವತಿಯು ಬಹು ಚಮತ್ಕಾರವಾದ ಆಟಗಳನ್ನಾಡಿ ತೋರಿಸುತ್ತಿದ್ದಳಾದ್ದರಿಂದ ಆ ಡೊಂಬರಾಡಂಬರಕ್ಕೆ ಬಹುಜನರು ಮೋಹಿತರಾಗಿದ್ದರು. ಮಾನಪ್ಪನು ಗಿರಿರಾಯರ ಮನೆಗೆ ಬಂದು "ರಾಯರೇ, ಆ ಡೊಂಬತಿಯ ಆಟವನ್ನು ತಾವು ನೋಡದಿದ್ದರೆ ಹುಟ್ಟಿದ್ದು ಅಸಾರ್ಥಕವಾದಂತಾಗುವದೆ"ಂದು ಹೇಳಿದನು. ಕೇಳುವದೇನು? ಆಟಕ್ಕೆ ಪ್ರಾರಂಭವಾಯಿತು. ಹದಿನಾರು ವರುಷದ ಪ್ರಾಯದವಳಾದ ಆ ಡೊಂಬ ಸುಂದರಿಯು ಪಟ್ಟೆ ಪೀತಾಂಬರವನ್ನುಟ್ಟು, ತಲೆಗೆ ಚಿತ್ರಮಯವಾದ ಜರದ ಟೊಪ್ಪಿಗೆಯನ್ನಿಟ್ಟು, ಅಂತರದಲ್ಲಿ ಹಿಡಿದಿರುವ ಹಗ್ಗದ ಮೇಲೆ ಇಟ್ಟಿರುವ ಹರಿವಾಣದಲ್ಲಿ ತನ್ನ ಕಾಲುಗಳನ್ನಿಟ್ಟು, ಹರಿವಾಣವನ್ನು ಸರಿಸುತ್ತ ಹಗ್ಗದ ಈಚೆಯ ತುದಿಯಿಂದ ಆಚೆಯ ತುದಿಗೆ ಹೋಗುತ್ತಿರುವಾಗ ನಭಶ್ಚಾರಿಣಿಯಾದ ಊರ್ವಶಿಯಂತೆ ಕಂಡಳು. ಹಾಗೆ ನಡೆದಿರುವ ಆ ಒಯ್ಯಾರಿಯು ತನ್ನ ತೂಕವನ್ನು ಹಿಡಿದಿರುವದರಲ್ಲಿ ತದೇಕಧ್ಯಾನಳಾಗಿದ್ದರೂ ಆಗಾಗ ತನ್ನ ತೀಕ್ಷ್ಣವಾದ ಕಟಾಕ್ಷದಿಂದ ಗಿರಿರಾಯನನ್ನು ನೋಡುತ್ತಿರಲು ಆ ಹುಚ್ಚನು ಅವಳ ಮೋಹಪಾಶದಲ್ಲಿ ಸಂಪೂರ್ಣವಾಗಿ ಸಿಕ್ಕನು.

ತಾರೆಯ ಪ್ರಾಯಶ್ಚಿತ್ತಕ್ಕಾಗಿಯೇ ತಾನು ಆ ಡೊಂಬರ ಮೋಹಕವಾದ ಬೊಂಬೆಯನ್ನು ವಶಮಾಡಿಕೊಳ್ಳುವೆನೆಂದು ಹೇಳಿ ಗಿರಿರಾಯನು ಬಳ್ಳಾರಿಯಲ್ಲಿಯ ಬಂಗಲೆಗಳನ್ನು ಮಾರಿ ಹತ್ತು ಸಾವಿರ ರೂಪಾಯಿಗಳನ್ನು ತಂದು ಆವಳೊಡನೆ ದುರ್ವ್ಯಾಪಾರವನ್ನು ಮಾಡಲಾರಂಭಿಸಿದನು.

ಹರಿಕೆ ಹೊತ್ತು ಹಡೆದ ಮಗನು ಈ ರೀತಿ ದುರ್ಮಾರ್ಗಿಯಾಗಿ ಹಿರಿಯರ ಹೆಸರಿಗೆ ಕೇರಿನಂಥ ಕಲಂಕವನ್ನು ತಂದದ್ದಲ್ಲದೆ, ಮನೆಯ ಸಂಪತ್ತು ಈಡಾಡಿ ಸುಕುಮಾರಿಯಾದ ತನ್ನ ಸೊಸೆಯ ಸೌಖ್ಯಲತೆಗೆ ಬೆಂಕಿ ಹಾಕಿದ.

ನಲ್ಲಾ ಎಂಬ ವ್ಯಸನದಿಂದ ಗಿರಿರಾಯನ ತಾಯಿಯು ಹೃದ್ರೋಗವನ್ನು ತೆಗೆಲಿಸಿಕೊಂಡು ಸತ್ತುಹೋದಳು. ಗಿರಿರಾಯನಿಗೆ ಇದೊಂದು ಹಿತವೇ ಆಯಿತು. ಆದರೆ ಪಾಪ, ವಿಶಾಲಾಕ್ಷಿಗೆ ಕಟ್ಟೆಡವಿಯಲ್ಲಿ ಕಣ್ಣು ಕಟ್ಟಿಬಿಟ್ಟಂತಾಯಿತು. ಡೊಂಬತಿಯು ಮನೆಯಲ್ಲಿಯೇ ಬಂದು ಕುಳಿತಳು. ಎಲ್ಲ ಕಾರಭಾರವೂ ಅವಳ ಕೈಸೇರಿಹೋಯಿತು.

ವಿಶಾಲಾಕ್ಷಿಗೆ ತೀವ್ರವಾದ ಮಾನಹಾನಿಯ ವೇದನೆಯಾಯಿತು. ತನ್ನ ದೇವತೆಯಾದ ಪತಿಯು ಕುಮಾರ್ಗಿಯಾಗಿ ಕೆಟ್ಟುಹೋಗುತ್ತಿರುವದನ್ನು ಅವಳು ಕಣ್ಣಲಿ ನೋಡಲಾರಳು. ಸಂಸಾರದ ಸುಖವಂತೂ ಅವಳಿಗೆ ಚಿಕ್ಕಂದಿನಲ್ಲಿಯೇ ಇಲ್ಲದಂತಾಯಿತು. ಅಪ್ಸರೆಯರಿಗಿಂತಲೂ ಮಿಗಿಲಾಗಿರುವ ಆ ನವತರುಣಿಯು ವ್ಯಸನಾತಿರೇಕದಿಂದ ಸೊರಗಿ ಕಡ್ಡಿಯಾದಳು. ಶಶಿಬಿಂಬದಂತೆ ಮನೋಹರವಾಗಿರುವ ಅವಳ ಮುಖವು ಹುಚ್ಚಿಟ್ಟು ಸುರಿಯಿತು. ಪತಿವ್ರತೆಯೂ ಧರ್ಮಶೀಲಳೂ ಆಗಿರುವ ಆ ಸತಿಯು ನಿತ್ಯದಲ್ಲಿಯೂ ಬೊಗಸೆ ಬೊಗಸೆ ಕಣ್ಣೀರು ಸುರಿಸಿ ದೇವರಿಗೆ ಎಷ್ಟು ಪರಿಯಾಗಿ ಪ್ರಾರ್ಥಿಸಿದರೂ ಆ ನಿರ್ಗುಣನಾದ ಪರಮಾತ್ಮನಿಗೆ ಕರುಣೆ ಬರಲಿಲ್ಲ ಆದರೂ ಆ ಕುಲಾಂಗನೆಯು ಪತಿಯ ಆಜ್ಞೆಯನ್ನು ಬೊಗಸೆಯೊಡ್ಡಿ ಅಂಗೀಕರಿಸಿ ಸಮಾಧಾನದಿಂದಲೂ, ವಿನಯದಿಂದಲೂ ಹೇಳಿದಷ್ಟು ಕೆಲಸ ಮಾಡಿಕೊಂಡು ಇದ್ದಳು. ಅಮ್ಮಾ, ವಿಶಾಲಾಕ್ಷಿ, ನಿನ್ನ ವಾರ್ತೆಯನ್ನು ಕೇಳಿಯೇ ದುಃಖದಿಂದ ನಮ್ಮ ಗಂಟಲು ಬಿಗಿದುಬರುತ್ತಿರಲು, ನೀನು ನಿನ್ನ ಪುಣ್ಯದ ಬಲದಿಂದಲೇ ಅದನ್ನೆಲ್ಲ ಸಹಿಸುತ್ತಿರುವಿಯಲ್ಲವೆ ?

ಇರಲಿ. ಗಿರಿರಾಯನು ಕಡೆಗೆ ತನ್ನ ಉಂಬಳಿಯ ಚಿನ್ನೂರು ಗ್ರಾಮವನ್ನು ಮದರಾಸಿನಲ್ಲಿಯ ಓರ್ವ ವರ್ತಕನಿಗೆ ಮಾರಿಕೊಂಡು ಊರು ಬಿಟ್ಟು ಹೊರಟಿದ್ದು ನಡೆದನು. ಇಂದು ನಾಳೆ ಊರಿಗೆ ಮರಳಿ ಬರುವೆನೆಂದು ವಿಶಾಲಾಕ್ಷಿಗೆ ಸುಳ್ಳು ಹೇಳಿ ಹೋದ ಗಿರಿರಾಯನು ಮರಳಿ ಬರಲೇ ಇಲ್ಲ.

ವರುಷಾರು ತಿಂಗಳುಗಳಲ್ಲಿಯೇ ಮನೆ ಮಾರಿದ ಹಣವೆಲ್ಲ ಹಾರಿಹೋಯಿತು. ಸರಕಾರದಿಂದ ತಿಂಗಳಾ ಇನ್ನೂರು ರೂಪಾಯಿ ಬರುವದನ್ನು ಅವನು ಆ ಡೊಂಬತಿಯ ಸ್ವಾಧೀನ ಮಾಡುವನು. ಅವಳು ಅದರಲ್ಲಿ ಹತ್ತು ರೂಪಾಯಿಗಳನ್ನು ಓರ್ವ ಅಡುಗಲಜ್ಜಿಗೆ ಕೊಟ್ಟು ಗಿರಿರಾಯನಿಗೆ

ಕೊಳು ಹಾಕಲು ಹೇಳಿ ಉಳಿದ ಹಣವನ್ನು ತನ್ನ ಸ್ವೇಚ್ಛೆಯಿಂದ ವೆಚ್ಚ ಮಾಡುವಳು. ಧನಹೀನನೂ ಅರ್ಥಾತ್ ತೇಜೋಹೀನನೂ ಆಗಿರುವ ಗಿರಿರಾಯನನ್ನು ಆ ಜಾತಿಗಾರರತಿಯು ಪ್ರೀತಿಸದಾದಳು. ಆದರೂ ಆ ಮೂರ್ಖನು ಆ ಪಾಪಕರ್ಮಿಣಿಯ ಬಾಗಿಲಲ್ಲಿ ನಾಯಿ ಬಿದ್ದಂತೆ ಕಾದುಕೊಂಡು ಬಿದ್ದಿರುವನು.

ಇಲ್ಲಿ ನೋಡಬನ್ನಿರಿ: ಗಿರಿರಾಯನು ಒಂದು ಧರ್ಮಶಾಲೆಯಲ್ಲಿ ಹರಕು ಚಾಪಿನ ಮೇಲೆ ಮೇಹರೋಗದ ವೇದನೆಯಿಂದ ವ್ಯಥಿತನಾಗಿ ಹೊರಳಾಡುತ್ತಿರುವನು. ಅವನಿಗೆ ನೀರಡಿಕೆಯಾಗಿದೆ, ಬಾಯಿಯಲ್ಲಿ ನಾಲ್ಕು ಕಾಳು ನೀರು ಹಾಕುವವರಿಲ್ಲ. ತನ್ನ ಹೆಂಡತಿಯ ಸದ್ಗುಣಗಳನ್ನೂ ಅವಳ ಪತಿಸೇವಾತತ್ಪರತೆಯನ್ನೂ ನೆನೆದು "ವಿಶಾಲಾಕ್ಷೀ! ವಿಶಾಲಾಕ್ಷೀ!" ಎಂದು ಕೂಗಿ ಅತ್ತನು.

ಆ ಸಮಯದಲ್ಲಿ ವಿಶಾಲಾಕ್ಷಿಯು ತನ್ನ ಪತಿಗೆ ಹಿತವಾಗಲೆಂದು ನೆನಸಿ ತಿರುಪತಿಯ ವೆಂಕಟೇಶ್ವರನ ಮುಂದೆ ಇಳಿಯೊದ್ದಿಯನ್ನು ಟ್ಟುಕೊಂಡು ಪ್ರಾಣಾಚಾರಿಯಾಗಿ ಬಿದ್ದಿದ್ದಳು. ಮದರಾಸಿನಲ್ಲಿ ಕೂಗುತ್ತಿರುವ ಗಂಡನ ಸೊಲ್ಲು ಗಿರಿಯಲ್ಲಿ ಮಲಗಿದ ವಿಶಾಲಾಕ್ಷಿಯ ಕಿವಿಡೆರೆಗೆ ಬಿದ್ದಿತು. ಭಯಗ್ರಸ್ತಳಾಗಿ ಆ ಮಹಾಸತಿಯು ಕಣ್ತೆರೆಸಿಕೊಂಡಿದ್ದು ನೋಡುತ್ತಾಳೆ, ಜಗನ್ಮಾತೆಯಾದ ಲಕ್ಷ್ಮೀದೇವಿಯು ಧಾವಿಸಿ ಬಂದು ಅವಳನ್ನು ಗಟ್ಟಿಯಾಗಿ ಅಪ್ಪಿಕೊಂಡಳು. "ಮಗುವೆ, ಈ ಜನ್ಮದ ಸುಖವನ್ನು ನೀನು ಪರಮಾತ್ಮನಲ್ಲಿ ಬೇಡಿಕೊಂಡು ಬರಲಿಲ್ಲ, ಯತ್ನವೇನಿದೆ? ಮುಂದಿನ ಜನ್ಮದಲ್ಲಿ ನಿನಗೆ ಅಖಂಡವಾದ ಸೌಭಾಗ್ಯವನ್ನೂ ಸಂಪತ್ತನ್ನೂ ಕೊಟ್ಟು ಬಳಿಕ ನಿನಗೆ ಮೋಕ್ಷವನ್ನು ಕೊಡುವೆನು." ಎಂದು ಹೇಳಿ ಲಕ್ಷ್ಮೀದೇವಿಯು ವಿಶಾಲಾಕ್ಷಿಯ ಪರಮಪವಿತ್ರವಾದ ಆತ್ಮವನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡಳು.

ಇತ್ತ ಗಿರಿರಾಯನು ನೀರು ನೀರೆಂದು ದೇಶಿಗನಂತೆ ಪ್ರಾಣಬಿಟ್ಟನು.

# ದುರಾಶಾ ದುರ್ವಿಪಾಕ

"ಒಳ್ಳೇದು, ಅವನನ್ನು ಒಳಗೆ ಬರಹೇಳು" ಎಂದು ಪ್ರೇಮಚಂದನು—ಘನವಾದ ವ್ಯಾಪಾರಸ್ಥನು— ಆಢ್ಯತೆಯಿಂದ, ತಾನು ಆಡುವ ಒಂದೊಂದು ಶಬ್ದವನ್ನು ತೂಕಮಾಡಿ ಚೆಲ್ಲುವಂತೆ ಸಾವಕಾಶವಾಗಿ ನುಡಿದನು.

ಬಾಗಿಲಲ್ಲಿ ನಿಂತಿದ್ದ ವೃದ್ಧ ಗುಮಾಸ್ತನು, ನಿಂತಲ್ಲಿಯೇ ಅನುಮಾನಿಸಿದಂತೆ ಮಾಡಿ, ಹಿಂದು ಮುಂದೆ ನೋಡಹತ್ತಿದನು.

"ನಿಜವಾಗಿ ಕೇಳಿದರೆ, ನೀವು ಈಗ ಅವನ ಭೆಟ್ಟಿಯನ್ನೇ ತಕ್ಕೊಳ್ಳಬಾರದು, ಎಂದು ತೋರುತ್ತದೆ" ಎಂದು ಆ ಗುಮಾಸ್ತನು ಅಂದನು.

"ಭೆಟ್ಟಿ ಆಗಬಾರದೆ? ಅದೇಕೆ?" ಎಂದು ಪ್ರೇಮಚಂದನು ಯಾವದೋ ಹುಂಡಿಯನ್ನು ಬರೆದು ಸಹಿ ಮಾಡಮಾಡುತ್ತ ಕೇಳಿದನು: "ನನಗಂತು ಅವನನ್ನು ಕಾಣದಿರುವದಕ್ಕೆ ಕಾರಣವೇನೂ ತೋರುವದಿಲ್ಲ."

"ಇರಲಿ, ಆದರೂ....ಅವನು ತುಸುಮಟ್ಟಿಗೆ ರೇಗಿಗೆದ್ದಂತೆ ತೋರುತ್ತದೆ. ಯಾವಾಗಲಾದರೂ ಒಂದಿಲ್ಲೊಂದು ತಕರಾರಿನ ಸುದ್ದಿಯನ್ನಂತೂ ಅವನು ಆಡಲಿಲ್ಲವೆಂದು ನಾವೆಂದು ಕಂಡಿದ್ದೇವೆ? ಅವನ ದುಃಖಗಳೆಲ್ಲವೂ ಕೇವಲ ಕಲ್ಪನಾಜನ್ಯವೆಂಬುವದಂತೂ ನಿಮಗೆ ಗೊತ್ತೇ ಅದೆ."

ಪ್ರೇಮಚಂದನು ಮುಂಬಯಿಯಲ್ಲಿಯದೊಂದು ಪ್ರಖ್ಯಾತವಾದ ಗಿರಣಿಯಲ್ಲಿಯ ಪಾಲುಗಾರನು. ಈ ಸಂಘವು 'ಪ್ರೇಮಚಂದ ರಾಯಚಂದ ಮತ್ತು ಸನ್ಸ್' ಎಂಬ ಹೆಸರಿನಿಂದ ಪ್ರಸಿದ್ಧವಿತ್ತು. ಈ ಕಂಪನಿಯವರ ವಶದಲ್ಲಿ ನಾಲ್ಕೆಂಟು ಗಿರಣಿಗಳು ಇದ್ದವು. ತನ್ನ ಗುಮಾಸ್ತನ ಮಾತು ಕೇಳಿ ಪ್ರೇಮಚಂದನು ಮುಗುಳುನಗೆ ನಕ್ಕನು. ಈ ನಗೆಯು ಅವನ ಆಯುಷ್ಯದೊಳಗಿನ ಐವತ್ತು ವರ್ಷಗಳ ಕಳೆಯನ್ನು ಹಿಮ್ಮೆಟ್ಟಿಸಿತು. ಜನ್ಮವೆಲ್ಲವೂ ವ್ಯಾಪಾರದ ವಿಶೇಷವಾದ ಚಾತುರ್ಯದಲ್ಲಿ ಕಳೆದವನ ನಗೆಯೇ ಅದು. ಅದರಲ್ಲಿ ಮನೋಭಾವವು ಮೇಲು ಮೇಲೆಯೇ ಕಾಣುತ್ತಿತ್ತೆಂದರೆ ಚಾತುರ್ಯದ ಲವಲೇಶವಾದರೂ ಅಲ್ಲಿ ಹೇಗೆ ಕಂಡುಕೊಳ್ಳಬೇಕು?

"ಮತ್ತೂ ನಾವು ಎಂದಿನಿಂದ ನಮ್ಮಲ್ಲಿಯ ನೌಕರರ ತಕರಾರು

ಗಳನ್ನು ಕೇಳಿಲ್ಲ!" ಎಂದು ಪ್ರೇಮಚಂದನು ಸಾವಕಾಶವಾಗಿ ನುಡಿದನು.

"ಆಗಾಗ ಹೇಳುವವರ ಮಾತುಗಳನ್ನೆಲ್ಲ ಧನಿಯರು ಕೇಳೀ ಕೇಳುತ್ತಿರುವದುಂಟು" ಎಂದು ಆ ಮುದುಕನು ಅಂದನು. "ಆದರೆ ಯಶೋಧರನ ಆ ಗಂಟುಮೋರೆಯನ್ನೇ ನಾನು ನೋಡಲಾರೆ. ಈಗ ಒಳಗೆ ಬಂದು ಮನಸ್ಸಿಗೆ ಬಂದಂತೆ ಅವನು ಮಾತನಾಡಲಿಕ್ಕಿಲ್ಲೆಂದು ನಾನೇನು ಹೇಳಲಾರೆ."

ಪ್ರೇಮಚಂದನು ನಕ್ಕನು. "ಇರಲಿ, ಅವನನ್ನು ಒಳಗಂತು ಬರಗೊಡು, ಹೂಂ, ಏನೂ ಅಡ್ಡಿ ಇಲ್ಲ, ಅವನು ಒಳಗೆ ಬರಲಿ" ಎಂದು ಗುಮಾಸ್ತನಿಗೆ ಹೊರಗೆ ಹೋಗಲಪ್ಪಣೆ ಮಾಡಿದಂತೆ ಪ್ರೇಮಚಂದನು ಕೈಸನ್ನೆ ಮಾಡಿದನು.

"ಯಾಕಾಗವಲ್ಲದು" ಎಂದು ಅಂದಂತೆ ತಲೆ ಅಲ್ಲಾಡಿಸಿ ಗುಮಾಸ್ತನು, ಸರಾಫನು ಕೂಡುವ ಸ್ಥಳದ ಮಗ್ಗಲಿಗಿದ್ದ ಬಾಗಿಲದಿಂದ ಹೊರಬಿದ್ದನು.

ಇನ್ನೊಂದು ಕ್ಷಣದಲ್ಲಿ ಯಶೋಧರನು ಪ್ರೇಮಚಂದನ ಕೋಣೆಯ ಬಾಗಿಲು ತೆರೆದು ಒಳಗೆ ಬಂದನು. ಯಶೋಧರನು ಸಾಧಾರಣ ಎತ್ತರವಾದ ಆಳು; ಎದೆಕಟ್ಟು ಅಷ್ಟು ಅಗಲಾದದ್ದಲ್ಲದಿದ್ದರೂ ಮೈ-ಕೈಗಳು ಹುರಿಕಟ್ಟಾಗಿದ್ದವು. ಮೂವತ್ತು ಮೂವತ್ತೆರಡು ವರ್ಷದ ವಯಸ್ಸು. ಮುಖಚರ್ಯದ ಮೇಲಿಂದಲೂ, ಔದಾಸೀನ್ಯಪೂರ್ಣವಾದ ಅವನ ಒಳನಟ್ಟ ಕಣ್ಣುಗಳ ಮೇಲಿಂದಲೂ, ತಲೆತುಂಬ ಇದ್ದ ಆ ಅರ್ಧಸುರ್ಧ ಜಡೆಗಟ್ಟಿದ ಕೂದಲುಗಳಿಂದಲೂ, ಮಲಿನವಾದ ಹಲ್ಲುಗಳು, ಆ ತೆರೆದ ಬಾಯಿಯೂ, ಇರಬೇಕಾದ್ದರಕಿಂತಲೂ ಸ್ವಲ್ಪ ಕೆಳಗೆ ಹಾಯ್ದು ಗದ್ದವೂ ಇವೆಲ್ಲವುಗಳನ್ನು ನೋಡುವವರಿಗೆ ಅವನೇನೋ 'ಬುದ್ಧಿವಂತ'ನಿರಬೇಕೆಂದು ತರ್ಕವಾಗುವಂತಿತ್ತು. ಆ ಬಾಗಿಲವನ್ನು ಮುಚ್ಚಿದವನೇ ಯಶೋಧರನು ಅದಕ್ಕೆ ಬೆನ್ನು ಕೊಟ್ಟು ನಿಂತುಕೊಂಡನು. ಎಂದೂ ಓಡಲಾರದವನು ಹೊಗೆಬಂಡಿಯು ತನ್ನನ್ನು ಬಿಟ್ಟು ಮುಂದಕ್ಕೆ ಸಾಗೀತೆಂದು ಬಳ್ಳೇ ಅವಸರದಿಂದ ಕೈಕಾಲು ಸಡಿಲು ಬಿಟ್ಟು ಓಡೋಡಿ ಹ್ಯಾಗೋ ಆ ಬಂಡಿಯನ್ನು ಮುಟ್ಟಿದವನಂತೆ ಇವನು ದೀರ್ಘಶ್ವಾಸ ಬಿಡುತ್ತಿದ್ದನು. ಹೊರಗೆ ಬಿಟ್ಟ ಉಸಿರು ಒಳದುಗ್ಗುವಾಗ ಅವನ ಕೈಬೆರಳುಗಳು ನಡುಗಿ ಒಳಸೇದಿಕೊಳ್ಳುತ್ತಿದ್ದವು.

“ ಜಯಗೋಪಾಳ, ಯಶೋಧರಾ, ಕೂತುಕೋ ” ಎಂದು ಪ್ರೇಮಚಂದನು ಯಶೋಧರನನ್ನು ನೋಡಿ, ಒಂದೆರಡು ನೋಟಗಳಲ್ಲಿಯೇ ಅವನ ಮನದಿಂಗಿತವನ್ನು ತಿಳಿದುಕೊಂಡವನಂತೆ, ತನ್ನ ಆಸನದಲ್ಲಿ ಒಳ್ಳೇ ಸುಖಪೂರ್ಣನಾಗಿ ಕುಳಿತುಕೊಂಡನು.

“ ಏನೂ ಅಡ್ಡಿಯಿಲ್ಲ, ಶೇಟಜೀ, ಆದರೆ ನಾನು ನಿಂತುಕೊಂಡೇ ಮಾತಾಡಬೇಕೆನ್ನುತ್ತೇನೆ. ”

“ ನಿನ್ನ ಮನಸ್ಸಿನಂತೆ ಮಾಡು........ ಒಳ್ಳೇದು, ನನ್ನ ಭೆಟ್ಟಿಯು ನಿನಗೇಕೆ ಬೇಕಾಯಿತೀಗ ? ಅಂಥ ಕೆಲಸವಾದರೂ ಯಾವದು ? ಉಳಿದ ಜನರಂತೂ ನಿನ್ನ ಗೋಜಿಗೆ ಹೋಗುವಂತಿಲ್ಲೆಂದು ತೋರುತ್ತದೆ. ”

“ ಏನೇನೂ ಇಲ್ಲ. ”

ಪ್ರೇಮಚಂದನು ತಿರುಗಿ ಮಾತಾಡುವದಕ್ಕೆ ತುಸು ತಡವಾಯಿತು.

“ ಆಗಲಿ, ಹೊರಬೀಳಲಿ; ನೀನು ಎಷ್ಟೂ ಅಂಜಬೇಡ. ನೀನು ಏನೋ ಹೇಳಬೇಕೆಂದೆನ್ನುತ್ತೀ, ಆಹುದೋ ಅಲ್ಲವೋ ? ”

ಯಶೋಧರನು ವೈಕ್ಲೈಗಳನ್ನು ನಿದ್ದೆಯೊಳಗಿಂದ ಎದ್ದವನಂತೆ ನಿಂತಲ್ಲಿಯೇ ಚಾಚಿ ಸಾವರಿಸಿಕೊಂಡನು.

“ ಆಹುದು, ನನ್ನದೊಂದು ಮಾತು ತಮಗೆ ತಿಳಿಸತಕ್ಕದ್ದಿತ್ತು. ಆಯಿತು— ನೀವು ಯಾವಾಗಲೂ ಅನ್ನುವಂತೆ ಅದನ್ನು ‘ ತಕರಾರು ’ ಎಂದೇ ಕರೆಯಿರಿ. ಬಹಳೇನು ? ನನ್ನನ್ನು ನೀವು ನೆಟ್ಟಗೆ ಇಟ್ಟುಕೊಳ್ಳುವದಿಲ್ಲ ಸರಿ ” ಎಂದು ಯಶೋಧರನು ಜಡವಾದ ಸ್ವರದಿಂದ ನುಡಿದನು.

“ ನಿಜವಾಗಿಯೇ ? ಯಾವ ಬಗೆಯಿಂದ ? ”

“ ನಾನು ಶೋಧಿಸಿದ ಆ ಹೊಸ ಯಂತ್ರದ ಸಂಬಂಧದಿಂದ. ”

“ ಸಾಗಲಿ, ಯಶೋಧರಾ, ನಿನ್ನ ಮಾತು ಮುಗಿಸು. ಅನ್ನುವದನ್ನೆಲ್ಲ ಒಮ್ಮೆ ಹೇಳಿಯೇಬಿಡು. ”

“ ನೀವು ನನ್ನ ‘ ಶೋಧದಿಂದ ’ ಇಪ್ಪತ್ತು ಸಾವಿರ ರೂಪಾಯಿಗಳನ್ನು ಗಳಿಸಿಕೊಂಡದ್ದು ಈ ಮೊದಲೇ— ”

ಪ್ರೇಮಚಂದನ ಮೋರೆಯು ಒಮ್ಮೆಲೆ ಕೆಂಪಾಯಿತು. “ ಅದಕ್ಕೆಲ್ಲ ನಾನೇ ಒಡೆಯನಲ್ಲವೆ ? ಅದೆಲ್ಲವೂ ನನ್ನ ಕೆಲಸ. ”

"ಆದರೆ ಆ ಯಂತ್ರವನ್ನು ಶೋಧಿಸಿದವನು ನಾನು, ಪ್ರೇಮಚಂದರೆ."

"ನನಗೆ ಬಂದ ಲಾಭದ ಲೆಕ್ಕವು ನಿನಗೆಲ್ಲಿಂದ ಸಿಕ್ಕಿತು ? ಈ ಪ್ರಶ್ನೆವನ್ನು ನಾನು ಕೇಳಬಹುದಲ್ಲವೆ ?"

"ಆ ಲೆಕ್ಕವನ್ನು ನಾನು ನನ್ನಷ್ಟಕ್ಕೇ ಮಾಡಿಕೊಂಡೆನು. ಅದಕ್ಕೆ ಹತ್ತುವ ಸಾಹಿತ್ಯಸಂಗ್ರಹದ ಬೆಲೆ, ಅದನ್ನು ಮಾಡುವದಕ್ಕೆ ಬೇಕಾಗುವ ಶ್ರಮದ ಬೆಲೆ, ಈಗ ಅದನ್ನು ಮಾರುವ ಕ್ರಯ ಇವೆಲ್ಲವುಗಳನ್ನು ಅರಿತವನಾದ್ದರಿಂದ, ನಿಮ್ಮ ಲಾಭದ ಲೆಕ್ಕವು ತಿಳಿಯದೆ ? ಇದೆಲ್ಲದರ ಮೇಲಿಂದ ನೀವು ನನ್ನನ್ನು ಒಳಿತಾಗಿ ಇಟ್ಟುಕೊಂಡಿಲ್ಲೆಂಬದು ಮೇಲೆಯೇ ತೋರುತ್ತಿದೆ. ನನಗೆ 'ನ್ಯಾಯದಾನ' ಮಾಡುವಿರೆಂಬದೇ ನನ್ನ ಬಯಕೆ. ನಾನು ನ್ಯಾಯವನ್ನಪೇಕ್ಷಿಸುವೆನು, ಪ್ರೇಮಚಂದ."

"ನ್ಯಾಯವೇತರದು ? ಹಣವೇ ಬೇಕೆನ್ನಬಾರದೆ ?" ಎಂದು ವಯಾತೀತನಾದ ಪ್ರೇಮಚಂದನು ಉತ್ತೇಜಿತವಾದ ಸ್ವರದಿಂದ ಸ್ವಲ್ಪ ಸಿಟ್ಟು ತಾಳಿದವನಂತೆ ಕೇಳಿದನು. "ಇರಲಿ, ಯಶೋಧರಾ, ನೀನು ನನ್ನನ್ನು ಈ ಮೂರು ವರುಷಗಳಿಂದ ಮಾತ್ರ ಬಲ್ಲಿಯಷ್ಟೆ ? ಆದರೆ ಕಳೆದ ಹದಿನೈದು ವರುಷಗಳಿಂದಲೂ ನಾನು ನನ್ನ ಕಾರಖಾನೆಗಳಲ್ಲಿದ್ದ ನೌಕರರನ್ನು ನ್ಯಾಯದಿಂದಲೇ ನಡೆಯಿಸಿಕೊಳ್ಳುತ್ತೇನೆ. ಅವರು ತಮ್ಮ ತಕರಾರುಗಳನ್ನು ಬೇಕಾದಾಗ ನನ್ನ ಮುಂದೆ ಹೇಳಬೇಕೆಂದು ನಾನು ಅವರೆಲ್ಲರಿಗೂ ಆಗಾಗ ತಿಳಿಸುತ್ತೇನೆ. ಸಕಾರಣವಾದಂಥವುಗಳನ್ನೆಲ್ಲ ನ್ಯಾಯದೃಷ್ಟಿಯಿಂದಲೇ ನೋಡುತ್ತಿರುವೆನೆಂಬದು ಎಲ್ಲರಿಗೂ ಗೊತ್ತಿದ್ದ ಮಾತು. ಇನ್ನು ಈ 'ನ್ಯಾಯದಾನ'ದ ಕಾರ್ಯವು ನನ್ನಿಂದ ಹೇಗೆ ಪಾರುಗಂಡಿರುವದೆಂಬದನ್ನು ನಾನೇನು ಹೇಳಲಿ? ಆದರೂ ಯಜಮಾನ-ಸೇವಕರಲ್ಲಿಯ ಸಂಬಂಧಗಳು ಈ ಹದಿನೈದು ವರುಷಗಳಲ್ಲಿ ಕ್ಷೇಮದಿಂದಿರುತ್ತವೆ. ನಮ್ಮ ಸಂಘದ ಮುಖ್ಯ ಪಾಲುಗಾರನೆಂದು ಕಾರ್ಯವಾಹಕತನವು ನನ್ನ ಮೇಲೆಯೇ ಇರುವದು. ಎಲ್ಲಕ್ಕೂ ನಾನೇ ಬಾಧ್ಯಸ್ಥನಂತಿದ್ದುದರಿಂದ ಸರಿತೋರಿದಾಗ, ಸೇವಕರು ಬೇಡುವ ಅನುಕೂಲಗಳನ್ನು ನಾನು ಆಗಾಗ ಮಾಡಿಕೊಡುತ್ತಲೇ ಬಂದಿರುವೆನು. ಯಾವದೊಂದು 'ಲಿಮಿಟೆಡ್' ಕಂಪನಿಯ ಪಾಲುಗಾರನಾಗಿದ್ದೆನಾದರೆ ಆ ಮಾತು ಬೇರೆಯಾಗುತ್ತಿತ್ತು. ನನ್ನ ಜನರು— ಅವರಲ್ಲಿ ಎಷ್ಟೋ ಜನರಾದರೂ—ಈ

ಸಂಗತಿಯನ್ನು ನಿನಗೆ ಅಂಜಿಕಿಲ್ಲದೆ ಹೇಳಿಯಾರು." ಪ್ರೇಮಚಂದನೂ ಸ್ವಲ್ಪ ತಡೆದು ಯಶೋಧರನನ್ನು ದಿಟ್ಟಿಸಿ ನೋಡಿದನು.

ಯಶೋಧರನು ಖೇಕರಿಸಿ ಗಂಟಲು ಸಡಿಲು ಮಾಡಿಕೊಂಡನು. "ಇದೆಲ್ಲವೂ ನಿಜವಿರುವದು ಶೇಟಜೀ," ಎಂದು ಉದಾಸೀನತೆಯಿಂದ ಅಂದನು. "ಆದರೆ, ನನ್ನ ಸುಧಾರಿಸಿದ ಯಂತ್ರವು ...."

"ಬಹಳ ಛಲೋದು! ಈ ಕ್ಷಣಕ್ಕೆ ನಿನ್ನ ಯಂತ್ರವನ್ನು ಚಿಕಿತ್ಸಿಸುವ.... ಆದರೂ ಅದು ನನ್ನ ಯಂತ್ರವೆಂದೇ ಕ್ಷಣಹೊತ್ತು ತಿಳಿದುಕೊಳ್ಳತಕ್ಕದ್ದೆಂಬ ದನ್ನು ಮಾತ್ರ ಮರೆಯಬೇಡ."

ಶೋಧಕನು ಇದನ್ನು ಕೇಳಿ ಬಾಯಿತೆರೆದನು; ಆದರೆ ಏನೂ ಮಾತಾಡ ಲಾರದೆ, ತಡೆದುಕೊಂಡು ಸುಮ್ಮನೇ ನಿಂತದ್ದನ್ನು ಕಂಡು ಯಜಮಾನನು ಮುಂದೆ ಸಾಗಿದನು.

"ಆ ಯಂತ್ರದ ಚಿಕ್ಕ ಇತಿಹಾಸವೇ ಇಲ್ಲಿ ಇರುವದು, ನೋಡು" ಎಂದು ಅಂದವನೇ ಎದುರಿನಲ್ಲಿದ್ದ ಕಪಾಟಿನೊಳಗಿಂದ ಒಂದು ಸಣ್ಣ ನೋಟ ಬುಕ್ಕನ್ನು ತೆಗೆದನು. "ಒಳ್ಳೇದು, ಕೇಳಬೇಕೆಂದು ಕೇಳುತ್ತೇನೆ. ತಾವು ಮೂರು ವರುಷದ ಕೆಳಗೆ ಇಲ್ಲಿಗೆ ಬಂದಾಗ ತಮಗೆ ಸಂಬಳವೆಷ್ಟು ಸಿಗುತ್ತಿತ್ತು? ವಾರಕ್ಕೆ ಹದಿನೈದು ರೂಪಾಯಿಗಳೇ ಅಲ್ಲವೆ?" ಯಶೋಧರನು ಗೋಣುಹಾಕಿದನು. "ಸರಿಯಾಗಿರುವದಷ್ಟೆ. ನಮ್ಮಲ್ಲಿ ಒಂದು ವರುಷ ಮಾಟ್ಟಿಗಿದ್ದನಂತರ, ನೀನು ಒಂದು ದಿನ ನನ್ನ ಹತ್ತರ...." ಪ್ರೇಮಚಂದನು ಮೊದಲನೆಯ ಪುಟವನ್ನು ನೋಡಿ, "ಹದಿನಾರನೆಯ ಫೆಬ್ರುವರಿಯ ದಿವಸ... ಹೌದು.... 'ಸುಧಾರಿಸಿದ ಯಂತ್ರ'ದ ಕಲ್ಪನೆಯನ್ನು ಹೇಳ ಬೇಕೆಂದು ಬಂದಿಯಷ್ಟೆ. ಅದಕ್ಕೆ ಒಪ್ಪಿಕೊಂಡು, ನಿನ್ನನ್ನು ದಿನದ ಕೆಲಸದಿಂದ ಬಿಡಿಸಿ, ನಿನ್ನ ಶೋಧಕ್ಕೆ ಮೂರ್ತಸ್ವರೂಪವನ್ನು ಕೊಡಲಪ್ಪಣೆ ಕೊಟ್ಟದ್ದಾ ಯಿತು. ಹತ್ತನೆಯ ಮೇದ ದಿನ ನೀನೊಂದು ಮಾದರಿಯನ್ನು ಮಾಡಿ ಕೊಟ್ಟೆ. ಮುಂದೆ ಒಂದು ತಿಂಗಳಾದ ಮೇಲೆ, ನಿನ್ನ 'ಶೋಧ'ವನ್ನು ಮಾರತಕ್ಕೊಂಡು ಆದಕ್ಕೆ ಪ್ರತಿಫಲವಾಗಿ 'ಸ್ವಾಮಿತ್ವ'ದ ಹಣವನ್ನು ಕೊಡಲು ನಾನು ಒಪ್ಪಿಕೊಂಡೆನು. ಅದಕ್ಕೆ ನೀನು ಸ್ವಾಮಿತ್ವವನ್ನು ಒಲ್ಲೆ ನೆಂದು ಹೇಳಿ, ಒಮ್ಮೆಯೇ ಎಷ್ಟಾದರೊಂದು 'ರಕಮು' ಕೊಡಿರೆಂದು

ಕೇಳಿದಿ. ಅದನ್ನು ನಾನು ಮುಂದೆಮಾಡಲಿಲ್ಲ. ನೀನು ವಿಚಾರಮಾಡುತ್ತೀನೆಂದು ಹೇಳಿ, ಎರಡು ತಿಂಗಳುಗಳಲ್ಲಿ, ಸುತ್ತುಮುತ್ತಲಿನ, ಎಲ್ಲ ವ್ಯಾಪಾರಸ್ಥರಿಗೂ ಕೇಳಿ ನೋಡಿದಿ.... ”

ಇದಕ್ಕೆ ಯಶೋಧರನು ಉತ್ತೇಜಿತನಾಗಿ ಉಚ್ಚಸ್ವರದಿಂದ ಉದ್ಗಾರ ತೆಗೆದನು; ಅವನೇಕೋ ಗಾಬರಿಗೊಂಡನು.

ಪ್ರೇಮಚಂದನು ಸಮಾಧಾನದೊಂದಿಗೆ ಮಾತನಾಡತೊಡಗಿದನು. “ ಮತ್ತೊಮ್ಮೆ ನೀನು ನನ್ನಲ್ಲಿಗೆ ಬಂದು, ‘ ನನ್ನ ಶೋಧಕ್ಕೆ ಏನೆಂದಿ’ರೆಂದು ಕೇಳಿದಿ. ನಾನು ಮತ್ತೆ ಸ್ವಾಮಿತ್ವವನ್ನು ತೆಗೆದುಕೋ, ಎಂದ ಹೇಳಿದೆ ಅದನ್ನು ನೀನು ಮತ್ತೆ ಒಲ್ಲೆನೆಂದಿ. ಇವೆಲ್ಲ ಒಂಬತ್ತನೆಯ ಆಗಸ್ಟದ ದಿವಸವಾಯಿತು. ”

“ ಇಷ್ಟು ಸಾಕಾಯಿತು.... ಪ್ರೇಮಚಂದರೇ, ಎಲ್ಲವನ್ನೂ ಈಗ ನೆನಿಸಿ ಮಾಡುವದೆಂಥದು ? ಮುಖ್ಯ ಮಾತೇನೆಂದರೆ, ನಿಮಗೆ ನನ್ನ ಶೋಧದಿಂದ ಇಪ್ಪತ್ತು ಸಾವಿರ ಹಣ ಬಂದದ್ದಾಯಿತು. ಅವರೆ ಸಾಕು . ”

ಯಜಮಾನನು ಆ ‘ ನೋಟಬುಕ್ಕು ’ ಮತ್ತೆ ತಿರುವಿಹಾಕುತ್ತಿದ್ದನು. “ಇಷ್ಟಾದನಂತರ ನೀನು ಒಂದು ಮಾತಿನಿಂದ ಹಾದಿಗೆ ಬಂದಿ. ನಿನ್ನ ಶೋಧದ ಸ್ವಾಮಿತ್ವವು ನಮ್ಮದಾಗಿ, ನಿನಗೆ ಮುಂದೆ ಐದು ವರುಷಗಳ ತನಕ ನಾವು ವಾರಕ್ಕೆ ೫೦ ರೂಪಾಯಿ ಕೊಡಬೇಕೆಂದು ಗೊತ್ತಾಯಿತು....ಐದು ವರ್ಷದ ಒಪ್ಪಿಗೆ. ”

“ಐದು ವರ್ಷದ ಒಪ್ಪಿಗೆಯು ಸಂಪೂರ್ಣ ಲಾಭವು ನಿಮ್ಮ ಕೈಸೇರಿತು. ಲಾಭವೆಲ್ಲವೂ ನಿಮ್ಮದಾದ ಮೇಲೆ....”

“ ತುಸು ತಡೆ, ಲಾಭವಗೂಡ ಲುಕ್ಸಾನವನ್ನಾದರೂ ನಾನೇ ಹೊಣೆಯಾದೆನಲ್ಲವೆ ? ನಿನ್ನನ್ನು ಮೊದಲು ಯಾವ ಕೆಲಸದ ಮೇಲಿಟ್ಟುಕೊಂಡೆನೋ, ಆ ಕೆಲಸದಿಂದ ನಿನಗೆ ವಾರಕ್ಕೆ ಎರಡು ರೂಪಾಯಿಯಾದರೂ ಸಿಗುವಂತಿತ್ತೋ ಇಲ್ಲವೋ ಎಂಬದನ್ನು ನಿನ್ನ ಮನಸ್ಸೇ ನಿನಗೆ ಹೇಳಬೇಕು. ನಿಲ್ಲು, ನಾನು ಅನ್ನತಕ್ಕದ್ದನ್ನೆಲ್ಲ ಒಮ್ಮೆ ಅಂದುಕೊಳ್ಳುವೆನು. ನಡುನಡುವೆ ನಿನ್ನ ಕೆಲಸದಲ್ಲಿ, ನೀನು ಮಾಡಿದ ತಪ್ಪುತಡೆಗಳಿಂದ ನನಗೆಷ್ಟು ಲುಕ್ಸಾನು ಆಯಿತೆಂಬದನ್ನು ನೀನು ಅರಿತಿಲ್ಲವೆಂಬಂತೆಯೂ ಇಲ್ಲ. ಆದರೆ

ನಾನು ನಿನ್ನನ್ನು ಇದಕ್ಕಾಗಿ ದೂಷಿಸುವದಿಲ್ಲ. ನಿನ್ನ ತಲೆಯಲ್ಲಿ ಈಗ ಸದ್ಯಕ್ಕೆ ಇನ್ನೂ ಕೆಲವು ಶೋಧಗಳು ಇದ್ದಿರುವದರಲ್ಲಿಯೂ ಸಂಶಯವಿಲ್ಲ. ಅದಿರಲಿ, ನಾವೆಲ್ಲರೂ ಸ್ವಪ್ನಸೃಷ್ಟಿಯಲ್ಲಿ ಈಸಾಡುತ್ತಿರುವದೇನೋ ನಿಜ. ನನಗೂ ಎಷ್ಟೋ ಬಗೆಯ ಸ್ವಪ್ನಸಾಮ್ರಾಜ್ಯದಲ್ಲಿ ಅಧಿಪತ್ಯವು ಸಿಕ್ಕಿದೆ; ನಾನೂ ಎಷ್ಟೋ ಸ್ವಪ್ನಗಳ ಒಡೆಯನಾಗಿದ್ದೇನೆ.” ವಿಚಾರ ಮಾಡಮಾಡುತ್ತಲೇ ಪ್ರೇಮಚಂದನು ನಕ್ಕನು. ಅವರಲ್ಲಿ ಉದಾಸೀನತೆಯು ಇದ್ದಿತೆ ?

ಯಶೋಧರನು ನಿಂತಲ್ಲಿಯೇ ಕಾಲು ಎತ್ತಿ ಚಪ್ಪರಿಸಿದನು. “ನನ್ನ ಕೆಲಸದಲ್ಲಿ ನಾನು ನೈಪುಣ್ಯವನ್ನು ತೋರಿಸಲಿಲ್ಲೆಂಬ ಆರೋಪಕ್ಕೆ ಮಾತ್ರ ನನ್ನ ಸಮ್ಮತಿಯಿಲ್ಲವೆಂದು ನಾನು ಹೇಳಬೇಕೆನ್ನುತ್ತೇನೆ” ಎಂದು ಉರಿಮೋರೆಯಿಂದ ಯಶೋಧರನು ನುಡಿದನು. “ಏನೇ ಇರಲಿ, ನನ್ನ ಯಂತ್ರದಿಂದ ನೀನು ಇಪ್ಪತ್ತು ಸಾವಿರವನ್ನಂತೂ ಬಕ್ಕಣದಲ್ಲಿ ಹಾಕಿಕೊಂಡಿಯಷ್ಟೆ? ನನಗೆ ಅದರ ಇಪ್ಪತ್ತನೆಯ ಪಾಲು ಕೂಡ ಸಿಗಬಾರದೆಂದರೆ ?”

ಪ್ರೇಮಚಂದನು ತನ್ನ ಎದುರಿನಲ್ಲಿದ್ದ ನೋಟಬುಕ್ಕು ನೋಡಿ ನಿಟ್ಟುಸಿರಿಟ್ಟನು. “ನಾನು ನಿನ್ನ ಕೂಡ ಮಾಡಿದ ವ್ಯವಹಾರದಲ್ಲಿಯ ನನ್ನ ಗುಣಾವಗುಣಗಳನ್ನು ಈಗ ತೋಡಿಕೊಳ್ಳುತ್ತ ಕೂಡುವದಿಲ್ಲ ಕಂಡಿಯಾ. ಆದರೆ, ನನ್ನ ವ್ಯವಹಾರವನ್ನೆಲ್ಲ ಇದಕ್ಕೂ ವಿಸ್ತಾರವಾಗಿ ಹೇಳಬೇಕೆನ್ನುತ್ತೇನೆ. ಇಲ್ಲಿ ಕೇಳು: ನಿನ್ನ ಯಂತ್ರದ ಮೇಲೆ ನನಗೆ ದೊರೆತ ಲಾಭಕ್ಕೂ ನೀನು ಕಟ್ಟಿದ ಅನುಮಾನಕ್ಕೂ ಮಹದಂತರವಿಲ್ಲ. ನಿಜವಾಗಿ ಹೇಳಬೇಕಾದರೆ, ನಿನ್ನ ಎಣಿಕೆಯಕಿಂತಲೂ, ಒಂದೆರಡು ಸಾವಿರ ರೂಪಾಯಿಗಳಿಂದ ಹೆಚ್ಚು ಆಗಿರುವದು. ಈ ಯಂತ್ರವನ್ನು ಮಾರ್ಕೆಟಿನಲ್ಲಿ ಮಾರಲಿಕ್ಕೆ ಇಡುವದಕ್ಕೂ ಮುಂಚಿತವಾಗಿ ಅದಕ್ಕೆ ತಗಲಿದ ವೆಚ್ಚದ ಲೆಕ್ಕವನ್ನು ನೀನು ಮಾಡಿದಂತೆ ಕಾಣುವದಿಲ್ಲ. ಇಕೋ, ಇವೇ ಆ ಲೆಕ್ಕದ ಅಂಕೆಗಳು. ಅದರ ಪೇಟೆಂಟು ತೆಗೆದುಕೊಳ್ಳಲಿಕ್ಕೆ—ಅಂದರೆ ರೆಜಿಸ್ಟ್ರೇಶನಕ್ಕೆ ೧೨೦೦ ರೂಪಾಯಿಗಳು—ಆಣೆ ಪೈಗಳನ್ನು ನಾನು ಹೇಳುವದಿಲ್ಲ. ಹೊಸ ಯಂತ್ರಸಾಮಗ್ರಿಯು ೬೦೦೦; ಉಳಿದ ವೆಚ್ಚ ೩೯೦೦. ಒಟ್ಟಿಗೆ ೧೧೧೦೦. ಇಷ್ಟೆಲ್ಲವೂ ಒಂದು ಯಂತ್ರವು ಮಾರುವದಕ್ಕಿಂತಲೂ ಮೊದಲು ವೆಚ್ಚ ಮಾಡಬೇಕಾಯಿತು. ಇದರ ಮೇಲೆ ಲಾಭ-ಲುಕ್ಸಾನಿನ ಮಾತು ನನ್ನಮೇಲೆಯೇ ಉಳಿಯಿತಲ್ಲವೆ?”

ಯಶೋಧರನು ಹೌಹಾರಿದನು. "ಒಳ್ಳೇದು, ಅದೆಲ್ಲವೂ ಈಗ ತೀರಿ ಹೋಗಿ, ಈಗ ನೀನು ಏನು ಮಾಡಬೇಕಾಗಿದೆ? ಲಾಭದ ಹಣವನ್ನೆಣಿಸುತ್ತ ಕೂಡುವದೊಂದೇ ಕೆಲಸವಲ್ಲವೆ? ಹಾಗೂ ವರುಷೊಂದಕ್ಕೆ ನಿನ್ನ ಲಾಭವು ಇಪ್ಪತ್ತು ಸಾವಿರವನ್ನು ಮೀರಬಾರದೆಂದು ಎಲ್ಲಿ ಹೇಳಿದವರು?" ಎಂದು ಅವನು ಒಳ್ಳೇ ಸೊಕ್ಕಿನಿಂದ ಗದ್ದರಿಸಿ ನುಡಿದನು.

"ಲಾಭವು ಇನ್ನೂ ಹೆಚ್ಚಾಗಲಿ, ಆಗದಿರಲಿ, ಅದೆಲ್ಲವೂ ಯಶೋಧರಾ, ನನ್ನನ್ನೇ ಕೂಡಿದೆ. ಇದರಲ್ಲಿ ನಿನ್ನ ಸಂಬಂಧವೇನು? ಆದರೆ ನನ್ನ ಉತ್ಸಾಹದ ಕಾಲವು ಮುಗಿದುಹೋಗಿದೆಯೆಂದು ಮಾತ್ರ ನೀನು ಭಾವಿಸ ಬೇಡ. ಜಗತ್ತಿನಲ್ಲಿ ನಿನಗಿಂತಲೂ ಮೇಲಾದ ಶೋಧಕರು ಇದ್ದಿರ ಬಹುದು. ನೀನೊಬ್ಬನೇ ಒಬ್ಬನಲ್ಲ. ನಿನ್ನ ಯಂತ್ರವನ್ನು ಉಪಯುಕ್ತತೆಯಲ್ಲಿಯೂ, ಮತ್ತುಳಿದ ಅಂತರ್ಬಾಹ್ಯಾಂಗಗಳಲ್ಲಿಯೂ, ಮೆಟ್ಟಿ ಮೀರುವಂಥ ಹೊಸ ಯಂತ್ರವನ್ನು ಇನ್ನು ಮುಂದೆ ಯಾವನೊಬ್ಬನು ಶೋಧಿಸಿ ತೆಗೆಯಬಾರದೆಂಬುದಂತೂ ನಿಜವಲ್ಲ. ಹೇಗೇ ಇರಲಿ, ಇನ್ನು ನಾಲ್ಕು ವರುಷಗಳ ತನಕ ನಿನಗಂತೂ ವಾರಕ್ಕೆ ಗೊತ್ತುಪಡಿಸಿದ ಹಣವು ಮುಟ್ಟೇ ಮುಟ್ಟುವದು." ಪ್ರೇಮಚಂದನು ತನ್ನ ತಿಜೋರಿಯನ್ನು ಲಕ್ಷ್ಯಗೊಟ್ಟು ನೋಡಿ "ಯಶೋಧರಾ, ನಾನು ಹೇಳತಕ್ಕದ್ದೆಲ್ಲ ಮುಗಿದಾಯಿತು. ನಿನ್ನ ಮನಸು ಕೀಳುತನಕ್ಕಿಳಿದಿರುವದನ್ನು ಕಂಡು ಮಾತ್ರ ಬಹಳ ವಿಷಾದವಾಗುತ್ತದೆ. ನಾವು ಈ ವ್ಯವಹಾರವನ್ನು ಮಾಡಿದಾಗ ನೀನು ಒಳ್ಳೇ ಸಂತೋಷದಲ್ಲಿದ್ದಂತೆ ಕಾಣುತ್ತಿದ್ದಿಯಲ್ಲ...."

"ಛೀ, ಛೀ, ಅದೇ ಮೂರ್ಖತನಕ್ಕಾಗಿಯೇ, ಈಗ ನಾನು ಕಷ್ಟ ಬಡುತ್ತಿರುವೆನಲ್ಲ! ಆದರೆ ಧನವಂತರು ಹುಟ್ಟುಬಡವರಾದ ಗುಣವಂತರ ಲಾಭವನ್ನು ಹೀಗೆಯೇ ಅನ್ಯಾಯದಿಂದ ಎಷ್ಟು ದಿನ ತೆಗೆದುಕೊಳ್ಳ...."

"ಇನ್ನು ಸಾಕಾಯಿತು. ನೀನು ಮೂರ್ಖನಿದ್ದದ್ದೇ ಸತ್ಯ"ವೆಂದು ಮೆಲ್ಲನೆ ಅಂದವನೇ ಪ್ರೇಮಚಂದನು ಎದ್ದು ನಿಂತನು. "ನಿನ್ನ ದುಃಖಕ್ಕೆಲ್ಲ ನೀನೇ ಕಾರಣನೆಂಬುದನ್ನು ಇನ್ನಾದರೂ ತಿಳಿದುಕೋ. ಇನ್ನು ಮೇಲೆ, ಆ ದುಃಖವನ್ನು ಪೋಷಿಸಬೇಡ. ನಿನ್ನ ಜೀವಿತವೆಲ್ಲ ವಿಷಮಯವಾಗುವದರೊಳಗಾಗಿಯೇ ಎಚ್ಚರಾಗು. ನೀನಿನ್ನು ಬೇಕಾದರೆ ನಿನ್ನ ಕೆಲಸಕ್ಕೆ ಹೋಗು....

ಇಲ್ಲದಿದ್ದರೆ ನಿನ್ನ ಶೋಧಕ ಬುದ್ಧಿಯನ್ನೇ ಹಿಂಬಾಲಿಸು. ನಿನ್ನ ಶೋಧಗಳಿಂದ ನೀನು ಧನವಂತನಾದರೆ ನನಗೆಷ್ಟೂ ವಿಷಾದವಿಲ್ಲ. ಆದರೆ ಎರಡನೆ ಯವರಲ್ಲಿ ಯುಕ್ತಿಂಚಿತ್ತಾದರೂ ವಿಶ್ವಾಸವನ್ನಿಡಲಿಕ್ಕೆ ಪ್ರಯತ್ನಿಸು. ಕ್ಷಣ ಹೊತ್ತು ನಿನ್ನ ಯಂತ್ರಶೋಧಕ್ಕೆ ಅರವಾಳು ಹತ್ತಿತ್ತೆಂದು ತಿಳಿ...."

"ನಿನ್ನಷ್ಟು ಆದಾಯವಿದ್ದವನಿಗೆ ಈ ನಷ್ಟದಿಂದೇನಾದೀತು? ಆದರೆ ದೇವರಾಣೆ! ಇನ್ನು ಮುಂದೆ ನನ್ನ ಶೋಧಗಳ ಲಾಭವು ನಿನಗೆಂದಿಗೂ ದೊರೆ ಯಲಾರದು" ಎಂದು ಅಂದವನೇ ಯಶೋಧರನು ಹಿಂದಿರುಗಿ ಮನೆಯ ಹಾದೀ ಹಿಡಿದನು.

ಪ್ರೇಮಚಂದನು ಆ ನೋಟಬುಕ್ಕನ್ನು ವ್ಯವಸ್ಥೆಯಿಂದ ಇಟ್ಟು ಮುಖ್ಯ ಗುಮಾಸ್ತನಾದ ಗುಲಾಬಚಂದನನ್ನು ಕರೆಯುವದಕ್ಕಾಗಿ ಗಂಟೆಯನ್ನು ಬಾರಿಸಿದನು. ಗುಲಾಬಚಂದನು ಒಳಗೆ ಬರಬರುತ್ತಲೇ "ನಾನು ಹೇಳಿ ದಂತೆಯೇ ಅವನು ಮಾತಾಡಿದ್ದಾನಾದೀತು. ಅವನ ತಲೆಯೇ ಹಾಳಾ ಗಿದೆ. ಆದರೂ ನಿಮ್ಮ ತಾಳ್ಮೆಯು ಮಿಗಿಲಾದದ್ದು. ಕಾರಖಾನೆಯಲ್ಲಿಯ ಉಳಿದ ಜನರ ಮಾತು ಬೇರೆ. ವ್ಯಾಪಾರದ ಮೂಲತತ್ವಗಳನ್ನು ಲವ ಮಾತ್ರವೂ ಅರಿಯದ ಈ ಅರೆಹುಚ್ಚನ ಮಾತು ಬೇರೆ. ಇನ್ನು ಇವನಲ್ಲಿ ಕನಿಕರಬಡುವದಾದರೂ ಎಲ್ಲಿಯ ವರೆಗೆ? ಒಂದು ಕೊಟ್ಟರೆ, ಮತ್ತೊಂದೂ ದೊರೆಯಬೇಕೆಂದು ಅವನು ನಾಳೆಯೇ ಕೇಳದಿರುವನೆ? ಹತ್ತು ರೂಪಾಯಿ ಗಳ ಸಂಬಳವು ಸಿಕ್ಕಕೂಡಲೆ ಅದಕ್ಕೆ ಇಪ್ಪತ್ತಾಗತಕ್ಕದ್ದೆಂದು ಅವನು ಮರು ಗದೇ ಎಂದಿಗೂ ಇರನು. ಈ ಬಿಸಿಲ್ಗುದುರೆಯ ಬೆನ್ನು ಬಿದ್ದವನನ್ನು ನಾವೆ ಷ್ಟಂತ ಬೆನ್ನಟ್ಟುವದು?" ಎಂದಂದನು.

"ನೀನನ್ನುವದೆಲ್ಲವೂ ನಿಜವು. ಯಶೋಧರನು ಮೊದಲು ಅತ್ಯಾಶೆ ಯುಳ್ಳವನಂತೆ ಕಾಣಿಸಿದನೇ?"

"ಇದಕ್ಕೆ ಆಶೆಬುರುಕತನವೆನ್ನುವದಕ್ಕಿಂತಲೂ, ಒಣಹೆಮ್ಮೆಯೆಂದೇ ಅನ್ನಬೇಕು. ತಲೆಗೂಳಿತನ—ಯಾಕೆ, ಇದೇ ಮೂರು ವರುಷಗಳಾಚೆಗೆ ಇವನೇ ಅಲ್ಲವೆ, ಏನಾದರೂ ಕೆಲಸ ಕೊಡಿರೆಂದು ಅಂಗಲಾಚಿ ಹೇಳಿಕೊಳ್ಳುತ್ತ ನಮ್ಮ ಬಾಕಿಲಲ್ಲಿ ಬಿದ್ದವನು—? ಆದರೆ ಈಗ ಇವನೇ ಇಡೀ ಪೃಥ್ವಿಗೆ ಪ್ರಸಿದ್ಧ ನಾದ ಪ್ರಥಮ ಪರಿಶೋಧಕನಂತೆ! ಹಣೇಬರಹ!"

"ಅಂದರೇನು, ಅವನಲ್ಲಿ ತಥ್ಯವೇನೂ ಇಲ್ಲೆನ್ನುವಿಯಾ ? ಗುಣವಂತನಿದ್ದದ್ದು ನಿಜವು. ಆದರೆ ...."

"ಅವನಲ್ಲಿರುವ ಗುಣಗಳಿಗೇನೂ ಕೊರತೆಯಿಲ್ಲ, ಶೇಟಜೀ. ಆದರೆ ಮನುಷ್ಯನು ಈ ಪರಿಯಾಗಿ ನಿಚ್ಚಣಿಕೆಯನ್ನೇರುತ್ತಿದರೆ, ಅವನು ತನ್ನ ಜೀವಕ್ಕೂ ಮುಳುವು, ಎರಡನೇಯವರಿಗಂತೂ ಶುದ್ಧ ಕಾಲನೂಪಿ. ನೀವು ಬೇಕಾದ್ದು ಹೇಳಿರಿ. ಇನ್ನೊಂದು, ಕೆಲ ದಿನಗಳಲ್ಲಿಯೇ, ಅವನು ಬಾಳಿಗೆ ಬಾರದಾಗುವನು. ಈಗೇ ಅವನ ಸೊಕ್ಕಾಳಿತನವು ಸಾಕುಬೇಕಾಗಿದೆ."

ಗುಲಾಬಚಂದನು ತುಸು ವಿಚಾರಮಾಡಿ ಅಂದದ್ದು : "ಅದಿರಲಿ, ನೀವಿನ್ನೂ ಅವನಿಗೆ ಅವನ ಸ್ವಾಮಿತ್ವದ ಹಣವನ್ನು ಸಲ್ಲಿಸಬೇಕೆಂದಲೇ ಮಾಡಿರುವಿರಲ್ಲ ! ಅವನ ಹೆಸರಿಗೆ ನಾಲ್ಕುಸಾವಿರ ರೂಪಾಯಿಗಳು ಬರೆದಿಟ್ಟಿರುವವು. ಇದೆಲ್ಲವೂ ಅಂತರಂಗದ ಲೆಕ್ಕವಾದದ್ದೇನಾಯಿತು ? ಅವನಿಗೆ ಸಲ್ಲತಕ್ಕದ್ದಂತೂ ಸರಿ."

"ಸಲ್ಲತಕ್ಕದ್ದಿದ್ದರೆ ಸಲ್ಲಿಸು. ಬೇಡವೇಕೆ ?" ಎಂದು ಪ್ರೇಮಚಂದನಂದನು. "ಆಹಹ! ಈ ಸುದ್ದಿ ತಗಲಿದ ಕೂಡಲೆ, ಅವನು ಹೆಡೆಯೆತ್ತಿದ ಹಾವಿನಂತಾಗುವದೇ ನಿಜ. ಇದು ಎಂಟುಸಾವಿರಮುಟ್ಟಿಗೇಕಿಲ್ಲೆಂಬುದಾಗಿ ಅವನು ಬಳಲುವದೇನೂ ಬಿಡನು."

"ಹೇಗೇ ಆಗಲಿ, ಅವನನ್ನಿದೊಂದು ಸಾರೆ ಕಡೆಯೋಣ. ಈ ಗಾಳಿಯು ಬೀಸಿ ತೀರಿದ ನಂತರವಾದರೆ, ಅವನು ಎಚ್ಚರಗೊಂಡಾನು. ಏನೇ ಇರಲಿ, ಈಗ ಐದು ನಿಮಿಷಗಳಾಚೆ ಅವನ ಉದ್ಧಟತನವನ್ನು ಕಂಡು, ಅವನ ಪದಲು ಕಡಿದುಕೊಳ್ಳಬೇಕೆಂದೆನಿಸಿತ್ತು. ಇವನ ಅರ್ಧ ಪಾಂಡಿತ್ಯದ ಅಹಂಕಾರದ ಬಿರುನುಡಿಗಳಿಗಿಂತಲೂ ಅಜ್ಞಾನಾಂಧಕಾರದಲ್ಲಿದ್ದ ನಮ್ಮ ಕೂಲಿಗಾರರು ಕುರಿಗಳಂತಾಚರಿಸುವದೇ ಒಳಿತೆನಿಸಿತು. ಕೈಲಾದಷ್ಟು ಕೈಕೆಳಗಿನವರ ಕಲ್ಯಾಣ ಚಿಂತನೆಯೇ ನನ್ನ ಜೀವನ ಸರ್ವಸ್ವವೆಂದು ನಾನು ತಿಳಿಯುತ್ತೇನೆ." ಎಂದು ಕರ್ತವ್ಯಪರಾಯಣನಾದ ಪ್ರೇಮಚಂದನಂದನು.

"ಆಗಲಿ, ಧನಿಯರ ಇಚ್ಛೆ ! ಉಳಿದ ಕೆಲಸವನ್ನು ನೋಡಿಕೊಳ್ಳಬೇಕು" ಎಂದು ಇನ್ನೂ ಎಷ್ಟೋ ಕಾಗದಗಳನ್ನು ಗುಲಾಬಚಂದನು ಅವನ ಮುಂದಿಟ್ಟು, ಬಾಗಿಲತನಕ ಹೋಗಿ, "ಇನ್ನೊಂದು ಮಾತು ಕೇಳತಕ್ಕದ್ದಿದೆ.

ಯಶೋಧರನಿಗೆ ಸಲ್ಲತಕ್ಕ ಸ್ವಾಮಿತ್ವದ ಹಣವನ್ನೆಲ್ಲ ಅವನ ಹೆಂಡತಿಯಾದ ಶಾಂತಾದೇವಿಗೆ ಕೊಟ್ಟರೆ ಒಳಿತಾಗಲಿಕ್ಕಿಲ್ಲವೆ? ಪಾಪ, ಚಿಕ್ಕವಳಾದ ಸುಕುಮಾರಿಯು, ಕೂಸನ್ನೀಲೆಂದು ಬಳಲುತ್ತಾಳೆಂದು ಮೊನ್ನೆಯೇ ನಮ್ಮಕ್ಕನು ಹೇಳುತ್ತಿದ್ದಳು. ಮನೆಯಲ್ಲಿ ಬಣ್ಣಿಗೆ ಹಚ್ಚೇನೆಂದರೆ ಕಾಳು ಧಾನ್ಯವಿಲ್ಲವಂತೆ. ಉಡಿಗೆತೊಡಿಗೆಗಳಂತೂ, ಅಷ್ಟೇ ಒಗೆದು ಉಡಬೇಕಂತೆ!" ಎಂದು ಒಳ್ಳೇ ಆಲ್ಪರಿದು ಗುಲಾಬಚಂದನು ಹೇಳಿದನು.

"ಇಂಥ ಸ್ಥಿತಿಯಾಗಲಿಕ್ಕೇನು ಕಾರಣ?"

"ಎಂಥದಾದರೊಂದು ಅನಿಷ್ಟವಾದ ಸಂಗತಿಯೇ ಇದಕ್ಕೆಲ್ಲ ಕಾರಣವಾಗಿರಬೇಕಲ್ಲವೆ, ಮತ್ತೇನು?"

ಪ್ರೇಮಚಂದನು ಆ ಅಂದಾಜುಪತ್ರಿಕೆಯನ್ನು ಕೈಯಲ್ಲಿ ಹಿಡಿದು ಅಂದದ್ದು: "ಗುಲಾಬಜೀ, ನೀವು ಮಾತ್ರ ಯಶೋಧರನ ಬೆನ್ನು ಕೈ ತೊಳೆದುಕೊಂಡು ಹತ್ತಿದಿರಿ; ಇದರಲ್ಲಿ ತಿಲಮಾತ್ರ ಸಂದೇಹವಿಲ್ಲ. ಆದರೆ ಅವನ ಗೃಹಕೃತ್ಯಗಳಲ್ಲಿ ಕೈಹಾಕುವದು ನಮ್ಮದಲ್ಲ. ನಮ್ಮಲ್ಲಿ ಬಂದಾಗ ಅವನು ತೀರ ಬಡಸ್ಥಿತಿಯಲ್ಲಿದ್ದದ್ದು ನಿಮಗೆ ಗೊತ್ತಿದೆ. ಹಿಂದೆ ಮಾಡಿದ ಸಾಲಸುದ್ದಿಗಳನ್ನು ತೀರಿಸುವದರಲ್ಲಿ ಅವನಿಗೆ ಹಣದ ಕೊರತೆಯಾಗುತ್ತಿದ್ದೀತು. ಯಶೋಧರನ ಹೆಂಡತಿಯೂ ಇದ್ದದ್ದರಲ್ಲಿಯೇ ಸುಖ ಹಚ್ಚಿಕೊಂಡು ಇದ್ದಿರುವಳಾದೀತು. ತನ್ನ ಗಂಡನ ಸಲುವಾಗಿ ಅವಳಿಗೆ ಒಳ್ಳೇ ಅಭಿಮಾನವಿದ್ದಂತೆ ಕಾಣುತ್ತದೆ. ಗುಣಗಳನ್ನೇ ಪೂಜೆ ಮಾಡುತ್ತಿರುವವಳಾದೀತು. ಗುಣಕ್ಕೆ ಬೆಲೆಯುದೆಯಲ್ಲವೆ?" ಇಷ್ಟೆಂದು ಪ್ರೇಮಚಂದನು ಗಹಗಹಿಸಿ ನಕ್ಕನು.

"ನಿನ್ನ ಸಮಾಧಾನಕ್ಕೆ ಬೆಲೆಯಿಲ್ಲ"ವೆಂದು ಗುಲಾಬಚಂದನು ಮೆಲ್ಲನೇ ನುಡಿದು ಹೊರಬಿದ್ದನು.

ಪ್ರೇಮಚಂದನು ಘನವಾದ ವ್ಯಾಪಾರಸ್ಥನೆಂಬದನ್ನು ಈ ಮೊದಲೇ ಹೇಳಿದ್ದೇವೆ. ಈ ಘನವಾದ ವ್ಯಾಪಾರವೈಭವಕ್ಕೆ ಒಪ್ಪುವಂಥ ಗೃಹಸೌಖ್ಯವು ಅವನಿಗಿದ್ದಿಲ್ಲನೆಂಬದನ್ನು ಹೇಳಲಾರೆವು. ಮದುವೆಯಾದ ಒಂದೆರಡು ವರುಷ

ಗಳಲ್ಲಿಯೇ, ಅವನ ಅರ್ಧಾಂಗಿಯಾದ ಲಲಿತಾದೇವಿಯು ಪರಲೋಕವನ್ನು ಪಡೆದಳು. ಮುಂದೆ ಒಂದು ವರುಷ ಹೋಗಲಿಲ್ಲ; ಇಷ್ಟು ಧನವನ್ನು ಸಂಪಾದಿಸಿ ಮಗನ ಸೌಭಾಗ್ಯವನ್ನು ನಿರೀಕ್ಷಿಸಿ ಆನಂದಗೊಳ್ಳುತ್ತಲಿದ್ದ ತಂದೆಯು ತೀರಿಕೊಂಡನು. ಇವೆರಡೇ ಅನಾಹುತಗಳಿಂದ ಪ್ರೇಮಚಂದನಿಗೆ ಜಗತ್ತಿನಲ್ಲಿಯ ಬಾಳ್ವೆಯೇ ಒಲ್ಲದಾಗಿತ್ತು. ಆದರೂ ದಿನಗಳೆದಂತೆ ದುಃಖವನ್ನು ನುಂಗಿ ಮರೆಮಾಡುತ್ತ ಬಂದಿದ್ದನು.

ನಂತರ ಕೆಲವು ದಿನಗಳಲ್ಲಿಯೇ ಇವರ ವಶಕ್ಕಿದ್ದ ಕಾರಖಾನೆಗಳಲ್ಲಿ ಒಂದರೊಳಗೆ, ಒಂದುದಿನ ಒಂದು ಅಪಘಾತವಾದದ್ದೇ ಪ್ರೇಮಚಂದನ ಸ್ಥಿತಿಯು ಹೆಚ್ಚುಚ್ಚು ಸುಧಾರಿಸಿ, ಅವನಲ್ಲಿ ಪ್ರಸ್ತುತಕ್ಕಿದ್ದ ಭೂತದಯೆ, ಕಾರುಣ್ಯ, ಕೈಕೆಳಗಿನವರ ಮೇಲೆ ಮಮತೆ, ವ್ಯಾಪಾರ ವ್ಯವಹಾರಗಳಲ್ಲಿ ಅಳುಕದಂಥ ಧೈರ್ಯ ಮುಂತಾದ ಗುಣಗಳ ವಿಕಾಸವಾಗಲಿಕ್ಕೆ ಕಾರಣವಾಯಿತೆಂದು ಅನ್ನಲಿಕ್ಕೆ ಅಡ್ಡಿಯಿಲ್ಲ. ಗಿರಣಿಗೆ ಆದಿಶಕ್ತಿಯಾದಂಥ ಪ್ರಧಾನ-ಗತಿ-ಚಕ್ರವೇ ಒಂದು ದಿವಸ ಒಡೆದು ಚಿಪ್ಪಾಡಿಯಾಗಿ, ಇವನ ಕಣ್ಣೆದುರಿನಲ್ಲಿ ಇಬ್ಬರು ನಿಂತಲ್ಲಿಯೇ ನುಚ್ಚುನೂರಾದರು. ಎಷ್ಟೋ ಜನರಿಗೆ ಗಾಯತಗಲಿ ಮಿತಿಮೀರಿದ ನಷ್ಟವಾಯಿತು. ದುಃಖದ ಪೆಟ್ಟು ತಿಂದವನಾದ ಪ್ರೇಮಚಂದನಿಗೆ ಇಷ್ಟೇ ಹಣದ ನಷ್ಟವು ಇದಕ್ಕೂ ಒಂದು ವರುಷ ಮುಟ್ಟಿಗೆ ಮೊದಲು ತಗಲಿದ್ದಾದರೆ, ಅವನು ನೆಲಹಿಡಿದು ಮಲಗಿಕೊಳ್ಳುತ್ತಿದ್ದನು. ಆದರೆ ಈಗ ಈ ಅಪಘಾತದಲ್ಲಿ ಮಡಿದು ಗಾಯಗೊಂದಿ, ಅನೇಕ ಅನರ್ಥಗಳಿಗೊಳಗಾದ ತನ್ನ ಸೇವಕ ಜನರ ಗೋಳಾಟವು, ಇವನನ್ನು ಪೂರ್ಣವಾಗಿ ಎಚ್ಚರಗೊಳಿಸಿ ಜಗತ್ತಿನಲ್ಲಿಯ ಬಾಳುವೆ ಎಂದರೇನೆಂಬುದರ ಪಾಠವನ್ನು ಕಲಿಸಿತು. ಇದುವರೆಗೆ, ಏನೋ ಒಂದು ದೊಡ್ಡ ಚಕ್ರದ ಸಣ್ಣ ಸಣ್ಣ ಭಾಗಗಳೆಂದು ತನ್ನ ಜನರನ್ನು ಸ್ವಲ್ಪ ಅಲಕ್ಷದಿಂದ ನಡೆಯಿಸುತ್ತಿದ್ದವನು, ತನ್ನ ಜೀವನದಷ್ಟೇ ಮಹತ್ವವು ಕಡಿಮೆಬೆಲೆಬಾಳುವ ಪ್ರಾಣಿಗಳಿಗೂ ಇರುವದೆಂದು ಇವನಿಗೆ ತತ್ಕ್ಷಣಕ್ಕೆ ತಿಳಿಯಬಂದಿತು. ತನ್ನ ನೌಕರರ ಜೀವನವೇ ತನ್ನ ಮುಖ್ಯಾಧಾರವೆಂಬದು ಅವನ ಮನವರಿಕೆಯಾಯಿತು. ವ್ಯಾಪಾರ ವ್ಯವಹಾರಗಳಲ್ಲಿ ಕೇವಲ ದ್ರವ್ಯಸಂಪಾದನೆಯ ಭರದಲ್ಲಿ, ಆ ದ್ರವ್ಯಾರ್ಜನೆಯ ಸಾಧನಗಳಾದ ತನ್ನ ಆಳುಗಳನ್ನು ಒಂದೇ ದಿನ ರಕ್ತ

ಹಿಂಡುವಂತೆ ಮಡಿಸಿಕೊಂಡು ಜೀರ್ಣ ಮಾಡಬಾರದೆಂಬದು ಆವನಿಗೆ ಕಂಡಿತು. ಅಂದಿನಿಂದ ಅವನು ಯಥಾಯೋಗ್ಯನಾದ ಯುಜಮಾನನ ಗುಣ ಗಳನ್ನು ಹೊಂದಿದನು. ದಡ್ಡತನವೇಂದರೆ ಸಂಭಾವಿತರ ಲಕ್ಷಣವೆಂದು ತಿಳಿದು ಕೊಳ್ಳದೆ, ಜಾಣರಲ್ಲಿ ತಪ್ಪುಗಾರರನ್ನು ತಡವಿಲ್ಲದೆ ಕ್ಷಮಿಸಹತ್ತಿದನು ಮನವುಟ್ಟಿ ಕೆಲಸ ಮಾಡುವವನು ಕೆಲಸದಲ್ಲಿ ತಡಮಾಡಿದರೂ, ತಿಸ್ರವೇ ಏಕಾಗಲಿಲ್ಲವೆಂದು ತಲ್ಲಣಿಸುತ್ತಿರಲಿಲ್ಲ. ಪ್ರತಿಯೊಬ್ಬನಿಗೂ ತನ್ನ ಜಾಣತನ ವನ್ನು ತೋರಿಸಿಕೊಳ್ಳುವ ಸಮಯಗಳನ್ನು ಆಗಾಗ ತಂದುಕೊಡುತ್ತಿದ್ದನು. ಒಮ್ಮೆಯಲ್ಲದೆ ನೂರಾರು ಸಾರೆ, ಅವರ ಪ್ರಯತ್ನಗಳ ಪ್ರಯೋಜನವು ಎಲ್ಲರ ನಿದರ್ಶನಕ್ಕೆ ಬರುವಂತೆ, ವೇಳೆಯನ್ನರಿತು ಇಂಥವರ ಬೆನ್ನುಚಪ್ಪರಿಸುವನು. ಇದರಿಂದ ಒಳ್ಳೆಯವನೆಂದು ಹಗಲೆಲ್ಲ ತಪ್ಪುಮಾಡುತ್ತ, ಕೆಲಸಕ್ಕೆ ತಪ್ಪಿಸುವ ಮೈಗಳ್ಳರನ್ನು ಮೋಯಿಸಿ ಪುಷ್ಟಮಾಡುತ್ತಿದ್ದನೆಂಬದನ್ನು ಮಾತ್ರ ತಿಳಿಯು ಕೂಡದು.

ಒಂದು ರೀತಿಯಿಂದ ಪ್ರೇಮಚಂದನು ನಿರಂಕುಶ ಪ್ರಭುವು. ಎಲ್ಲ ಮಾತುಗಳು ತನ್ನ ಕಿವಿಮುಟ್ಟದೆ ತನ್ನ ನಿರ್ಣಯಕ್ಕೊಳಪಡದೆ, ತನ್ನ ಕೈಲೇಖ ವಿಲ್ಲದೆ ಹೊರಬೀಳಬಾರದೆಂದು ಅವನು ಆಗ್ರಹ ತೊಡುತ್ತಿದ್ದನು. ತಾನು ಒಳ್ಳೇ ನ್ಯಾಯವಂತನೆಂಬ ಬಗ್ಗೆ ಅವನಿಗೆ ಒಳ್ಳೇ ಅಭಿಮಾನವಿತ್ತು. ವಾರದಲ್ಲಿ ಕೆಲವೊಂದು ವೇಳೆಯನ್ನು ಗೊತ್ತುಪಡಿಸಿ, ಆಗ ತಮಗೇನೊಂದು ತಿಳಿಸುವ ದಿದ್ದರೆ ತಿಳಿಸತಕ್ಕದ್ದೆಂದು ಸಣ್ಣ ದೊಡ್ಡ ಕೆಲಸಗಾರರಿಗೆ ಹೇಳಿಟ್ಟಿದ್ದನು. ಈ ಕಾಲಕ್ಕೆ ಪ್ರೇಮಚಂದನಿಗೆ ತಮಗೆ ಬೇಕಾದ ಬೇಡಿಕೆಗಳನ್ನಾಗಲಿ, ಹೇಳಿಕೆ ಕೇಳಿಕೆಗಳನ್ನಾಗಲಿ ಹೇಳಿಕೊಳ್ಳುವ ಸ್ವಾತಂತ್ರ್ಯವು ಎಲ್ಲರಿಗೂ ಇತ್ತು. ಅಂದರೆ ಈಗ ಎಲ್ಲರೂ ತಮ್ಮ 'ತಕರಾರು'ಗಳನ್ನು ಹೇಳಿಕೊಳ್ಳಬಹುದು. ಹೀಗಾದುದರಿಂದ ಸುಮ್ಮನೇ ತಮಗೆ ಅನ್ಯಾಯವಾಗಿದೆಯೆಂಬ ಕಲ್ಪನೆಗೆ ಬಲಿಬಿದ್ದು ದುಮುದುಮು ಉರಿಯುತ್ತಿದ್ದ ಈ ತಕರಾರುಗಳ ಜ್ವಾಲೆಯು ದಿನವೊಂದಕ್ಕೆ ದಬ್ಬಿಕೊಂಡಿಟ್ಟದ್ದರಿಂದ ಹೆಚ್ಚೆಚ್ಚು ಪ್ರಖರವಾಗುತ್ತ ಸಾಗಿ, ಒಮ್ಮೆಲೆ ವಡವಾಗ್ನಿಯಂತೆ ಪ್ರಜ್ವಲಿಸಿ, ಸುತ್ತುಮುತ್ತಲಿನ ಪ್ರದೇಶವನ್ನೆಲ್ಲ ಸುಟ್ಟು ಬೂದಿಮಾಡಲವಕಾಶವು ಈ ಪ್ರೇಮಚಂದನ ಕಾರಖಾನೆಗಳಲ್ಲಿ ಇದ್ದಿಲ್ಲ. ಮೂರುನಾಲ್ಕು ಸಾವಿರ ನೌಕರರಲ್ಲಿ ಅನ್ಯಾಯದ ಭ್ರಾಂತಿಗೆ ಬಿದ್ದ

ವರು ಶೀಘ್ರ ತುಸು ಜನರು. ಈ ಬಗೆಯ ಜನಸಮೂಹದ ಪ್ರೇಮಚಂದನನ್ನು ಸುಳ್ಳುಪೋಗಿನಿಂದ ತಕ್ಕಿಸಲಿಕ್ಕೆ ಹೋಗಿ, ತಾವ್ವೇ ಹಗಲು ಜೈಲಿಗೆ ಬಿದ್ದದ್ದರಿಂದ ಮಾನಹಾನಿಯಾದಂತಾಗಿ ಮುಖವನ್ನು ಮರೆಯಿಸಿಕೊಂಡಂಥವರು ಕೆಲ ಜನರಿದ್ದರು. ಇನ್ನೂ ಕೆಲವರಿಂದರೆ ಅವನನ್ನು ತಕ್ಕಿಸಿ ಜಾರಿಕೊಂಡಿದ್ದರು. ತಮಗೆ ಜಯಸಿಕ್ಕಿದ್ದರೂ ಅವರ ತಕ್ಕತನವು ಅವರ ಮುಖವನ್ನು ಸಣ್ಣಾಗಿ ತಿನ್ನುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ. ಆದರೆ ಬೆದರಿಕೆ ಹಾಕಿ, ಕೆಲಸ ನಿಲ್ಲಿಸುತ್ತೇವೆಂದು ಹೇಳಿ, ಜುಲುಮೆಮಾಡಿ ಒತ್ತಾಯದಿಂದ ಜಗಳ ಹೂಡಿದವರಿಗೆ ಪ್ರೇಮಚಂದನಿಂದ ಒಂದು ಕಾಸು ಕಪರ್ದಿಯಷ್ಟು ಲಾಭವಾಗುತ್ತಿದ್ದಿಲ್ಲ. ಒಣ ಬೆದರಿಕೆಗೆ ಬೆದರಿ ಬೇಲಿ ಸೇರುವ ಬಂಟನಿವನಲ್ಲ.

ಇರಲಿ; ಇದೆಲ್ಲದರಿಂದ ಇವನಿಗೆ ಲಾಭವಾಗುತ್ತಿತ್ತೋ? ನಿಜವಾಗಿ ಆಗತಕ್ಕಷ್ಟು ಆಗುತ್ತಿದ್ದಿಲ್ಲ. ಗುಮಾಸ್ತನಾದ ವೃದ್ಧ ಗುಲಾಬಚಂದನನ್ನು ಕೇಳಿದರೆ, ಅವನಾದರೂ ಇದನ್ನೇ ಹೇಳುವನು. ಈ ಸಂಘವು ಸಾವಕಾಶವಾಗಿ, ಎಚ್ಚರದಿಂದ ನಾಲ್ಕೂಕಡೆಗೂ ಕಣ್ಣಿಟ್ಟು ಕೆಲಸ ಮಾಡುತ್ತಿದ್ದ ಕಾರಣ ಗಪಗಪನೆ ಕೈಗೆ ಬಂದಷ್ಟು ಬಳಿದುಕೊಳ್ಳುವಂಥ ಕಂಪನಿಗಳು ಲಾಭಗಳೊಂದುವಷ್ಟು ಇವರಿಗೆ ಆಗುತ್ತಿದ್ದಿಲ್ಲ. ಕಳೆದ ಹತ್ತು ವರುಷಗಳಿಂದಲಂತೂ ಈ ಕಂಪನಿಯ ಲಾಭದ ಪ್ರಮಾಣವು ನೂರಕ್ಕೆ ಐವತ್ತರಿಂದ ಕಡಿಮೆಯಾಗಿತ್ತು. ಕೂಲಿಯ ದರವನ್ನು ಕೇಳಿದ್ದರೆ ಇವನ ತಂದೆಯಾದ ರಾಯಚಂದನು ಕೈಲಾಸದಲ್ಲಿಯೇ ಎದೆಎದೆ ಬಡಿದುಕೊಳ್ಳುವಂತಿತ್ತು. ಆಳುಗಳಲ್ಲಿ ಬೇನೆ ಬೇಸರಿಕೆಯಾದರೆ, ಕಂಪನಿಯ ವೆಚ್ಚ; ಮುಪ್ಪಿನಿಂದ ಕೆಲಸ ಬಿಟ್ಟವರಿಗೆ, ಕಂಪನಿಯ ಪೆನಶನ ರೂಪದ ಉಂಬಳಿಯು; ಇಂಥವೇ ಇನ್ನೂ ಕೆಲವು ವೆಚ್ಚದ-ಬಾಬುಗಳಂತೂ ಹೆಚ್ಚಾಗಿದ್ದವು. ಪ್ರೇಮಚಂದನಿಗೆ ಲಾಭವಾಗುತ್ತದೆಂದೆಯೋ ಇವೆಲ್ಲ ಔದಾರ್ಯದ ಸೋಗುಗಳು; ಇಲ್ಲದಿದ್ದರೆ ಹೇಗೆಂದು ಕೇಳುವ ಮನಸಿನ ಕೆತ್ತಿಗರಲ್ಲಿಯ ಭಾಷಣವು. ವರುಷದ ಕೊನೆಯಲ್ಲಿ ಶಿಲುಕಿನ ಪತ್ರಿಕೆಯನ್ನು ಓದಲಿಕ್ಕೆ ಪ್ರೇಮಚಂದನಂಥ ಧೈರ್ಯಸ್ಥನೇ ಬೇಕೆಂಬುದನ್ನು ನಾವು ಹೇಳುತ್ತೇವೆ. ವರುಷದ ಕೊನೆಯಲ್ಲಿಯ ಲಾಭದ ಆದಾಯವನ್ನು ನಾವೆಷ್ಟು ಔದಾರ್ಯದಿಂದ ವೆಚ್ಚಮಾಡಿಕೊಂಡರೂ, ಇದಕ್ಕೂ ಹೆಚ್ಚಿನ ಲಾಭವನ್ನು ನಾಳಿನ ವರುಷ ದೊರಕಿಸಲಿಕ್ಕೇ ಬೇಕೆಂದು ನಮ್ಮಲ್ಲಿ ಎಷ್ಟು

ಜನರು ಸಂಘಟಿತರಾಗುವದಿಲ್ಲ? ಇಡೀ ಜಗತ್ತನ್ನೇ ಸಲುಹಿ, ಬೆಟ್ಟಿಯಾದವರ ನ್ನೆಲ್ಲ ಸಂಹೋದರರನ್ನಾಗಿ ಮಾಡಬೇಕೆಂಬ ಉದಾರಬುದ್ಧಿಯಿಂದ ಹೊರಟ ಯಾತ್ರಸ್ಥರಲ್ಲಿ ಇರುವವರಿಗೆ ಎಷ್ಟು ಜನರು ಜಯಶಾಲಿಗಳಾದರು? ಪ್ರೇಮಚಂದನಂತೆ ಪರಾಜಯಪಟ್ಟವರೇ ಬಹು ಜನರೆಂದು ಧಾರಾಳವಾಗಿ ಹೇಳಬಹುದು. ಇಡೀ ಜಗತ್ತಿನ ಪ್ರೀತಿಯನ್ನು ಸಂಪಾದಿಸಿಕೊಂಡವನೊಬ್ಬನು ಸರ್ವೇಶ್ವರನಾದರೂ ಅಹುದೆ ?

೩

ನಿತ್ಯಶಃ 'ನ್ಯಾಯ, ನ್ಯಾಯ'ವೆಂದು ಕನಕರಿಸುತ್ತಿರುವ ಜನರೆಲ್ಲರೂ ಮನಸಿನಲ್ಲಿ 'ಸೇಡು' ತೀರಿಸಿಕೊಳ್ಳಬೇಕೆಂಬ ಭಯಂಕರವಾದ ವಿಚಾರವನ್ನೇ ಮಾಡುತ್ತಿರುವರೆಂಬುದು ಹೆಜ್ಜೆಹೆಜ್ಜೆಗೆ ಕಂಡುಬರುವದು. ನ್ಯಾಯವೆಂದರೆಯೇ ಸೇಡು. ಫಿರ್ಯಾದು ಮಾಡಿ ನ್ಯಾಯಬೇಡುವೆನೆಂದವನು, ಪ್ರತಿಪಕ್ಷಿಯ ಮೇಲೆ ಸೇಡು ತೀರಿಸಿಕೊಳ್ಳುವ ಹಂಬಲದಲ್ಲಿರುವನೆಂದೇ ತಿಳಿಯತಕ್ಕದ್ದು. ಯಶೋಧರನು ಇದೇ 'ನ್ಯಾಯ' ಶಬ್ದವನ್ನೇ ಉಚ್ಚರಿಸುತ್ತ ಮನೆಯ ಹಾದೀ ಹಿಡಿದನು. ಊಟಕ್ಕೆ ಕೂತಾಗಲೂ 'ನ್ಯಾಯ'ದ ಧ್ಯಾನವೇ. ಅದೇ ಜಪವೇ. ಪ್ರಾಣಿಯು ಪಾತ್ರೆಯಲ್ಲಿ ಏನು ಇರುವದೆಂಬುದನ್ನು ಕೂಡಾ ಕಣ್ಣಾರೆ ಕಂಡನೋ ಇಲ್ಲವೋ? ಊಟದ ರುಚಿ ಯಾರಿಗೆ? ಹೆಂಡತಿಯನ್ನು ಕರೆಯುವದಾದರೂ 'ನ್ಯಾಯ'ವೆಂದೇ, ಶಾಂತಾದೇವಿಯೂ ಈ ಶಬ್ದವನ್ನು ಈಗ ಮೂರು ನಾಲ್ಕು ತಿಂಗಳುಗಳಿಂದ ಕೇಳುತ್ತ ಬಂದವಳಾದ್ದರಿಂದ ಪ್ರತ್ಯುತ್ತರ ಕೊಡದೆ ಮೂಕಭಾವವನ್ನು ತಾಳಿದಳು.

"ಅಯ್ಯೋ ದೈವವೆ!" ಕಡೆಗೆ ಬೇಸತ್ತು ಅವಳಂದದ್ದು "ಹೀಗೆಯೇ ಮಾಡುತ್ತ ಹೋದಲ್ಲಿ ಯಾವ ಪ್ರಯೋಜನ? ನೀವೂ ಹುಚ್ಚರಾಗಿ ನನ್ನನ್ನೂ ಹಾಳುಮಾಡುವಿರಿ. ಒಮ್ಮೆ ಮುಗಿದ ವ್ಯವಹಾರ...."

"ಆದರೆ ಆ ವ್ಯವಹಾರವು ಅನ್ಯಾಯವಿದ್ದು ಕೇಳಿದಿರಾ? ಅವನು ನನ್ನ ಉಪಯೋಗವನ್ನು...."

"ಇರಲಿರಲಿ. ಈಗ ಅದಕ್ಕೆ ಯಾವ ಉಪಾಯವಿದೆ? ಆದದ್ದು ಆಯಿತು. ಅದನ್ನೆಲ್ಲ ಮರೆತುಬಿಡಿರಿ. ನಿಮಗೆ ಅದರಿಂದ ನಷ್ಟವಂತೂ ಆಗಿಲ್ಲ

ವಲ್ಲ. ಸ್ವಲ್ಪಿಲ್ಲ ಸ್ವಲ್ಪ ಹಣ ಬಂದೀತೋ ಇಲ್ಲವೋ? ಇನ್ನು ಮುಂದೆ ನೀವೇನೂ ಮಾಡಬೇಡಿರಿ.”

“ಅದನ್ನು ಪ್ರೇಮಚಂದನ ಎದೆಯೊಳಗಿನ ರಕ್ತಹೀರಿ ತೆಗೆದುಕೊಳ್ಳುವೆನಂತೆ. ಅನ್ಯಾಯದಿಂದ ಧನವಂತನಾಗುವನೇ ಅವನು?” ಎಂದು ಯಶೋಧರನು ಹಲ್ಲು ತುಟಿ ಕಚ್ಚುತ್ತ ನುಡಿದನು.

“ಛೆ! ಆ ಮಾತು ಹಾಳಾಗಲಿ! ಇನ್ನೂ ನಾಲ್ಕುವರುಷಗಳ ವರೆಗಂತೂ ಗೊತ್ತುಮಾಡಿದಂತೆ ಹಣವು ಬರುತ್ತದಲ್ಲ.” ಎಂದು ಅವಳು ಬಿರಿನಗಿ ನಕ್ಕಳು. “ಆದರೆ, ರಾಯರೆ, ಅದರೊಳಗಿನದೊಂದು ಭಾಗವಾದರೂ ಮನೆಯ ಕಡೆಗೆ ಬರಲಿನ್ನು.”

“ಏನೆನ್ನುವಿಯೋ? ಇನ್ನೊಮ್ಮೆ ಅನ್ನು ನೋಡೋ—”

“ಏನಂದರೆ?” ಶಾಂತೆಯು ತುಸು ಧೈರ್ಯಶಾಳಿ ಅಂದದ್ದು: “ಮನೆಯಲ್ಲಿ ಈಗ ಒಂದು ಹಿಡಿಯಷ್ಟು ಕಾಳಿಲ್ಲ. ಉಟ್ಟೇನಂದರೆ ಬಟ್ಟೆಯು ಬರವು. ನಿಮ್ಮ ಗಳಿಕೆ ನೋಡಿದರೆ, ನಾಲ್ಕು ಜನರಲ್ಲಿ ಒಳ್ಳೇ ಮೇಲಾಗಿ ಇರುವಂಥ ಭಾಗ್ಯ. ಒಬ್ಬಿಬ್ಬ ಕೂಲಿಯವರನ್ನಿಟ್ಟುಕೊಂಡಿರುವಷ್ಟು ದೊರಕಣೆ....”

“ಇಲ್ಲಿ ಕೇಳಿಲ್ಲೆ” ಯಶೋಧರನು ತನ್ನನ್ನು ಬಿಗಿಹಿಡಿದುಕೊಳ್ಳುತ್ತ ಅಂದದ್ದು: “ಇದಿಷ್ಟೇ ಯಾಕೆ, ಮೇಲುಪ್ಪರಿಗೆಯ ಮನೆಯಲ್ಲಿ ಕೊಡ್ರುವಿಯಂತೆ! ಸ್ವಲ್ಪ ತಾಳು. ಈಗ ಸಿಕ್ಕುತ್ತಿದ್ದದ್ದರಲ್ಲಿಯದೊಂದೊಂದು ‘ಕಾಸೆ’ಂದರೆ ನನಗೀಗ ದೊಡ್ಡ ಖಜೀನೆ ಇದ್ದಂತೆ.”

“ನಿಮ್ಮ ಖಜಾನೆಯೆಲ್ಲ ಬ್ಯಾಂಕಿನಲ್ಲಿ, ಅಹುದಲ್ಲೋ?”

“ಅಲ್ಲ ಬಿಡು! ಒಂದಕ್ಕೆ ನೂರು–ಒಂದಕ್ಕೆ-ಸಾವಿರ ಬರುವಂಥದೊಂದು ಹೊಸ ಯುಕ್ತಿಯಲ್ಲಿ ಹಾಕಿದ ದುಡ್ಡು ಹಾಳಾಗಿಹೋಗುವದೆ? ಬಹಾದ್ದೂರನ (ಎದೆಗೆ ಕೈಹಚ್ಚಿಕೊಂಡು) ಶೋಧಕ್ಕೆ–ಜಾಣತನಕ್ಕೆ– ಏನಾದರೂ ಬೆಲೆ ಇರುವದೋ ಇಲ್ಲವೊ? ನೀನೆ ಹೇಳು.”

“ಈಗ ಮಾಡಿದಷ್ಟು ಶೋಧದಿಂದಲೇ ಮಣೆಯ ಮೇಲೆ ಕೂತು ಉಣ್ಣುವಷ್ಟು ದೇವರು ಕೊಟ್ಟಿದ್ದಾನೆ. ಹೆಚ್ಚಿನ ಹಣದ ಸುದ್ದಿ ನಮಗೆ ಬೇಡವೇ ಬೇಡ. ಹಿಂದೆ ಮಾಡಿದಷ್ಟೇ ಮುಂದೆ ಮಾಡುವದು. ನಿಮ್ಮ ಮೊದಲನೇ ಶೋಧವೇನು ಕಡಿಮೆ ಮಾಡಿತೆ? ಅದರಿಂದಲೇ ಮನೆಮಾರು

ಪಾಳಾಗಿ ಕೂಳುಕೂಳೆಂದು ತಿರುಗಿ, ನಾಲ್ಕು ಜನರಿಗೆ ಹಾಕುವಂಥ ಕೈಯಿಂದಲೇ ಎಡಡನೆಯವರಿಗೆ ಬೇಡಬೇಕಾದದ್ದು. ಹೂವು ಮಾರಿದ ಊರಲ್ಲಿ ಹುಲ್ಲು ಮಾರಬಾರದೆಂಬದರಿಂದಲೇ ಈ ಮುಂಬಯಿ ಸೇರಲಿಲ್ಲವೇ ? ಪ್ರೇಮಚಂದ ಶೇಟಜಿಯವರಲ್ಲಿ ಮೊದಲು ಹೋದಾಗ ನಿಮ್ಮ ಮೈಮೇಲೆ ಬಟ್ಟೆಗಳಾದರೂ ಗಟ್ಟಿಯಾದಂಥವಿದ್ದವೆ ? ಪ್ರೇಮಚಂದರು “ನಿಮ್ಮನ್ನು ಕೆಲಸಕ್ಕೆ ಬಾ ಎಂದು ಹೇಳಿದ ದಿವಸ ನೀವೇ ಅಲ್ಲವೆ, ಅವರನ್ನು ದೇವರ ಸಮಾನರೆಂದು ಕರೆದು ಹಾರೈಸಿದವರು ? ”

“ ನಿನ್ನ ಹಳೇ ರಗಳೆ ಸಾಕು ತೆಗಿ ! ಒಮ್ಮೆಯಾದರೂ ಉತ್ತೇಜನದ ಮಾತು ! ಈ ಹೆಂಗಸರನ್ನು ಯಾವ ದೇವರು ಹುಟ್ಟಿಸಿದ್ದಾನು ? ಸಹಾನುಭೂತಿಯ ಸುದ್ದಿಯೇ ಇಲ್ಲ. ಇದಿಕೋ, ಈ ಸಾರೆ ಮಾತ್ರ ನನ್ನ ಕೆಲಸ ನನಗೆ ಚ–ನ್ನಾ–ಗಿ ಗೊತ್ತಿದೆ. ಈ ಹೊಸ ಶೋಧದಿಂದ ಹಣ ಬಂದಕೂಡಲೆ ಮೊದಲು ಕಟ್ಟಿಸುವದು ಮೂರುಪ್ಪರಿಗೆಯ ಮಹಾಲು ! ” ಶಾಂತಾದೇವಿಯು ತಲೆದೂಗಿದಳು.

“ ಈಕೋ, ಈ ಸಂಗತಿಯು ನಮ್ಮಿಬ್ಬರಿಗೇ ಗೊತ್ತಿರಲಿ. ಇಲ್ಲದಿದ್ದರೆ ನೆರೆಯವರನ್ನು ಮುಂದೆ ಕೂಡಿಸಿಕೊಂಡು ಚಂದಾಗಿ ಮಾತಾಡಿಬಿಟ್ಟೀ ! ಈ ಹಣ ಬಂದ ದಿನವೇ, ಒಂದು ‘ ಎಂಜನೀಯರಿಂಗ’ದ ಭವ್ಯವಾದ ‘ಶಾಪ್’ ತೆಗೆದುಬಿಟ್ಟೆನೆಂದೇ ತಿಳಿ. ಅಲ್ಲಿಂದ ದಿನಕ್ಕೊಂದರಂತೆ ಶೋಧವನ್ನು ತೆಗೆದುಕೋ. ರೊಕ್ಕದ ಸುರಿಮಳೆ!... ಯಾಕೆ ಮಾತಾಡಲೊಲ್ಲಿ ? ”

ಆದಷ್ಟು ಉಲ್ಲಾಸವೃತ್ತಿಯನ್ನು ತಾಳಿ ನಗೆಮೋರೆಯನ್ನು ಮಾಡಿಕೊಂಡು ಶಾಂತೆಯು ಅಂದದ್ದು: “ಆಮೇಲೆ ಬಂದ ಲಾಭವೆಲ್ಲವೂ ನಿಮ್ಮದೇ ಅಲ್ಲವೆ ? ’

“ಅರ್ಥಾತ್!” ತುಸು ಕಾಲೂರಿ ನಿಂತಕೂಡಲೆ, “ಈ ಪ್ರೇಮಚಂದನ ಸಮಾಚಾರವನ್ನು ತೆಗೆದುಕೊಳ್ಳೋಣಂತೆ. ಇವನು ಆರಿವೆ ಕಚ್ಚಿಕೊಂಡು ಬಿಕ್ಕೆ ಬೇಡದಿದ್ದರೆ ನನ್ನ ಹೆಸರೇ ಅಲ್ಲ ! ”

“ ಛೇ, ಆ ಮಾತೇ ಸಾಕು ! ಮಾತಾಡಿದಂತೆ ನೀವು ಎಂದಿಗೂ ಮಾಡಲಿಕ್ಕಿಲ್ಲ ಇಷ್ಟು ಸೇಡು ತೀರಿಸಿಕೊಳ್ಳುವ ಬುದ್ಧಿಯು ನಿಮ್ಮಲ್ಲಿ ಹುಟ್ಟುವಂತೆ ಆವನೇನು ಮಾಡಿಯೂ ಇಲ್ಲ.... ”

"ನೀನೂ ಅವನ ಕೈವಾರ ತೆಗೆದುಕೋ ಹೇಳುಂದರೆ!"

"ನಿಜವೆಂದಾದು ಯಾರಾದರೂ! ಅವನ ಉಪೇಕ್ಷೆಯೇ ನಿನ್ನ ಮನಸ್ತಾಪಕ್ಕೆ ಕಾರಣವಾದ್ದರಿಂದ ನನ್ನ ನಷ್ಟವನ್ನು ಕಂಡು ಮಾತ್ರ ನಾನು ಅವನನ್ನು ಹಳಿಯುವದಿಲ್ಲಲ್ಲ, ನಿನ್ನ ಕೂಡ ಅವನು ಜನ್ಮನಷ್ಟ, ಅನ್ಯಥಾ ಚರಣೆಯು ಬಳಿಸಿಲ್ಲವೆಂಬುದನ್ನು ನಾನು ಬೇಕಾದಲ್ಲಿ ಹೇಳೇನು. ಇದೇ ನಷ್ಟದ ಭಾರವನ್ನೇ ಅವನು ಹೊತ್ತುಕೊಂಡನಲ್ಲ...'' ಅವಳು ನಡುವೇ ಸ್ವರ ತಗ್ಗಿಸಿದಳು. "ಹೀಗ್ಯಾಕೆ ನೋಡುವವನು? ನೋಡಿದರೆ ಅಂಜಿಕೆಯೇ ಬರುತ್ತದಲ್ಲ!" ಎಂದು ಶಾಂತೆಯು ಚಟ್ಟನೆ ಚೀರಿದಳು.

ಯಶೋಧರನು ಜಡಬಡಿಸಿಕೊಂಡೆದ್ದು ಚಾಟು ಅಪ್ಪಳಿಸುತ್ತ ಬಾಗಿಲದ ಕಡೆಗೆ ಹೋದನು. ಇವನ ಈ ಗದ್ದರಿಕೆಯನ್ನು ಕಂಡು ಶಾಂತೆಯು ತನ್ನ ಎರಡೂ ಕೈಗಳಿಂದ ಕಣ್ಣೇ ಮುಚ್ಚಿಕೊಂಡಳು. ಬಾಗಿಲದ ಚಿಲಕವನ್ನು ಅವನು ಹೇಗೋ ತೆಗೆದನು. ಬಾಗಿಲಿನಿಂದ ಹಿಂದಿರುಗಿ ಅವನಂದದ್ದು "ಇನ್ನೊಮ್ಮೆ ಹೀಗೆ ಮಾತಾಡು ಅಂದರೆ ನೋಡುತ್ತೇನೆ! ತಿಳಿಯಿತೆ, ಪೂರಾ ಬುದ್ಧಿಗಲಿಸಿಬಿಟ್ಟೇನು. ಪ್ರೇಮಬಂಧನದಿಂದ ನನಗೆ 'ನ್ಯಾಯ' ದೊರೆಯಲಿಕ್ಕೇಬೇಕು. ನಿನ್ನ ಮನಸಿಗೆ ಬರಲಿ, ಬರದಿರಲಿ ನಾಲಿಗೆಗೆ ಕೀಲಿ ಮಾತ್ರ ಕೊಡುತ್ತಿರಬೇಕು!" ಎಂದವನೇ ಆ ತಾಮಸಿಯು ಉರಿಗಣ್ಣಿನಿಂದ ಬೆಂಕಿಯನ್ನೇ ಬೀರುತ್ತ ಬೀಡಿಬಿಟ್ಟು ನಡೆದನು.

ಅವನು ಹೋದ ಎಷ್ಟೋ ಹೊತ್ತಿನವರೆಗೂ ಶಾಂತೆಯು ನಿಶ್ಚೇಷ್ಟಳಂತೆ ಕೂತಲ್ಲಿಯೇ ಕೂತಿದ್ದಳು. ಅವಳು ಕಣ್ಣೀರು ಸುರಿಸಲಿಲ್ಲ; ಅಳುತ್ತ ಕೂಡುವ ಹಾದಿ ಹಿಂದಾಗಿತ್ತು. ಅವಳ ಪ್ರಾಯ ಸೌಂದರ್ಯಗಳು ಕಂದಿ ಹೋಗಿದ್ದವು. ಶರೀರವು ಉಪವಾಸ ವನವಾಸಗಳಿಂದ ಸೊರಗಿ ಬೆಂಡಾಗಿತ್ತು. ಮನಸ್ತಾಪಕ್ಕಂತೂ ಮೇರೆಯೇ ಇಲ್ಲದಾಗಿತ್ತು. ಪ್ರೀತಿಪಡುವಿನಲ್ಲಿನ ಆಶಾತಂತುವು ಈಗೋ ಇನ್ನೊಂದು ಗಳಿಗೆಗೋ, ಎಂಬಂತೆ ಕಾಣಿಸುತ್ತಿತ್ತು. ಈ ಸ್ಥಿತಿಯಲ್ಲಿ ಎಲ್ಲ ಸಂಕಟಗಳಿಗೂ ಆದ್ಯಮಾಂತ್ರಿಕನಾದ ಪರಮೇಶನನ್ನೇ ಎಲ್ಲರೂ ಮೊರೆಹೊಗುವಂತೆ ಇವಳೂ ಅವನನ್ನೇ 'ರಕ್ಷ, ರಕ್ಷ' ಎಂದು ಧಾವಿಸಿ ಶರಣುಹೋದಲ್ಲಿ ಆಶ್ಚರ್ಯವೇನು? ತನ್ನ ಪ್ರೀತಿಯ ಪತಿಯನ್ನು ಈ ಸಂಕಟಪರಂಪರೆಯಲ್ಲಿ ಕಾಯ್ದು ತನ್ನನ್ನು ಸಲುಹಿಕೊಳ್ಳಬೇಕೆಂದು

ಅವಳು ಪ್ರಾರ್ಥಿಸಿದಳು. ಕೈವಿಾರಿದ ಕಾಲಕ್ಕೆ ಇಂಥ ಪ್ರಾರ್ಥನೆಗಳ ಫಲವು ಎಷ್ಟು ಜನರಿಗೆ ದೊರತಿರುವದು ? ತಮ್ಮ ಪತಿಗಳ ಆಯುಷ್ಯವನ್ನು, ಅಂತ್ಯ ಕಾಲದಲ್ಲಿ ಅನ್ಯೋನ್ಯಭಾವದಿಂದ ಬೇಡಿಕೊಂಡವರೆಷ್ಟು ಯುವತಿಯರು ಸುವಾಸಿನಿಯರಾಗಿ ಉಳಿದರು ? ಈ ಪ್ರಾರ್ಥನೆಯಲ್ಲಿಯೇ ದೋಷವೋ ? ಇಲ್ಲವೆ ಆ ಕೊಡಗೈ ದೊರೆಯೇ ಅಸಮರ್ಥನೋ ?

* * * *

ಆ ದಿವಸ ಮಧ್ಯಾಹ್ನದ ನಂತರ ಯಶೋಧರನು ಕಾರಖಾನೆಗೆ ಹೋಗ ಲಿಲ್ಲ. ಪಟ್ಟಣದಲ್ಲಿ ಭ್ರಮಿಷ್ಟನಂತೆ ಒಂದೆರಡು ಮೈಲುಗಳ ವರೆಗೆ ತಿರುಗಾಡಿ ಸಮುದ್ರ ದಂಡೆಯ ಮೇಲೆ ಕುಳಿತು ಸದ್ಯಕ್ಕೆ ತಾನು ಕೂಳುಗೇಡಿಯಾದದ್ದು. ಕೇವಲ ಪ್ರೇಮಚಂದನ ಕಪಟಾಚರಣೆಗಳಿಂದಲೇ ಅಲ್ಲದೆ, ಹೀಗಾಗುವದಕ್ಕೆ ತಾನೂ ಯತ್ಕಿಂಚಿತ್ತಾದರೂ ತಪ್ಪುಗಾರನಲ್ಲವೆಂದು ನಿಶ್ಚಯಿಸಿಕೊಂಡನು. ಈ ನಿಶ್ಚಯವಾದನಂತರ ಭವಿಷ್ಯತ್ಕಾಲದ ಭವಿಷ್ಯದ ಭವಣೆಯನ್ನು ಏನು ಹೇಳ ಬೇಕು? 'ನ್ಯಾಯ ನ್ಯಾಯ' ವೆಂಬ ಕನವರಿಕೆಯನ್ನು ಬಿಟ್ಟು, ಇನ್ನೊಂದನ್ನು ಇವನು ಹಿಂಬಾಲಿಸುವ ಜಂಬರಕ್ಕೆ ಬಿದ್ದಾನೆಂಬ ಆಶೆಯೇ ಉಳಿಯಲಿಲ್ಲ. ಸಂಧ್ಯಾಕಾಲವಾಗುತ್ತಲೇ ಅರನಿದ್ದೆಯೊಳಗಿದ್ದವನಂತೆ ಕುಳಿತಿದ್ದ ಯಶೋ ಧರನು ತಟ್ಟನೇ ಎದ್ದು ಮತ್ತೆ ಹಾದೀ ಹಿಡಿದನು. ಅತ್ತಿತ್ತ ತಿರುಗಾಡುವಷ್ಟ ರಲ್ಲಿ ಫಕ್ಕನೆ ನೆನಪಾಗಿ—ತಾನು ದಿನಾಲು 'ಅಡ್‌ವ್ಹೊಕೇಟ' ವನ್ನು ಸಂಜೆಗೆ ತಪ್ಪದೆ ತೆಗೆದುಕೊಳ್ಳುವ ಪ್ರಘಾತವು ಇಂದೇಕೆ ಮುರಿದೆನೆಂಬದಾಗಿಯೋ ಏನೋ,– ಆ ವೃತ್ತಪತ್ರದ ಆಫೀಸಿನ ಕಡೆಗೆ ನಡೆದನು. ಹೋದವನೇ ಒಂದಾಣೆ ಕೊಟ್ಟು ಅಡ್‌ವ್ಹೋಕೇಟನ್ನು ತೆಗೆದುಕೊಂಡು, ಅತ್ತಿತ್ತ ಎಲ್ಲಿಯೂ ಹೋಗದೆ 'ಬ್ಯಾಂಕುಗಳ' ಸುದ್ದಿಯನ್ನು ಓದಹತ್ತಿದನು. ಒಂದೆರಡು ನಿಮಿಷ ಗಳಲ್ಲಿ ............ ಬ್ಯಾಂಕಿನ ನಷ್ಟಚರ್ಯವು ............ ಕೋಟಿ ರೂಪಾಯಿ ಗಳಷ್ಟು ! ಬ್ಯಾಂಕಿನಲ್ಲಿ ಹಣವಿಟ್ಟವರಿಗೆ ರೂಪಾಯಿಯಲ್ಲಿ ನಾಲ್ಕಾಣೆಯಂತೆ ಸಿಗುವದು ! ಇದೆಲ್ಲವನ್ನೂ ಒಂದೇ ಒಂದು ನಿಮಿಷದಲ್ಲಿ ಓದಿಕೊಂಡವನೇ ಗಕ್ಕನೆ ನೆಲಕ್ಕೆ ಕೂತನು. ಇನ್ನೆಲ್ಲಿಯ ಶೋಧ ? ಇನ್ನೆಲ್ಲಿಯ ಲಾಭದಾಸೆ ? ಎಂದು ನುಡಿಯಲ್ಲಿಯೇ ನುಡಿದದ್ದಷ್ಟೇ ಮಾತ್ರ. ಹಾಗೆಯೇ ತೊಡಕಾಲು ಹಾಕುತ್ತ ಹತ್ತರದಲ್ಲಿಯೇ ಇದ್ದ 'ಶಕ್ತಿ-ಶಾಂತಿಗೃಹ' ವನ್ನು ಹೊಕ್ಕನು. ಹಗ

ಲಿಲ್ಲ ಶ್ರಮಪಟ್ಟು ಸಾಯಂಕಾಲಕ್ಕೆ ಶ್ರಮನಿವಾರಣಾರ್ಥವಾಗಿ ಮಾದಕ ಪದಾರ್ಥಗಳನ್ನು ಸೇವಿಸುವದು ಕಾರಖಾನೆಗಳಲ್ಲಿಯ ಸಾಧಾರಣ ತರಗತಿಯ ಜನರ ಪರಿಪಾಠವು. ಆದರ ದುಷ್ಪರಿಣಾಮದಲ್ಲಿ ಲಕ್ಷ್ಯವಿಟ್ಟು ಅದರಿಂದ ದೂರಿರುವ ಜನರು ತೀರ ಕಡಿಮೆಯೆಂದರೂ ಸಲ್ಲುವದು. ಇರಲಿ. ಯಶೋಧರನು ಈ ಜನರ ಕೂಡಾಗಲೀ, ತಾನೊಬ್ಬನೆಯಾಗಲೀ ಇದುವರೆಗೆ ಈ 'ಗೃಹ'ಗಳನ್ನಾಶ್ರಯಿಸಿದವನಲ್ಲ. ಆದರೆ ವಿಪರೀತಕಾಲಕ್ಕೆ ವಿನಾಶಬುದ್ಧಿಯೇ ಮೇಲು. ಅಲ್ಲಿ ಒಂದೆರಡು ಪಾತ್ರೆತುಂಬ ಹಾಕಿಕೊಂಡವನೇ ಮೂರು ತಾಸು ರಾತ್ರಿಯ ಸುಮಾರಕ್ಕೆ ಮನೆಗೆ ಬಂದನು. ಬಂದಕೂಡಲೆ ದೊಡ್ಡ ಧ್ವನಿ ತೆಗೆದು ಅಳಹತ್ತಿ 'ನಾವು ಪುಟ್ಟಪೂರಾ ಮುಳುಗಿದೆ'ವೆಂದು ಹೆಂಡತಿಗೆ ಹೇಳಿದನು. ಮತ್ತೆ ಅಳುವದು; ಮತ್ತೆ ಅದೇ ಸುದ್ದಿ. ಯಾಕೆಂದರೆ ಉತ್ತರವಿಲ್ಲ. ಹಿಂದೆ ಆದದ್ದನ್ನೆಲ್ಲ ಮರೆತು, ಇಲ್ಲವೆ ಅದನ್ನು ಪ್ರಸ್ತುತಕ್ಕೆ ಮುಚ್ಚಿಕೊಂಡು, ಶಾಂತೆಯು ಮಮತೆಯಿಂದ, ಏನೂ ಚಿಂತೆಯಿಲ್ಲೆಂದು ಹೇಳಿ ಅವನನ್ನು ಸಮಾಧಾನಗೊಳಿಸಬೇಕೆಂದು ಪರಿಪರಿಯಿಂದ ಯತ್ನಿಸಿದಳು. ಮೊದಲಿನಂತೆ ಮಾಡದೆ ಇನ್ನು ಮುಂದೆ ಜಾಗ್ರತೆಯಿಂದ ಕೆಲಸ ಮಾಡಿದರೆ ತಮಗೇನೂ ಕೊರತೆಯಿಲ್ಲೆಂದೂ ಮತ್ತಿನ್ನೂ ಎಷ್ಟೋ ಬಗೆಯಿಂದ ಅವನಿಗೆ ಉತ್ತೇಜನ ಬರಲೆಂದು ಸಾಯಾಸಪಟ್ಟಳು. ಬರಬರುತ್ತ ಯಶೋಧರನು, ಪ್ರೇಮಚಂದನನ್ನು ಶಾಪಿಸುವದಕ್ಕೂ, ಅವನನ್ನು ನುಚ್ಚುನೂರಾಗಿ ಕಡಿದುಹಾಕುವೆನೆಂದೂ, ತನ್ನ ನಾಶಕ್ಕೆ ಅವನೇ ಕಾರಣನೆಂದೂ ನಾನಾಪರಿಯಿಂದ ಬೈದಾಡಿ ತಾಳಬಿಟ್ಟನು. ಈ ಆಕ್ರೋಶವನ್ನು ಕಂಡು, ಮನೆಯಲ್ಲಿ ಒಬ್ಬಳೇ ಒಬ್ಬಳಾದ ಶಾಂತೆಯ ಗತಿ ಏನಾಗಿದ್ದೀತೆಂಬದು ಇಂಥ ಪ್ರಸಂಗಗಳನ್ನು ಕಂಡು, ಕೇಳಿ, ಅನುಭವಿಸಿದವರಿಗೇ ಗೊತ್ತು.

ಕೊನೆಯಲ್ಲಿ ಶಾಂತೆಯು ಸಾಮೋಪಚಾರಗಳಿಂದ ತನ್ನ ಗಂಡನು ಹಾದಿಗೆ ಬರುವದಿಲ್ಲೆಂದು ಪತಿವ್ರತೆಯರ ಪರಮ ಸಾಧನವಾದ ಮೌನವ್ರತವನ್ನವಲಂಬಿಸಿ ಒತ್ತಟ್ಟಿಗೆ ಸ್ವಸ್ಥ ಕುಳಿತುಬಿಟ್ಟಳು. ಸುಮ್ಮನೇ ಕೂತದ್ದು ಸಹನವಾಗದೆ ಯಶೋಧರನು "ನಾನು ಸತ್ತ ಮೇಲೆ ಹೀಗೆ ಕೂಡ್ರುವದು ನಿನ್ನ ಪಾಲಿಗೆ ಇಟ್ಟದ್ದೇ, ಜೀವದಿಂದಿರುವಾಗಲೇ ಹೀಗೆ ಅಪಶಕುನಗಳನ್ನು ಬಗೆಯುವಿಯಾ?" ಎಂದವನೇ ಕೈಲೊಂದು ಕಾಲಿಲೆರಡು ಕೊಟ್ಟು, "ಪ್ರೇಮ

ಚಂದ, ಇದೆಲ್ಲ ನಿನ್ನ ಸಲುವಾಗಿ! ನಾನು ಮನೆಮುರುಕೊಂಡದ್ದು ನಿನ್ನ ದೆಸೆಯಿಂದ! ನೀವು ಧನವಂತರೆಲ್ಲರೂ ಗಂಟಿಚೋರರಕಿಂತಲೂ ಠಕ್ಕರು! ನಾನು ದುಡಿಯಬೇಕಂತೆ, ನನ್ನ ಶ್ರಮದ ಫಲವು ಕೇವಲ ಹಣವಂತನೆಂಬೀ ಇವನ ಮನೆ ಸೇರಬೇಕಂತೆ! ತಲೆಯಲ್ಲಿ ನೋಡಿದರೆ ಮೂರು ಜೊಗಸೆ ಮಣ್ಣು! ಯಶೋಧರಾ, ನೀನಂತೂ ಎಲ್ಲ ನಾಚಿಕೆಯನ್ನೂ ಬಿಟ್ಟೆ" ಎಂದು ಅಂದುಕೊಂಡವನೇ ಮತ್ತೆ ಮನೆಯ ಹೊರಗೆ ಬಿದ್ದನು.

೪

ಮರುದಿನ, ಮೂರನೆಯ ದಿನ, ಕಾರಖಾನೆಗಳಲ್ಲಿ ನೌಕರರು ಒಮ್ಮೆಲೆ ಕೆಲಸ ಬಿಟ್ಟುಕೊಡುತ್ತಾರೆಂಬ ಸುದ್ದಿಯೇ ಘನಸುದ್ದಿ. ಯಶೋಧರನ ಪಂಗಡಕ್ಕೆ ಈ ಕಾಲದಲ್ಲಿ ಕೆಲವರು ಸೇರಿಕೊಳ್ಳುವದೇನೂ ದೊಡ್ಡಮಾತಲ್ಲ. ಕೆಲವರು, ಇದೇನೋ ಮೋಜಿನ ಸುಗ್ಗಿಯೆಂದು, ಕೆಲವರು ಆತ್ಮಪ್ರೌಢಿಗಾಗಿ, ಇನ್ನುಳಿದವರು ಹಲವೊಂದು ಕಾರಣದಿಂದ ಮನಸಿಲ್ಲದಿದ್ದರೂ ಬೆಂಕಿಬಿದ್ದಲ್ಲಿಗೆ ಜನವು ಓಡಿ ನೆರೆಯುವಂತೆ ಯಶೋಧರನ ಬೆನ್ನುಹತ್ತಿರುವರೆಂಬ ವಾರ್ತೆಯು ಪ್ರೇಮಚಂದನ ಕಿವಿಮುಟ್ಟಿತು. ತಕ್ಕಡಿಯ ಹೊಯಿಲು ತಿಳಿದು ಕೆಲಸ ಸಾಧಿಸುವದಂತೂ ಮಾನವರ ಸ್ವಭಾವವು. ಕಡೆತನಕ ಯಶೋಧರನ ಬೆನ್ನು ಕಟ್ಟಿ ಬಾಳುವವರು ತೀರ ಕಡಿಮೆ ಜನ. ಈ ವಾರ್ತೆಯನ್ನು ಕೇಳಿ, ಪ್ರೇಮಚಂದನು ಯಶೋಧರನನ್ನು ಹೇಗಿದ್ದಂತೆ ತನ್ನಲ್ಲಿಗೆ ತರಹೇಳಿ ಕೆಲವು ಆಳುಗಳನ್ನೂ ವೃದ್ಧ ಗುಲಾಬಚಂದನನ್ನೂ ಕಳುಹಿಸಿದನು. ಗುಲಾಬಚಂದನು "ಧನಿಯರೇ, ಆವನಿಂದೇನೂ ಆಗುವಂತಿಲ್ಲ, ಸುಮ್ಮನೆ ಯಾಕೆ ಆವನ ಪ್ರಸ್ಥ ಬೆಳಿಸುವಿರಿ?" ಎಂದು ಗುಣಗುಡುತ್ತಲೇ ಒಳ್ಳೇದೆಂದು ಆವನನ್ನು ಹಿಡಿದುತಂದನು.

*     *     *     *

ಯಶೋಧರನು ಪರಮೋದಾರನಾದ ಪ್ರೇಮಚಂದನೆದುರಿಗೆ ಬಂದು ನಿಂತಾಗ ಆ ಉಚ್ಚ್ವಮೂರ್ತಿಯ ಸ್ವರೂಪವನ್ನು ಬಣ್ಣಿಸಲು ಬಾಣಕವಿಯಷ್ಟು ಚಾತುರ್ಯವೂ ಶಬ್ದಸಂಗ್ರಹವೂ ಬೇಕು. ಯಶೋಧರನನ್ನು ಕಂಡಕೂಡಲೆ, ಪ್ರೇಮಚಂದನು, ಹೊಟ್ಟೆಯ ಮಕ್ಕಳು ಅಡ್ಡದಾರೀ ಹಿಡಿದರೆ

ತಂದೆಯು—ತಾಯಿಯು—ವಾತ್ಸಲ್ಯದಿಂದ ಪ್ರಸಸ್ತ್ಯ ಅವರನ್ನು ತೀಡಿತಿದ್ದಿ ಹಾದಿಗೆ ತರುವದಕ್ಕಾಗಿ ಶ್ರಮಪಡುವಂತೆ ಉತ್ಸುಕತೆಯಿಂದ ಯಶೋಧರನನ್ನು ಪ್ರೇಮದಿಂದ ಹತ್ತಿರ ಕುಳ್ಳಿರಿಸಿಕೊಂಡು ಅಂದದ್ದು: "ಯಶೋಧರಾ, ನೀನು ನಿಜವಾಗಿಯೇ ಯಶಸ್ಸನ್ನು ಹೊಂದತಕ್ಕವನು. ನೀನು ಸಾಮಾನ್ಯನಲ್ಲ. ನಿನ್ನ ತಲೆಯಲ್ಲಿ ಈ ದುರಾಶೆ ಯಾಕೆ ಸೇರಿತು? ಇದರಿಂದ ಯಾರೂ ಮುಂದಾಗಿಲ್ಲ. ಬುದ್ಧಿವಂತರಿಗೆ ಈ ಪರಿಯ ಶಾಪವೋ ಹೇಗೆ? ಈಗ ಈ ನಾಲ್ಕು ಸಾವಿರದ ಹುಂಡಿಯು ನಿನ್ನದು. ನಿನ್ನ ಶೋಧದ ಸ್ವಾಮಿತ್ವವು ಎಂದೋ ನಿನ್ನ ಲೆಕ್ಕಕ್ಕೆ ಬರೆಯಿಸಿದ್ದೇನೆ. ಇದನ್ನು ತಕೊಂಡು, ನೀನು ನನ್ನಲ್ಲಿ ಬಂದಾಗ ಯಾವ ಬಗೆಯಿಂದ ಕೆಲಸ ಮಾಡುತ್ತಿದ್ದಿಯೋ ಹಾಗೆಯೇ ಸಾಗಿಸು. ನಿನ್ನಿಂದ ನನಗೆ ನಿಜವಾಗಿಯೇ ಲಾಭವಿದೆ. ಆದರೂ ಲಾಭಕ್ಕೆ ಪಾಲುಗಾರರು ಬಹುಜನರು. ನೀವೆಲ್ಲರೂ ನನ್ನ ಪಾಲುಗಾರರಲ್ಲವೆ?" ಎಂದು ಯಶೋಧರನ ಗದ್ದ ಮುದ್ದಾಡಿ ಹೇಳಿದರೂ ಮದ್ದುತಿಂದ ಜನಕ್ಕೆ ಮೂರು ಬುದ್ಧಿಯೆಂಬದು ಸುಳ್ಳಾದೀತೆ? "ಈ ನಾಲ್ಕು ಸಾವಿರವನ್ನು ನಿಮಿಷದಲ್ಲಿ ಗಳಿಸುವ ಸಾಮರ್ಥ್ಯವು ನನ್ನಲ್ಲಿ ಇಲ್ಲವೆಂದು ತಿಳಿದು ಬಿಕ್ಕೆ ಬೇಡುವವನಿಗೆ ಬೊಗಸೆಕಾಳು ನೀಡುವಂತೆ ಮಾಡುವಿಯಲ್ಲ!" ಎಂದು ಯಶೋಧರನು ಆ ಹುಂಡಿಯನ್ನು ಚರಚರನೆ ಹರಿದು ಕಾಲಿಲೊದ್ದು ಈಡಾಡಿ ಬಿಟ್ಟನು. ಪ್ರೇಮಚಂದನು ಮತ್ತೆ ಸಮಾಧಾನದಿಂದ "ನಾನು ಈಗಿಂದೀಗ ಡಾಕ್ಟರನನ್ನು ಕರೆಯಿಸುವೆನು; ನಿನಗೇನೋ ಆಗಿದೆ" ಎಂದು ಅನ್ನುವಷ್ಟರಲ್ಲಿಯೇ, ಯಶೋಧರನು ಕಿಸೆಯೊಳಗಿನ ರಿವಾಲ್ವರನ್ನು ಹಾರಿಸಿದನು. ತಿಳಿಗೇಡಿಯು ಎಲ್ಲಿ ಹಾರಿಸಿದನೋ, ಆದರಿಂದ ಅಪಾಯವೇನೂ ಆಗಲಿಲ್ಲ. ಆದರೆ ಆ ಸಪ್ಪಳವನ್ನು ಕೇಳಿ ಕಾರಖಾನೆಯೊಳಗಿನ ಜನರು ಒಟ್ಟಾಗಿ ಅವನನ್ನೇನು ಮಾಡಿದರೋ, ಇಲ್ಲವೆ ಅವನೇ ಸುಕುಮಾರಿಯಾದ ಶಾಂತೆಯ ಚಿಂತೆಯಿಲ್ಲದೆ ವಿಧಿವಶನಾದನೋ ನಾವೇತಕ್ಕೆ ಹೇಳುವ?

## ಗೃಹವ್ಯವಸ್ಥೆ

ಬೆಳಗು ಮುಂಜಾನೆ ಎಂಟು ಗಂಟೆಗೆ ಹೊಗೆಬಂಡಿಯು ×× ಸ್ಟೇಶನಕ್ಕೆ ಬಂದು ನಿಂತಿತು. ಸಂತತಧಾರವಾಗಿ ಮಳೆ ಹೊಡೆಯುತ್ತಿರುವದರಿಂದ ಪ್ರಯಾಣಸ್ಥರು ಬೇಸತ್ತು ಗಾಡಿಯಿಂದ ಯಾವಾಗ ಇಳಿಯುವೆವೋ ಎಂದೆನ್ನುತ್ತಿದ್ದರು. ನಿರ್ಮಲಾಬಾಯಿಯೂ ಅವಳ ಮಗಳಾದ ಲಲಿತಾಗೌರಿಯೂ ಹಿಂದಿನ ಸ್ಟೇಶನದಾರಭ್ಯ ಇಳಿಯುವದಕ್ಕಾಗಿ ವ್ಯವಸ್ಥೆ ಮಾಡಿಟ್ಟುಕೊಂಡವರು ಬಂಡಿಯು ನಿಂತಕೂಡಲೆ ಲಗುಬಗೆಯಿಂದ ಕೆಳಗಿಳಿದರು. ತಮ್ಮನ್ನು ಊರಲ್ಲಿ ಕರಕೊಂಡು ಹೋಗಲಿಕ್ಕೆ ಯಾರಾದರೂ ಬಂದಿರುವರೋ ಎಂದು ಅವರು ತುಸು ಹೊತ್ತು ಅತ್ತಿತ್ತ ನೋಡಿದರು. ಯಾರೂ ಬಂದಿದ್ದಿಲ್ಲ.

"ಕೇಶವಭಟ್ಟರೆ, (ಗತವಯಸ್ಕನಾದ ಬ್ರಾಹ್ಮಣನು ನಿರ್ಮಲಾಬಾಯಿಯವರ ಮನೆಯ ಆಶ್ರಿತನು) ಪದ್ಮನಾಭನಾಗಲಿ, ಅವನ ಮನೆಯ ಸೇವಕನೊಬ್ಬನಾಗಲಿ, ಯಾರೂ ಬಂದಂತೆ ಕಾಣಿಸುವದಿಲ್ಲ. ಒಂದು ಬಾಡಿಗೆಯ ಗಾಡಿಯನ್ನು ಮಾಡಿಕೊಂಡು ಹೋಗೋಣ; ಇನ್ನೆಷ್ಟು ಹಾದೀ ನೋಡೋಣ?"

"ಪದ್ಮನಾಭರಾಯರಿಗೆ ಇನ್ನೂ ಸೂರ್ಯೋದಯವಾಗಿರಲಿಕ್ಕಿಲ್ಲ! ಮೇಲೆ ಇಂಥ ಮಳೆ! ಅವರು ನಮಗಾಗಿ ವ್ಯವಸ್ಥೆಯನ್ನಿಡುವರೆಂದು ತಿಳುಕೊಳ್ಳುವದೇ ದಡ್ಡತನ" ಎಂದು ಕೇಶವಭಟ್ಟರು ತಮ್ಮ ಅಭಿಪ್ರಾಯವನ್ನು ಹೇಳಿದರು.

"ಅಂದರೇನು ಭಟ್ಟರೆ? ಹುಡುಗನ ಮೈಯಲ್ಲಿ ಹೇಗಿದೆಯೋ ಏನೋ ಎಂದು ಬಾಯಿಯಲ್ಲಿ ಅಕ್ಕಿಕಾಳು ಹಾಕಿಕೊಂಡು ನಾವು ಧಾವಿಸಿ ಬಂದಿರಲು, ನಮ್ಮ ಜೀವಕ್ಕೆ ಸಮಾಧಾನವಾಗುವಂಥ ವರ್ತಮಾನವನ್ನು ಹೇಳಿ, ನಮ್ಮನ್ನು ಕರಕೊಂಡು ಹೋಗಲಿಕ್ಕೆ ಬಾರದಿರಲು ಪದ್ಮನಾಭನು ಕಿವಿಯಲ್ಲಿ ತುತ್ತು ಹಾಕಿಕೊಳ್ಳುತ್ತಾನೆನ್ನಬೇಕೆ? ಇರಲಿ. ಬೇಗನೆ ಗಾಡೀ ಮಾಡಿಕೊಂಡು ಬನ್ನಿರಿ" ಎಂದು ನಿರ್ಮಲಾಬಾಯಿಯು ಚಿಂತಾಕುಲಳಾಗಿ ಹೇಳಿದಳು.

ಪದ್ಮನಾಭರಾಯನು ಕಿಂಚಿತ್ ಸೋಮಾರಿಯಾಗಿದ್ದರೂ ಒಳ್ಳೇ ಬುದ್ಧಿವಂತನಾದ ವಕೀಲನು. ತಿಂಗಳಾ ಇನ್ನೂರು ಇನ್ನೂರೈವತ್ತು ರೂಪಾಯಿಗಳು ಅವನಿಗೆ ಅವಿಚ್ಛಿನ್ನವಾಗಿ ಸಿಕ್ಕುತ್ತಿದ್ದವು. ಅವನಿಗಿಂತ ಕಡಿಮೇ ಬುದ್ಧಿವಂತರಾದವರು ಪದ್ಮನಾಭನಿಗಿಮ್ಮಡಿಯಾದ ಪ್ರಾಪ್ತಿವಂತ ರಾಗಿದ್ದರೂ ಅವನಿಗೆ ಸಲ್ಲುತ್ತಿರುವ ಮರ್ಯಾದೆಯು ಸ್ಪೃಹಣೀಯವಾಗಿತ್ತು. ಪದ್ಮನಾಭರಾಯನು ಸ್ವಭಾವತಃ ಉದಾರನೂ, ಆಪ್ತೇಷ್ಟರಿಗೆ ಪ್ರಿಯನೂ, ಬಡವರಿಗೆ ದಯಾಲುವೂ ಆಗಿರುವದರಿಂದ ಅವನ ಮನೆಯ ವೆಚ್ಚಕ್ಕಿಂತಲೂ ಪ್ರಾಪ್ತಿಯು ಅಧಿಕವಾಗಿದ್ದಿಲ್ಲ. ಊರಲ್ಲಿ ಪ್ರಮಿತರಾದ ಜನರಿರತಕ್ಕ ಭಾಗ ದಲ್ಲಿಯೇ ನೋಡಲು ಪ್ರಶಸ್ತವಾದ ಮನೆಯನ್ನು ಅವನು ಕಟ್ಟಿಕೊಂಡಿದ್ದನು.

ನಿರ್ಮಲಾಬಾಯಿಯ ಗಾಡಿಯು ಪದ್ಮನಾಭರಾಯರ ಮನೆಯ ಮುಂದೆ ಬಂದು ನಿಂತಿತು. ಮಗುವಿನ ಪ್ರಕೃತಿಯು ಇದ್ದಕ್ಕಿದ್ದಂತೆಯೇ ಇರುವದೆಂದು ಕೇಳಿ ಅವಳು ಬದುಕಿಲೆ ಜೀವವೇ ಎಂದು ಸಮಾಧಾನದ ಉಸುರ್ಗರೆದು ಗಾಡಿಯಿಂದಿಳಿದು ಒಳಗೆ ಬಂದಳು. ಅತ್ತಿಗೆಯವರು ಬಂದದ್ದು ಕಂಡು ಪದ್ಮನಾಭರಾಯರ ಪತ್ನಿಯಾದ ಯಮುನಾಬಾಯಿಯು ಸಂತೋಷವನ್ನು ತಾಳಿ 'ಬನ್ನಿರಿ' ಎಂದು ಸ್ವಾಗತವನ್ನಿಕ್ಕಿದಳು.

ಮತ್ತೊಂದು ಮಾತಾಡದೆ "ರಂಗನ ಪ್ರಕೃತಿ ಹೇಗಿದೆ?" ಎಂದು ನಿರ್ಮಲಾಬಾಯಿಯು ಆತುರಳಾಗಿ ಕೇಳಿದಳು.

"ಹಾಂssssಗೆ ಮಲಗಿಕೊಂಡಿದ್ದಾನೆ! ತಿಂಗಳ ದಿವಸ ಹಾಸಿದ ಹಾಸಿಗೆ ತೆಗೆದೇ ಇಲ್ಲ!" ಎಂದು ಯಮುನಾಬಾಯಿಯು ಹೇಳಿದ್ದು ಅಕ್ಷರಶಃ ನಿಜವಾಗಿತ್ತು. ಕತ್ತಲೆಮಯವಾದ ಕೋಣೆಯಲ್ಲಿ ರಂಗನು ನರ ಳುತ್ತ ಮಲಗಿದ್ದನು. ಮಗುವಿನ ಸ್ಥಿತಿಯನ್ನು ಚನ್ನಾಗಿ ನೋಡಬೇಕೆಂದು ಕಿಟಕಿಗಳನ್ನು ತೆಗೆಸಿದರು. ಗಜ್ಜರಿಯ ತುಂಬಿನಂತೆ ಪುಷ್ಟಾಂಗನಾಗಿರುವ ರಂಗಣ್ಣನು ಅಸ್ಥಿಪಂಜರನಾಗಿದ್ದನು. ತೇಜಸ್ಸಿನಿಂದ ಉಕ್ಕುತ್ತಿರುವ ಅವನ ಮುಖವು ಗಂಜಿಯನ್ನು ಹೂಸಿದಂತೆ ಬೆಳ್ಳಗಾಗಿಹೋಗಿತ್ತು.

"ಅತ್ತ್ಯಾ ಬಂದಿರುವಳಲ್ಲ!" ಎಂದು ರಂಗನು ಒಣಗಿ ಸಂಡಿಗೆಯಾ ಗಿದ್ದ ತನ್ನ ಮುಖದಲ್ಲಿ ಕಿಂಚಿತ್ ನಗೆತಾಳಿ ಕೇಳಿಸಿತೋ ಇಲ್ಲವೋ ಎಂಬಷ್ಟು ಸಣ್ಣ ಧ್ವನಿಯಿಂದ ನುಡಿದನು.

"ಹೇಗಿದೆ ಅಪ್ಪ ರಂಗಣ್ಣಾ?" ಎಂದು ರಂಗನ ಸೋದರತ್ತೆಯಾದ ನಿರ್ಮಲಾಬಾಯಿಯವರು ಆ ಬಾಲಕನ ಮೈಮೇಲೆ ಕೈ ಆಡಿಸಿ ಪ್ರೇಮದಿಂದ ಕೇಳಿದಳು.

"ಚಳಿಜ್ವರ ಬರುತ್ತವೆ. ತಿಂಗಳಾಯಿತು ನಿಂತಿಲ್ಲ. ಡಾಕ್ಟರನ ಔಷಧ ಕುಡಿದು ಕುಡಿದು ವಾಕರಿಕೆ ಬಂದುಹೋಗಿದೆ!" ಎಂದು ರಂಗನಂದನು.

ನಡುಮನೆಯಲ್ಲಿರುವ ಬೇರೊಂದು ಪ್ರಶಸ್ತವಾದ ಕೋಣೆಯನ್ನು ತೆರವು ಮಾಡಿ ನಿರ್ಮಲಾಬಾಯಿಯು ಚನ್ನಾಗಿ ಉಡುಗಿ ಲೋಬಾನ ಗುಗ್ಗುಳಗಳ ಧೂಪವನ್ನು ಹಾಕಿ, ಅಲ್ಲಿ ಸ್ವಚ್ಛವಾದ ಹಾಸಿಗೆ ಹಾಸಿ ರಂಗನ ಕೈ ಹಿಡಿದು ಕರೆತಂದು ಅಲ್ಲಿ ಮಲಗಿಸಿದಳು. ಅವನ ಮೈಮೇಲಿದ್ದ ಹೊಲಸಾದ ಬಟ್ಟೆಗಳನ್ನು ತೆಗೆದು ಒಗೆದ ಬಟ್ಟೆಗಳನ್ನು ತೊಡಿಸಿದಳು. "ಅತ್ತ್ಯಾ, ಇಲ್ಲಿ ಬಹಳ ಚನ್ನಾಗಿದೆ ನೋಡು!" ಎಂದು ರಂಗನು ತನ್ನ ಹೊಸ ಸ್ಥಳವನ್ನು ಕಂಡು ಸಂತುಷ್ಟನಾಗಿ ನುಡಿದನು.

ಪದ್ಮನಾಭರಾಯನು ಹತ್ತು ಗಂಟೆಯ ಸಮಯಕ್ಕೆ ಹೊರಗಿಂದ ಬಂದನು. ನೋಡುತ್ತಾನೆ, ಮನೆಯೆಲ್ಲ ವಿಪರೀತವಾಗಿ ಸ್ವಚ್ಛವಾಗಿತ್ತು. ಡಾಕ್ಟರನ ಕಡೆಯಿಂದ ಅವನು ಮಗನಿಗಾಗಿ ಔಷಧ ಚಾಟಲಿ (ಕುಪ್ಪಿ) ಯನ್ನು ತಂದಿದ್ದು ಅದನ್ನು ತೆಗೆದುಕೊಂಡು ರಂಗನ ಕೋಣೆಗೆ ಹೋದನು. ಅವನು ಅಲ್ಲಿದ್ದಿಲ್ಲ. ಬೇರೊಂದು ಕೋಣೆಯಲ್ಲಿ ಅವನು ವ್ಯವಸ್ಥಿತನಾಗಿ ಮಲಗಿದ್ದು ಕಂಡು ಬಹು ಸಂತುಷ್ಟನಾಗಿ "ಇದನ್ನೆಲ್ಲ ಯಾರು ಮಾಡಿದರು, ರಂಗಾ?" ಎಂದು ಅವನು ಕೇಳಿದನು.

"ನಿರಮುಕ್ಕ ಅತ್ತ್ಯಾ ಬಂದಿರುವಳಲ್ಲ! ಅವಳೇ ಮಾಡಿದಳು."

"ಎಲ್ಲಿ ಇದ್ದಾಳೆ?" ಎಂದವನೇ ಪದ್ಮನಾಭನು ಅಕ್ಕನನ್ನು ಕಾಣುವದಕ್ಕಾಗಿ ಒಳಗೆ ಹೋದನು. ನಿರಮುಕ್ಕನು ಅಡಕಲ ಕೋಣೆಯಲ್ಲಿ ಬಗೆಬಗೆಯ ಧಾನ್ಯಗಳು ಒಂದಕ್ಕೊಂದು ಕೂಡಿ ನೆಲದಮೇಲೆಲ್ಲ ಬಿದ್ದು ಕೆಟ್ಟುಹೋಗುತ್ತಿದ್ದವನ್ನು ಬಳಿಬಳಿದು ಬುಟ್ಟಿಗಳಲ್ಲಿ ತುಂಬಿಡುತ್ತಿದ್ದಳು.

"ನಿರಮುಕ್ಕಾ, ಯಾವಾಗ ಬಂದೆ? ಬರುವದಾದರೆ ಪತ್ರವನ್ನಾದರೂ ಹಾಕಿ ಬರಬೇಕಾಗಿತ್ತು."

"ಈಗ ಬಂದಿರುವೆನಲ್ಲ!" ಎಂದು ನಿರಮಕ್ಕನು ತಮ್ಮನ ಮುಖ ವನ್ನು ನೋಡಿ ಸಂತೋಷದಿಂದ ನಕ್ಕಳು.

"ಇದೇನು ಕಿತ್ತಿ ಕಿತ್ತಿ ಹಾಕುತ್ತಿರುವಿ? ಪ್ರವಾಸದಿಂದ ದಣಿದು ಬಂದಾಕೆ ಸುಮ್ಮನೆ ಕೂತುಕೊಳ್ಳಬಾರದೆ?"

"ಪದ್ಮನಾಭ, ಮನೆಯೊನ್ನುವದು ನೋಡುವ ಹಾಗಿತ್ತೆ? ತಿಪ್ಪೆ! ಇಂಥ ತಿಪ್ಪೆಯಂಥ ಸ್ಥಳದಲ್ಲಿ ನನ್ನಿಂದ ಸರ್ವಥಾ ಕೂಡುವದಾಗದು."

"ಅಹುದು ನೋಡು ನಿರಮಕ್ಕಾ, ಹೊರಗಿಂದ ಬಂದಕೂಡಲೆ ನಡುಮನೆ ಪಡಸಾಲೆಗಳ ಸ್ವಚ್ಛತೆಯನ್ನೂ ಅಲ್ಲಿ ವ್ಯವಸ್ಥೆಯಿಂದ ಇರಿಸಿದ ವಸ್ತುಗಳನ್ನೂ ನೋಡಿದ ಕೂಡಲೆ ಮತ್ತೊಬ್ಬರಾರದೋ ಮನೆಗೆ ಬಂದಂತೆ ನನಗೆ ಭಾಸವಾಯಿತು. ಮಲ್ಲ....ಮಗನಿಗೇನು ಬೇನೆ? ನೀನು ಇಂದು ಉಡುಗಿ ಸ್ವಚ್ಛ ಮಾಡಿದಂತೆ, ಮಾಡಬಾರದೇಕೆ? ನಾಳಿಗೆ ಅವನ ಟೊಂಕವನ್ನೇ ಮುರಿಯುತ್ತೇನೆ" ಎಂದು ಪದ್ಮನಾಭನಂದನು.

"ಆಳುಮಗನ ಕಡೆಗೇನು ಇದೆ? ನಿಂತು ಕೆಲಸ ಮಾಡಿಸಿಕೊಳ್ಳ ಬೇಕು. ಬಂಡಿಯನ್ನು ಹೊಡೆಯುವವನು ತೂಕಡಿಸಿದರೆ ಎತ್ತುಗಳು ಅಲ್ಲಿಯೇ ನಿಲ್ಲುವವು."

ಸ್ನಾನವಾದ ಬಳಿಕ ಪದ್ಮನಾಭರಾಯನು ಊಟಕ್ಕೆ ಕುಳಿತನು. ಬೇಳೆ ಚನ್ನಾಗಿ ಬೇಯಿದೆ ಇದ್ದುದರಿಂದ ಸಾರು ತವ್ವಿಗಳು ಕೂಡಿಯೇ ಕೆಟ್ಟು ಹೋಗಿದ್ದವು. ಹಿಟ್ಟು ಸಾಣಿಸಿದ್ದಿಲ್ಲವಾದ್ದರಿಂದ ರೊಟ್ಟಿಯಾದರೂ ಚನ್ನಾಗಿ ಆಗಿದ್ದಿಲ್ಲ.

"ಬಾಳವ್ವಾ, ಏನು ಅಡಿಗೇ ಮಾಡಿರುವೆ! ಒಂದಾದರೂ ಪದಾರ್ಥವು ಬಾಯಿಯಲ್ಲಿ ಹಾಕಿಕೊಳ್ಳುವಂತೆ ಇದೆಯೇ?" ಎಂದು ವಕೀಲರು ಕೇಳಿದರು.

"ಬಂದಹಾಗೆ ಮಾಡುತ್ತೇನೆ. ಮುಂದೀಮನೆಯಲ್ಲಿ ಯಾರೇನು ಬೊಟ್ಟು ಮುರಿದುಹಾಕಿ ರುಚಿಕರವಾದ ಅಡಿಗೆ ಮಾಡುತ್ತಾರೆಯೊ? ದಿನಾಲು ಹೀಗೆ ಅನ್ನಿಸಿಕೊಂಡು ನಾನು ನಿಮ್ಮ ಮನೆಯಲ್ಲಿ ಹೇಗೆ ಇರಬೇಕು ಹೇಳಿರಿ."

ಪದ್ಮನಾಭರಾಯನಿಗೆ ಅಡಿಗೆಯವಳ ಮಾತು ಕೇಳಿ ಬಳಿತಾಗಿ ಕೋಪ

ಬಂದಿತು. ಆದರೆ ನಿರ್ಮಲಾಬಾಯಿಯು "ಅಹುದು ಬಾಳವ್ವಾ, ನಿನ್ನ ಕಡೆಗೆ ಏನಿದೆ? ಬಂದಹಾಗೆಯೇ ಅಡಿಗೆ ಮಾಡುವದು ಸರಿ. ಇಲ್ಲದ ಜಾಣತನವನ್ನು ಎಲ್ಲಿಂದ ತರಬೇಕು? ಪದ್ಮನಾಭ, ನಾಳೆನಿಂದ ನಾನೂ ಅಡಿಗೆಗೆ ನೆರವಾಗುವೆನು" ಎಂದು ಮಾತಾಡಿ ಆಗಿನ ಪ್ರಸಂಗವನ್ನು ನೀಗಿಸಿಕೊಂಡುಹೋದಳು.

ಯಮುನಾಬಾಯಿಯು ಒಂದು ತಾಟು ತಂದು ರಂಗನ ಪಥ್ಯಕ್ಕಾಗಿ ಬಾಳವ್ವಗೆ ಬಡಿಸಹೇಳಿದಳು. ನಿರ್ಮಲಾಬಾಯಿಯು ಅವರ ಉದ್ಯೋಗವನ್ನು ತಡೆದು, "ಯಮುನಾಬಾಯಿ, ರಂಗನಿಗೆ ಈಗಲೇ ಪಥ್ಯ ಬೇಡ. ಹುಡುಗನ ಹೊಟ್ಟೆ ತುಸು ಹಸಿಯಲಿ. ಹಿಂದಿನಿಂದ ನಾನೇ ಅವನಿಗೆ ಬೇರೆ ಪಥ್ಯವನ್ನು ಮಾಡಿ ಹಾಕುವೆನು" ಎಂದು ಹೇಳಿದಳು.

ಸಣ್ಣಕ್ಕಿಯನ್ನು ಗಿಳಲಿನಲ್ಲಿ ಹಣ್ಣಾಗಿ ಬೇಯಿಸಿ ರುಚಿಕರವಾದ ಮೆಣಸಿನ ಸಾರು ಮಾಡಿ, ನಿರ್ಮಲಾಬಾಯಿಯು ರಂಗನನ್ನು ಎಬ್ಬಿಸಿ ಅವನ ಬಾಯಿಯನ್ನು ಸ್ವಚ್ಛವಾಗಿ ತೊಳೆದು ಪಥ್ಯಕ್ಕೆ ಕೂಡಿಸಿದಳು. ಆ ಸಾರು ಅನ್ನವನ್ನು ಅಲ್ಲದ ಚಟ್ಟಣಿಯನ್ನು ಬಾಡಿಸಿಕೊಳ್ಳುತ್ತ ರಂಗನು ಸಂತೋಷದಿಂದ ಕುಳಿತು ಹೋದಷ್ಟು ತಿಂದನು. "ಅತ್ಯಾ, ಜ್ವರ ಹೇಗೇ ಇರಲಿ, ಇಂದಿನ ದಿವಸ ನನ್ನ ಜೀವಕ್ಕೆ ಎಷ್ಟೋ ಸೊಗಸಾಗಿದೆ. ಆ ಕತ್ತಲೆಯ ಕೋಣೆ, ಅಲ್ಲಿಯ ಕಸ, ಬಾಳವ್ವನ ಅನ್ನ ಮುಂತಾದವುಗಳಿಗಾಗಿ ಮನಸ್ಸಿಗೆ ಹೇಸಿಕೆ ಬರುತ್ತಿತ್ತು. ಇನ್ನು ದಿನಾ ನೀನೇ ಪಥ್ಯ ಮಾಡಿ ಹಾಕಬಾರದೆ?" ಎಂದು ರಂಗನು ಕೇಳಿದನು.

"ಯಾರು ಬೇಡೆನ್ನುವರು? ನಾನು ಬಂದದ್ದೇ ನಿನ್ನ ಸಲುವಾಗಿ," ಎಂದು ನಿರ್ಮಲಾಬಾಯಿಯು ಪ್ರೇಮದಿಂದ ನುಡಿದು "ಲಲಿತಾ, ಆ ಪಂಚೆಯನ್ನು ತಂದುಕೊಡು, ರಂಗಣ್ಣನು ಕೈ ಒರಿಸಿಕೊಳ್ಳಲಿ" ಎಂದು ಆಜ್ಞಾಪಿಸಿದಳು. ಲಲಿತಾಗೌರಿಯು ಉಣ್ಣೆಯ ಎಳೆಯಿಂದ ಕಾಲುಚೀಲವನ್ನು ಹೆಣೆಯುತ್ತ ಕುಳಿತವಳು ಚಟ್ಟನೆ ಎದ್ದು ರಂಗನಿಗೆ ಪಂಚೆಯನ್ನು ತಂದು ಕೊಟ್ಟಳು.

"ಎಷ್ಟೆತ್ತರವಾಗಿದ್ದಾಳೆ ಲಲಿತಾ!" ಎಂದು ರಂಗನು ಕೈ ಒರಸಿಕೊಂಡು ದಿಂಬಕ್ಕೆ ಆತುಕೊಂಡು ಕುಳಿತು ಉದ್ಗಾರ ತೆಗೆದನು.

" ಅವಳಿಗೆ ವರ್ಷಗಳೇನು ಕಡಿಮೆಯಾಗಿವೆಯೋ? ಹನ್ನೆರಡು ವರ್ಷ ಮೊನ್ನಿನ ವೈಶಾಖಕ್ಕೆ ತುಂಬಿದವು. ಎತ್ತರವಾಗದೇನು ಮಾಡುವಳು?" ಎಂದು ನಿರ್ಮಲಾಬಾಯಿಯು ಮಗಳ ಸುಂದರವಾದ ಮುಖವನ್ನು ನೋಡಿ ಸಂತೋಷದಿಂದ ನಕ್ಕು ನುಡಿದಳು.

ಲಲಿತೆಯು ಈ ಮಾತು ಕೇಳಿ ತುಸು ಮಂದಹಾಸಗೈದರೂ ಲಜ್ಜೆಯಿಂದ ಅವಳ ಗೌರವರ್ಣದ ಮುಖವು ಕೆಂಪಗಾಯಿತು. ಅಂಥ ಚಿಕ್ಕ ಬಾಲಿಕೆಗೆ ನಾಚಿಕೆಯೇತರದು? ಸ್ತ್ರೀಜಾತಿ! ಮತ್ತಿನ್ನೇನು?

" ಸಾಲೆಗೆ ಹೋಗುತ್ತಾಳೇನು ಈಕೆ, ಅತ್ತ್ಯಾ?" ಎಂದು ರಂಗನು ಮಾತಾಡಲು ತ್ರಾಣಬಂದವನಾಗಿ ಕೇಳಿದನು.

" ಹೋಗುತ್ತಾಳೆ. ಮೊನ್ನೆ ನಾಲ್ಕನೆಯ ಇಯತ್ತೆಯಲ್ಲಿ ಪಾಸಾಗಿರುವಳು."

" ಲಲಿತಾ, ನಿಮ್ಮ ಸಾಲೆಯಲ್ಲಿ ಹಾಡು ಕಲಿಸುತ್ತಾರೇನು?" ಎಂದು ರಂಗನು ನಗಲಿಕ್ಕೆ ಬಂದಷ್ಟು ನಕ್ಕು ಕೇಳಿದನು.

" ಸಾಲೆಯಲ್ಲಿ ಕಲಿಸುವದು ಕವಿತೆಯೇ. ಮನೆಯಲ್ಲಿ ನಮ್ಮ ಅತ್ತಿಗೆ ರಮಾಬಾಯಿಯ ಕೈಯಿಂದ ಕೆಲವು ಹಾಡು ಹೇಳಿಸಿಕೊಂಡಿದ್ದೇನೆ."

" ರಂಗಾ, ಇವಳು ಸ್ಥಾಲೀಪಾಕದ ಹಾಡು ಚನ್ನಾಗಿ ಹಾಡುತ್ತಾಳೆ. ಅನ್ನು ಲಲಿತಕ್ಕಾ." ಎಂದು ಲಲಿತೆಯ ತಾಯಿಯು ಹೇಳಿದಳು.

ಲಲಿತಾಗೌರಿಯು ಅತ್ತಿತ್ತ ತುಸು ನಾಚಿದ ಹಾಗೆ ಮಾಡಿ, ಕಡೆಗೆ ತಾಯಿಯ ಆಗ್ರಹಕ್ಕಾಗಿ ಹಾಡಿದಳು. ಹೆಣ್ಣುಮಕ್ಕಳ ಸ್ವರವೇ ಸ್ವಭಾವತಃ ಮಧುರವಾದದ್ದು. ಅದರಲ್ಲಿ ಲಲಿತೆಯು ಕೊಂಚ ಪರಿಶ್ರಮಮಾಡಿ ಕಲಿತಿದ್ದಳಾದ್ದರಿಂದ ಅವಳು ಹಾಡಿದಳೆನ್ನುವದಕ್ಕಿಂತ ಗಾನ ಮಾಡಿದಳೇ ಎಂದು ಹೇಳಬಹುದಾಗಿತ್ತು. ರಂಗನು ತನ್ನ ಬೇನೆಯನ್ನು ಮರೆತು ಉತ್ಸುಕನಾಗಿ ಕೇಳುತ್ತಿದ್ದನು. ಅವನು ಮಧ್ಯದಲ್ಲಿಯೇ ಲಲಿತೆಯನ್ನು ತಡೆದು "ಕೇಳವ್ವಾ ಅತ್ತ್ಯಾ! ದ್ರೋಪತಿಯು ಅಂತೆ!" ಎಂದು ನುಡಿದು ನಕ್ಕನು.

" ಮತ್ತಿನ್ನು ಹೇಗೆ ಅನ್ನಬೇಕು?" ಎಂದು ಲಲಿತೆಯು ತನ್ನ ಸುಲಲಿತವಾದ ಮುಖದಲ್ಲಿ ಎಳೆನಗೆಯನ್ನು ತಳೆದು ಕೇಳಿದಳು.

" ದ್ರೌಪದಿಯು" ಎಂದು ಹಾಡಿದಂತೆ ಮಾಡಿ ರಂಗನು ಹೇಳಿದನು.

ಮರುದಿವಸ ಮುಂಜಾನೆ ಆರು ಗಂಟೆಯ ಸಮಯಕ್ಕೆ ನಿರ್ಮಲಾಬಾಯಿಯು ಪದ್ಮನಾಭರಾಯನನ್ನು ಮಲಗಿದವನನ್ನು ಎಬ್ಬಿಸಿದಳು. "ಅಕ್ಕಾ, ಸಕ್ಕರೆಯ ನಿದ್ದೆಯ ಹೊತ್ತಿನಲ್ಲಿ ನಿನ್ನದೇನು ಕಾಟ ಮತ್ತೆ!" ಎಂದು ತಮ್ಮನು ಮುಸುಕಿನಲ್ಲಿ ಕೂಗಿ ನುಡಿದನು. "ಏಳಬಾರದೆ! ರಾತ್ರಿಯಲ್ಲಿ ನೀನು ಜಾಗರಣೆಯನ್ನು ಬೇರೆ ಮಾಡಿಲ್ಲವಷ್ಟೆ?" ಎಂದು ಅಕ್ಕನು ಸಿಟ್ಟು ಮಾಡಿದ್ದಕ್ಕೆ ವಕೀಲರು ಅನಿವಾರ್ಯಕ್ಕಾಗಿ ಎದ್ದು ಹೊರಗೆ ಬಂದರು.

ಪದ್ಮನಾಭರಾಯನು ಎದ್ದು ನೋಡುತ್ತಾನೆ, ಮನೆ ಉಡುಗಿ ಕನ್ನಡಿಯಾಗಿದೆ. ರಂದೆಯು ಎಲ್ಲೆಲ್ಲಿಯೂ ಇಲ್ಲ. ಅದನ್ನು ನೋಡಿ ರಾಯರ ಮನಸ್ಸಿಗೆ ಉತ್ಸಾಹ ಬಂದಂತಾಗಿ ನಿದ್ರೆಯ ಜಾಡ್ಯವೆಲ್ಲ ಹೊರಟುಹೋಯಿತು. ಬಹಿರ್ದೆಶಕ್ಕೆ ಹೋಗಿಬರುವಾಗ ನೋಡುತ್ತಾರೆ, ಮನೆಯ ಸುತ್ತಲಿರುವ ಹೂದೋಟದ ಭಾಗವೆಲ್ಲ ಸ್ವಚ್ಛವಾಗಿ ಹೋಗಿತ್ತು. ಪದ್ಮನಾಭರಾಯನು ಮುಖ ತೊಳೆದುಕೊಳ್ಳಲಿಕ್ಕೆ ಬಚ್ಚಲಕ್ಕೆ ಬರಲು ಅಲ್ಲಿ ಸ್ನಾನದ ಸಿದ್ಧತೆಯೇ ಆಗಿತ್ತು. ಬಚ್ಚಲಮನೆಯು ಕೂಡ ಲಕಲಕನೆ ಹೊಳೆಯುತ್ತಿತ್ತು. ನಿತ್ಯದಂತೆ ಅಲ್ಲಿ ಮುಸುರೆಯ ಪಾತ್ರೆಗಳನ್ನು ತೊಳೆಯಲು ಇಟ್ಟಿದ್ದಿಲ್ಲ. ರಾತ್ರಿಯಲ್ಲಿ ಉಂಡು ಕೈದೊಳೆದ ಅಗಳುಗಳಿದ್ದಿಲ್ಲ. ನೀರು ತೋಡಿದ ಗಂಗಾಳವು ಬಂಗಾರದಂತೆ ಹೊಳೆಯುತ್ತಿತ್ತು. ಎಣ್ಣೆಯ ಬಟ್ಟಲು ಸಾಬೂನುಗಳು ಅಲ್ಲಿಯೇ ಸಿದ್ಧ. ಸ್ನಾನ ಮಾಡುತ್ತ ಪದ್ಮನಾಭನು "ಅಕ್ಕಾ, ನನ್ನ ಬಚ್ಚಲದೊಳಗಿಂದ ಹೊರಗಿರುವ ಕುಣಿಯಲ್ಲಿ ಪಾಚಿಪಲ್ಲೆ ಇತ್ತು, ಅದನ್ನಾರು ಕಿತ್ತುಹಾಕಿದರು?" ಎಂದು ಕೇಳಿದನು.

"ಬುದ್ಧಿವಂತನಿದ್ದಿ, ಮನೆಯ ಸಮೀಪದಲ್ಲಿಯೇ ಕೊಳಚೆ ನೀರಿನ ಕುಂಡವಿರಬೇಕೆ? ಮೂರು ಕಾಸಿನ ಪಲ್ಲೆಯಾಗಲಿಕ್ಕಿಲ್ಲ, ಅದಕ್ಕಾಗಿ ಮನೆ ತುಂಬ ಕುದುರೇನೊಣದ ಹುಳಗಳ ಉಪದ್ರವವೆಷ್ಟು? ನಿನ್ನೆ ಮಧ್ಯಾಹ್ನದಿಂದ ಎರಡು ಆಳು ಹಚ್ಚಿ ನೀರಿನ ಕುಣಿಗಳನ್ನೂ, ಕಸದ ರಾಶಿಗಳನ್ನೂ ಹಾರಾಡುತ್ತಿರುವ ಎಂಜಲೆಲೆಗಳನ್ನೂ ತೆಗೆಸಿ ಹಾಕಿ ಉಡುಗಿಸಿಬಿಟ್ಟಿದ್ದೇನೆ" ಎಂದು ನಿರ್ಮಲಾಬಾಯಿಯು ನುಡಿದಳು.

"ನಮ್ಮ ಯಜಮಾನರ (ಹೆಂಡತಿಯ) ಕೆಲಸವಿದು! ಹೇಳಿ ಹೇಳಿ ಬೇಸತ್ತು ಹೋದೆನು!"

"ಅಶಕ್ತಳವಳು, ಏನು ಮಾಡಬಲ್ಲಳು? ನಿನಗೇಕೆ ತಿಳಿಯಬಾರದು?" ಎಂದು ಅಕ್ಕನು ಯಮುನಾಬಾಯಿಯ ಪಕ್ಷಪಾತವನ್ನು ಕಟ್ಟಿ ಮಾತಾಡಿದಳು.

"ಕೇಳಿರಿ, ಅತ್ತಿಗೆಯವರೆ, ಹೊಲೆಯರಂತೆ ನಾನಿನ್ನು ತಿಪ್ಪೇ ಉಡುಗುವದೊಂದು ಮಾತ್ರ ಉಳಿದಿದೆ!" ಎಂದು ಯಮುನಾಬಾಯಿಯು ಎರಡು ದಿನ ಹಣಿಗೆ ಮುಟ್ಟದಿರುವ ತನ್ನ ತಲೆಯನ್ನು ಉಗುರಿಸಿಕೊಳ್ಳುತ್ತ ಗಂಡನ ಮೇಲೆ ಸಿಟ್ಟಾಗಿ ನುಡಿದಳು.

ಪದ್ಮನಾಭರಾಯನು ಸ್ನಾನ ತೀರಿಸಿಕೊಂಡು ನಾಮ ಮುದ್ರೆಗಳನ್ನು ಧರಿಸಿ ಅರ್ಘ್ಯಪ್ರದಾನವನ್ನು ಮಾಡಿ ನಡುಮನೆಗೆ ಬಂದನು. ಅಲ್ಲಿ ಲಲಿತೆಯು ತನ್ನ ಸೋದರಮಾವನಿಗಾಗಿ ಒಂದು ಮಣೆ ಹಾಕಿಟ್ಟು ಎಲೆಯಲ್ಲಿ ಬಿಸಿಬಿಸಿಯಾದ ಸಜ್ಜಿಗೆಯನ್ನು ಬಡಿಸಿದಳು. ವರ್ತುಲಾಕಾರವಾಗಿದ್ದ ಚಿತ್ರಮಯವಾದ ರಂಗವಲ್ಲಿಯ ಮಧ್ಯದಲ್ಲಿ ಚಹತುಂಬಿದ ಚಿನೀ ಪಾತ್ರೆಯು ಮೆರೆಯುತ್ತಿತ್ತು. ಎಲ್ಲಿಯೋ ಮೂಲೆಗೆ ಬಿದ್ದು ಹೋಗಿರುವ ಎರಡು ಚೀನೀ ಹೂಜಿಗಳನ್ನು ಬೆಳಗಿ ಅವುಗಳಲ್ಲಿ ಹೂವಿನ ಟೊಂಗೆಗಳನ್ನೂ ಪಲ್ಲವಗಳನ್ನೂ ಇರಿಸಿ ಆ ಹೂಜಿಗಳೆರಡನ್ನೂ ರಂಗವಲ್ಲಿಯ ವರ್ತುಲದ ಎರಡು ಪಾರ್ಶ್ವಗಳಲ್ಲಿ ಒಳ್ಳೇ ಚಿತ್ತವೇಧಕವಾಗಿ ಕಾಣುವಂತೆ ಲಲಿತೆಯು ಇರಿಸಿದ್ದಳು.

"ಅಬ್ಬಬಬ! ಇದೇನು ಸಾಹೇಬರ ಮನೆಯಾಯಿತು ಬಿಡು ಲಲಿತಾ!" ಎಂದು ಪದ್ಮನಾಭರಾಯನು ಸಂತೋಷಭರಿತನಾಗಿ ಉಪಹಾರಕ್ಕೆ ಕುಳಿತನು. ಇದೆಲ್ಲ ಸಮಾರಂಭವನ್ನು ರಂಗನು ತನ್ನ ಕೋಣೆಯಲ್ಲಿ ಹಾಸಿಗೆಯ ಮೇಲೆ ಕುಳಿತು ನೋಡುತ್ತಿದ್ದನು. ಅವನಿಗೂ ಉತ್ಸಾಹ ಬಂದಂತಾಗಿ "ಅಪ್ಪಾ, ನಾನೂ ಹೊರಗೆ ಬಂದು ಚಹ ತಕ್ಕೊಳ್ಳಲೇನು?" ಎಂದು ತಂದೆಯನ್ನು ಕೇಳಿದನು.

"ಅವಶ್ಯ ಬಾ. ಅಕ್ಕಾ, ನೀನೂ ಲಲಿತೆಯೂ ಕೂಡಿ ಅವನನ್ನು ಕೈಹಿಡಿದು ಕರಕೊಂಡು ಬನ್ನಿರಿ." ಎಂದು ಪದ್ಮನಾಭರಾಯನು ಹೇಳಿದನು.

ಏಳು ಬಡಿಯುವದರೊಳಗಾಗಿಯೇ ಪದ್ಮನಾಭರಾಯನು ತನ್ನ ಕಚೇರಿಯ ಕೋಣೆಗೆ ಬಂದನು. (ನಿತ್ಯದಲ್ಲಿ ಅವನು ಆ ಕೋಣೆಗೆ ಒಂಬತ್ತು

ಗಂಟೆಗೆ ಬರುತ್ತಿದ್ದನು.) ಕಾಳಪ್ಪ ಕಾರಕೂನನು ಆ ದಿವಸ ನಡೆಯುವ ಮುಕದ್ದಮೆಯ [ಪ್ರಕರಣಗಳ] ಕಾಗದಗಳನ್ನು ಒಂದು ಪುಷ್ಟಿಪತ್ರದಲ್ಲಿ ನಿನ್ನೆಯೇ ಹಾಕಿಟ್ಟು ಹೋಗಿದ್ದನು. ರಾಯರು ಆ ಪ್ರಕರಣಗಳನ್ನೋದಿ ಮನನ ಮಾಡಿಕೊಂಡು ಸಮಾಧಾನವಾದ ಮನಸ್ಸುಳ್ಳವರಾದರು. ಪಕ್ಷ ಕಾರರು ತಮ್ಮ ಬರುವ ಸಮಯಕ್ಕೆ ಬಂದು ವಕೀಲರು ಎದ್ದಿರುವದನ್ನು ಕಂಡು " ಇಂದೇನು ನಮ್ಮ ಅದೃಷ್ಟವು ಚನ್ನಾಗಿಯೇ ಇರುವದೆನ್ನಬೇಕು. ವಕೀಲರು ಎದ್ದು ಸಿದ್ಧರಾಗಿ ಕುಳಿತಿದ್ದಾರೆ " ಎಂದು ಸಂತೋಷದಿಂದ ಅವರಿಗೆ ಪ್ರಣಾಮಮಾಡಿ ಕುಳಿತುಕೊಂಡರು. " ಅಂದರೆ! ಇನಾಮುಪತ್ರ ಬರಿಸಿಕೊಂಡ ಬಳಿಕ ಮಲಗಿಕೊಂಡರೆ ಹೇಗಾದೀತು? ಇನ್ನೂರು ರೂಪಾಯಿ ಸಿದ್ಧಮಾಡಿರುವಿರಾ ? ಇಂದು ತೀರ್ಪು ನಿಮ್ಮಂತಯೇ ಆಗುವದು " ಎಂದು ವಕೀಲರು ಪ್ರಸನ್ನ ಮನಸ್ಸಿನವರಾಗಿ ಹೇಳಿದರು.

ಅಂದು ಮಧ್ಯಾಹ್ನದ ಭೋಜನವು ಸರಿಯಾಗಿ ಹತ್ತು ಘಂಟೆಗೆ ಸಿದ್ಧವಾಗಿತ್ತು. ವ್ಯವಸ್ಥೆಯಲ್ಲಿ ಎಲ್ಲೆಲ್ಲಿಯೂ ಬಿಟ್ಟಬೇಸರಿಕೆ ಕಾಣಲಿಲ್ಲ. ನಿರ್ಮಲವಾಗಿ ಉಡುಗಿದ ಭೋಜನ ಶಾಲೆ, ಕನ್ನಡಿಯಂತೆ ಹೊಳೆಯುತ್ತಿರುವ ಹರಿವಾಣ ಬಟ್ಟಲುಗಳು; ಓರಣವಾಗಿ ಬಡಿಸಿದ ಪಲ್ಲೆ ಚಟ್ನಿ ಉಪ್ಪಿನಕಾಯಿಗಳು; ಘಮಘಮಿಸುವ ಶುಭ್ರವಾದ ಅನ್ನದ ಮೇಲೆ ಸುವರ್ಣ ರಸದಂತೆ ಆಲ್ಹಾದಕರವಾದ ತುಪ್ಪವು! ಈ ಪರಿಷ್ಕಾರವನ್ನೆಲ್ಲ ಕಂಡು ಪದ್ಮನಾಭರಾಯನ ಮನಸ್ಸಿಗೆ ಒಂದು ಪ್ರಕಾರದ ಉತ್ಸಾಹ ಬಂದಂತಾಗಿ ಅವನೊಳ್ಳೇ ಹುರುಪಿನಿಂದ ಭೋಜನಕ್ಕೆ ಪ್ರಾರಂಭಮಾಡಿದನು. ಅಡಿಗೆಯವಳು ಮಾಡತಕ್ಕ ಕೆಲಸದ ಅರ್ಥವನ್ನು ನಿರ್ಮಲಾಬಾಯಿಯೇ ಮಾಡಿದ್ದರಿಂದ ಸಿಡಿಸಿಡಿ ಮಾಡಲಿಕ್ಕೆ ಅವಳಿಗೆ ಆಸ್ಪದವಿಲ್ಲದ್ದಕ್ಕಾಗಿ ಅವಳು ವಿನೀತಳಾಗಿ ಮನಮುಟ್ಟಿ ಕೆಲಸ ಮಾಡುತ್ತಿದ್ದಳು.

" ಎಲ್ಲಿಯ ನೀರಿದು ಅಕ್ಕಾ ? " ಎಂದು ಪದ್ಮನಾಭರಾಯನು ಸ್ವಚ್ಛವಾಗಿರುವ ಬೆಳ್ಳಿಯ ಪಂಚಪಾತ್ರದಲ್ಲಿಯ ನಿರ್ಮಲವಾಗಿರುವ ನೀರು ಕುಡಿದು ಕೇಳಿದನು.

" ಅಪ್ಪಾಸಾಹೇಬರ ತೋಟದ ಬಾವಿಯ ನೀರು ಬಹು ಪಾಚಕವಾಗಿರುವವೆಂದು ಎಲ್ಲರೂ ಹೊಗಳುತ್ತಿರುವದರಿಂದ ನಾನೇ ಒಂದು ಕೊಡ ತುಂಬಿ

ಕೊಂಡು ಬಂದೆನು ” ಎಂದು ನಿರ್ಮಲಾಬಾಯಿಯು ಹೇಳಿದಳು.

“ ಯಾಕೆ ಅಕ್ಕಾ, ನಿನಗೆ ದುಡಿಯುವ ಉಬ್ಬು ಹೆಚ್ಚಾಗಿರುವದೇನು? ನಮ್ಮ ಬಾವಿಯು ನೀಚಗಾದರೂ ಏನಾಗಿದೆ ? ”

“ ನಿನ್ನ ಪುಷ್ಪಕರಂಡಕ ಜೀರ್ಣೋದ್ಯಾನದಲ್ಲಿಯ ಕೂಪದಲ್ಲಿ ತೊಪ್ಪಲಗಳ ಗೇಣುದಪ್ಪ ತೆಪ್ಪವು ತೇಲಾಡುತ್ತದೆ. ಸುತ್ತಲಿನ ಗೋಡೆಯೆಲ್ಲ ಬಿದ್ದು ಹೋಗಿದ್ದರಿಂದ ಹೊರಗಿನ ನೀರೆಲ್ಲ ಬಳಿದು ಬಾವಿಗೇ ಬರುತ್ತದೆ. ಸಮೀಪದಲ್ಲಿಯೇ ಇದ್ದ ತೆಗ್ಗಿನಲ್ಲಿ ನಿಂತ ಮಲೆತ ನೀರು ಇಂಗಿ ಬಾವಿಯಲ್ಲಿ ಸೇರಿಕೊಳ್ಳುತ್ತದೆ. ಅಂಥ ಕೆಟ್ಟ ನೀರು ಕುಡಿದೇ ನಮ್ಮ ರಂಗನು ಬೇನೆಯನ್ನು ಕರಕೊಂಡನು.”

“ ವೈದ್ಯಕ ಪಾಠಶಾಲೆಯಲ್ಲಿ ನೀವು ವ್ಯಾಸಂಗ ಮಾಡಿರುವಿರೇನು ಡಾಕ್ಟರ ಅಕ್ಕಾಸಾಹೇಬ ? ” ಎಂದು ತಮ್ಮನು ನಗೆಯಾಡುತ್ತ ಕೇಳಿದನು.

“ ಮೂರ್ಖರಿಗೆ ಕೂಡ ತಿಳಿಯುವಂಥ ಸರ್ವಸಾಧಾರಣವಾದ ಮಾತಿಗೆ ಡಾಕ್ಟರನೇಕೆ ಬೇಕು ಪದ್ಮನಾಭ ? ಮೈಯಲ್ಲಿ ಆಲಸ್ಯವು ಭೇದಿಸಿತೆಂದರೆ ಮನುಷ್ಯನು ಮುಗ್ಗಲಗೇಡಿಯಾಗಿ ಅವನಿಗೆ ಸ್ವಚ್ಛತೆಯು ತಿಳಿಯದಂತಾಗುತ್ತದೆ. ”

ಪದ್ಮನಾಭನು ಸಾರು ಸುರಿದು “ ಕ್ಯಾಬಾತ್ ಹೈ ! ಬಾಳವ್ವಾ ಸಾರು ಚನ್ನಾಗಿ ಮಾಡಿರುವಿ ” ಎಂದು ಅಡಿಗೆಯವಳ ಸ್ತುತಿಮಾಡಿದನು.

“ ನಾನೇನು ಮಾಡಿದ್ದೇನೆ ? ಚಂದಕ್ಕೆ ಒಲೆಯ ಮುಂದೆ ಕುಳಿತದ್ದು ಮಾತ್ರ ಸರಿ, ಮಾಡಿದವರು ನಿರ್ಮಲಾಬಾಯಿಯವರು” ಎಂದು ಬಾಳವ್ವನು ಹೇಳಿದಳು.

“ ಅಕ್ಕಾ, ಎಲ್ಲ ಕೆಲಸಗಳಲ್ಲಿ ನಿನ್ನದೇ ಕೈಯಾಗಿದ್ದರೆ ನಿನಗೆ ಕೈಗಳಾದರೂ ಎಷ್ಟಿರುವವು? ನೀನು ಸಹಸ್ರಭುಜಾದೇವಿಯೆಂದು ತಿಳಿದರೂ ಇಷ್ಟೆಲ್ಲ ಮಾಡಲಿಕ್ಕೆ ಸಮಯವಾದರೂ ದೊರೆತದ್ದು ಹೇಗೆ? ” ಎಂದು ಅಕ್ಕನ ಕಾರ್ಯದಕ್ಷತೆ ಯನ್ನು ಕಂಡು ಬೆರಗಾಗಿ ಪದ್ಮನಾಭರಾಯನು ಕೇಳಿದನು.

“ ಹಾಗೆಯೇ ನೋಡುತ್ತ ಕುಳಿತರೆ ಕೆಲಸವು ಎದೆಯಮೇಲಿರಿಸಿದ ಗುಡ್ಡದಂತೆ ಕಾಣುವದು ಸರಿ. ಆದರೆ ಚಾಣಾಕ್ಷೆಯಿಂದ ಮಾಡುವವರಿಗೆ ಅದರ ಭಾರವೆಷ್ಟುಮಾತ್ರವೂ ತೋರದು. ನೀನೇ ಹೇಳು : ಇಪ್ಪತ್ತು ಮೂವತ್ತು

ಹಾಳೆ ಕಾಗದ ತುಂಬ ವಿಶ್ರಾಂತಿಯಿಲ್ಲದೆ ಹೇಗೆ ಬರೆಯುವಿ ? ಅಕ್ಷರಗಳನ್ನೆಣಿಸುತ್ತ ಬರೆದರೆ ಕೆಲಸವಾಗುವದೇ ? ”

ಈ ಮಾತುಗಳನ್ನು ಯಮುನಾಬಾಯಿಯೂ, ಲಲಿತಾಗೌರಿಯೂ, ಅಡಿಗೆಯವಳೂ ಏಕಚಿತ್ತರಾಗಿ ಬೆರಗಾಗಿ ಕೇಳಿ ನಿರ್ಮಲಾಬಾಯಿಯನ್ನು ಮನಸ್ಸಿನಲ್ಲಿಯೇ ಕೊಂಡಾಡಿದರು. ಆಲಸ್ಯತನವನ್ನೂ ವೈಗಳ್ಳತನವನ್ನೂ ತುಳಿದುಹಾಕಬೇಕೆಂದು ಅವರು ತಮ್ಮತಮ್ಮೊಳಗೆ ನಿಶ್ಚಯಿಸಿಕೊಂಡರು.

ಕಡೆಯ ಅನ್ನವು ಬಡಿಸಿತು. ಯಮುನಾಬಾಯಿಯು ಬೆಳಗಿದ ಪಾತ್ರೆಯಲ್ಲಿರುವ ಕೆನೆಮೊಸರನ್ನು ಲಕಲಕನೆ ಹೊಳೆಯುವ ಸೌಟಿನಲ್ಲಿ ತೆಗೆದುಕೊಂಡು ಗಂಡನಿಗೆ ಬಡಿಸಿದಳು. ಕೆಲಸ ಕಡಿಮೆಯಾಗಿದ್ದರಿಂದ ಅವಳ ಅಶಕ್ತವಾದ ಪ್ರಕೃತಿಯು ಎರಡೇ ದಿವಸಗಳಲ್ಲಿ ಗುಣವನ್ನು ಹೊಂದುತ್ತ ಬಂದಿತ್ತು. ಮನೆಯಲ್ಲಿ ಎತ್ತ ನೋಡಿದತ್ತ ಓರಣ, ಎತ್ತ ನೋಡಿದತ್ತ ಸುವ್ಯವಸ್ಥೆಗಳು ಮೆರೆಯುತ್ತಿರುವದನ್ನು ಕಂಡು ಅವಳ ಮನಸ್ಸಿಗೂ ಉಲ್ಲಾಸವಾಗಿತ್ತು. ಅವಳು ತೀಡಿ ಉಟ್ಟಿರುವ ಒಗೆದ ಸೀರೆಯು ಝಗಝಗಿಸುತ್ತಿತ್ತು. ಚೌರಿ ರಾಗಟೆ ಹೂತುಲಸಿಗಳಿಂದ ಅಲಂಕೃತವಾದ ಅವಳ ಕೇಶಕಲಾಪವು ನುಣುಪಾಗಿ ಹೊಳೆಯುತ್ತಿತ್ತು. ಹರಡಿ ಕಂಕಣಯುಕ್ತವಾದ ಕೈಗಳಿಂದ ಮೊಸರು ಬಡಿಸಲು ಬಂದಿರುವ ಹೆಂಡತಿಯ ಸೊಬಗನ್ನು ಕಂಡು ಪದ್ಮನಾಭರಾಯನು ವಿನೋದದಿಂದ “ ಓಹೋ ! ರಾಣೀಸರಕಾರ, ಇಂದು ನೀವು ಸ್ವರ್ಗಲೋಕದಿಂದ ಇಳಿದುಬಂದಂತೆ ಕಾಣುತ್ತೀರಲ್ಲ ! ” ಎಂದು ನುಡಿದು ನಕ್ಕನು. ಈ ಗೌರವದ ಸತ್ಕಾರವು ಯಮುನಾಬಾಯಿಗೂ ರುಚಿಸಿ ಮಂದಹಾಸವನ್ನು ತಳೆದು ಅಂದದ್ದು :

“ ಮುದುಕರಾದ ಹಾಗೆ ಹುಚ್ಚು ಹೆಚ್ಚಾಯಿತು ! ”

“ ಮನಕ್ಕೆ ಉತ್ಸಾಹವಿಲ್ಲದವರು ಬೇಕಾದರೆ ಮುದುಕರಾಗಲಿ ! ನಾನೇಕೆ ಮುದುಕನು ? ಒಯ್ಯಾರದಿಂದ ನಿಂತವಳಾದ ನೀನಾದರೂ ಮುದುಕಿಯಲ್ಲ ಕಂಡಿಯಾ ! ” ಎಂದು ಪದ್ಮನಾಭರಾಯನು ಉಲ್ಲಾಸದಿಂದ ನಕ್ಕನು.

“ ಪದ್ಮನಾಭ, ನೀನೂ ಮುದುಕನಲ್ಲ ಈಕೆಯೂ ಮುದುಕಿಯಲ್ಲ. ಯಾವ ದೊಡ್ಡ ದಿವಸಗಳಾಗಿವೆಯೆಂದು ನೀವು ಮುದುಕರಾದಿರಿ ? ” ಎಂದು

ನಿರ್ಮಲಾಬಾಯಿಯು ಸಂತೋಷದಿಂದ ನುಡಿದಳು.

ಪದ್ಮನಾಭರಾಯನು ಆ ದಿವಸ ವೇಳೆಗೆ ಸರಿಯಾಗಿ ಕಚೇರಿಗೆ ಹೋದನು. ಅವನ ಪಕ್ಷಕಾರನ ಮುಕದ್ದಮೆಯ ಕೆಲಸವು ಒಳ್ಳೇ ವ್ಯವಸ್ಥಿತ ವಾಗಿ ನಡೆಯಿತು. ವಕೀಲರ ಚಿತ್ತವೃತ್ತಿಯು ಆನಂದವುಳ್ಳದ್ದಾಗಿಯೂ ಉತ್ಸಾಹಪೂರಿತವಾಗಿಯೂ ಇದ್ದದರಿಂದ ಅವರು ವಿರುದ್ಧಪಕ್ಷದ ಸಾಕ್ಷಿ ಗಳನ್ನು ಚಲ್ಲಾಪಿಲ್ಲಿಯಾಗಿ ಮಾಡಿದರು. ತಮ್ಮ ವಾದದ ನಿರೂಪಣವನ್ನು ಅಸ್ಖಲಿತವಾದ ವಾಣಿಯಿಂದ ಸಪ್ರಮಾಣವಾಗಿಯೂ ಹೃದಯಂಗಮ ವಾಗಿಯೂ ಮಾಡುತ್ತಿರುವದನ್ನು ನ್ಯಾಯಾಧೀಶರೂ ವಕೀಲವರ್ಗದವರೂ ತಲ್ಲೀನರಾಗಿ ಕುಳಿತು ಕೇಳಿ "ಸಾಧು ಸಾಧು!" ಎಂದು ಉದ್ಗಾರ ತೆಗೆದರು. ತೀರ್ಪು ಪದ್ಮನಾಭರಾಯನಂತೆ ಆದ್ದರಿಂದ ಆ ದಿವಸ ಊರಲ್ಲೆಲ್ಲ ಅವರ ಖ್ಯಾತಿಯಾಯಿತು.

ತನ್ನ ಸೋದರತ್ತೆಯ ಅಂತಃಕರಣದ ಆರೈಕೆ ಉಪಚಾರಗಳಿಂದಲೂ, ಲಲಿತಾಗೌರಿಯ ಸುಲಲಿತವಾದ ಪದಪದ್ಯ ಹಾಸ್ಯವಿನೋದಗಳಿಂದಲೂ ರಂಗನ ಪ್ರಕೃತಿಯು ದಿನಕ್ಕೊಂದು ಚಂದವಾಗಿ ಸ್ವಸ್ಥವಾಗುತ್ತ ಬಂದಿತು. ಎಂಟು ದಿವಸಗಳಲ್ಲಿ ಅವನು ತನ್ನ ಹಾಸಿಗೆಯನ್ನು ಬಿಟ್ಟಿದ್ದು ಬೇಕಾದಹಾಗೆ ತಿರುಗಾಡಲಾರಂಭಿಸಿದನು. ಒಂದು ದಿವಸ ಅವನು ಮನೆಯ ಸುತ್ತಲಿರುವ ತೋಟದಲ್ಲಿ ಹೋಗಿ ಅನೇಕ ಪ್ರಕಾರದ ಹೂಗಳನ್ನು ತೆಗೆದುಕೊಂಡು ಬಂದು ಅತ್ತೆಯ ಮುಂದೆ ಸುರಿದು "ಅತ್ಯಾ, ಇಕೋ, ಎಷ್ಟು ಹೂಗಳನ್ನು ತಂದಿರು ವೆನು ನೋಡು! ಲಲಿತಾಗೌರಿಗೆ ಇಂದು ಹೂವಿನ ಹೆರಳು ಹಾಕಬಾರದೆ?" ಎಂದು ಹೇಳಿದನು.

ಆ ಹೂಗಳ ಶೋಭೆಯನ್ನು ನೋಡಿ ಲಲಿತಾಗೌರಿಗೆ ಹೆರಳುಹಾಕಿ ಕೊಳ್ಳುವ ಅಪೇಕ್ಷೆಯಾದರೂ ನಾಚಿಕೆಯಿಂದ ಅವಳು ತಲೆಬಾಗಿಸಿ ಮೆಲ್ಲನೆ ನಕ್ಕಳು. ಹೆಣ್ಣುಮಕ್ಕಳು ಉತ್ಸವಪ್ರಿಯರೆಂಬಂತೆ ರಂಗನ ತಾಯಿಯೂ ಅತ್ತೆಯೂ ಕೂಡಿ ಉಬ್ಬಿನಿಂದೆ ಲಲಿತಾಗೌರಿಗೆ ಹೂವಿನ ಹೆರಳು ಹಾಕ ತೊಡಗಿದರು.

ಅವರ ಬಳಿಯಲ್ಲಿಯೇ ಕುಳಿತು ಲಲಿತೆಯ ವೇಣೀಗ್ರಥನ ಸಮಾರಂಭ ವನ್ನು ಕೌತುಕದಿಂದೆ ನೋಡುತ್ತ ಕುಳಿತವನಾದ ರಂಗನು ನಿರ್ಮಲಾಬಾಯಿ

ಯನ್ನು ಕುರಿತು "ಅತ್ತಾ, ನಿನ್ನಲ್ಲಿ ಮಂತ್ರಗಿಂತ್ರವೇನಾದರೂ ಇರುವ ದೇನು ? " ಎಂದು ಕೇಳಿದನು.

" ಅಯ್ಯೆ ! ಅದೇಕೋ ನನ್ನ ಅಪ್ಪಯ್ಯಾ ? " ಎಂದು ಅತ್ತೆಯು ಅಕ್ಕರತೆಯಿಂದ ಕೇಳಿದಳು.

" ನೋಡಿದಿಯಾ : ನಾನು ಬೇನೆಯಿಂದ ಏಳುವವರೊಳಗಾಗಿಯೇ, ಸುರಸ ಕಥೆಗಳಲ್ಲಿಯ ಚಮತ್ಕಾರವಾದ ಸಂಗತಿಗಳಂತೆ, ಅಡವಿಯಾಗಿರುವ ನಮ್ಮ ತೋಟವು ಪ್ರಫುಲ್ಲಿತವಾದ ಉಪವನವಾಗಿದೆ. ಜೊಮುಜೊಮು ಸುರಿಯುತ್ತಿರುವ ನಮ್ಮಾ ಮನೆಯು ಕನ್ನಡಿಯ ಪೆಟ್ಟಿಗೆಯಂತೆ ಮನೋಹರ ವಾಗಿ ಕಾಣುತ್ತದೆ. ನಮ್ಮಾ ಅವ್ವನನ್ನೇ ನೋಡು. ಬೇನೆಹತ್ತಿ ಎಲ್ಲಿ ಸಾಯುತ್ತಾಳೋ ಎಂದು ಮಾಡಿದ್ದೆನು; ಈಗ ನೋಡು ಹೇಗಾಗಿದ್ದಾಳೆ ? ಅತ್ತಾ, ನೀನು ಹೋದಿಯಂದರೆ ಮಾತ್ರ ಮುಂಚಿನ ಅವ್ಯವಸ್ಥೆಯು ಮತ್ತಿಲ್ಲಿ ಮರುಕಳಿಸಿ ಬರುವದೋ ಏನೋ. "

" ರಂಗಯ್ಯಾ, ಚಿಂತೆಮಾಡಬೇಡ. ನನ್ನ ಮಂತ್ರತಂತ್ರಗಳನ್ನೆಲ್ಲ ನಿನ್ನ ಅವ್ವ ಅಪ್ಪಂದಿರಿಗೂ, ಆಳುಹೋಳುಗಳಿಗೂ, ಕೂಡಿಯೇ ಕಲಿಸಿದ್ದೇನೆ" ಎಂದು ನಿರ್ಮಲಾಬಾಯಿಯು, ಹೊಸ ರಕ್ತದಿಂದ ಕಂಗೊಳಿಸುತ್ತಿರುವ ರಂಗನ ಸುಂದರವಾದ ಮುಖವನ್ನು ನೋಡಿ ನುಡಿದಳು.

ನಿರ್ಮಲಾಬಾಯಿಯು ಆಯಾಸ ಬೇಸರಿಕೆಗಳನ್ನು ಲೆಕ್ಕಿಸದೆ ಎಡೆ ಬಿಡದೆ ಕೆಲಸಗಳಲ್ಲಿ ತೊಡಗಿರುವದನ್ನು ಕಂಡು ಅಡಿಗೆಯವಳೂ ಒಕ್ಕಲ ಗಿತ್ತಿಯೂ ಮಲ್ಲನೂ ತೋಟಿಗನೂ ನಾಚಿಕೊಂಡು ತಮತಮಗೆ ಹೊಂದಿದ ಕೆಲಸಗಳನ್ನೂ ಹೊಂದದೆ ಇದ್ದ ಕೆಲಸಗಳನ್ನೂ ಕೂಡಿಯೇ ಮೇಲುಮೇಲಾಡಿ ಮಾಡಲಾರಂಭಿಸಿದರು. ಕೆಲಸಗಳಲ್ಲಿ ವ್ಯೈನುರಿತದ್ದರಿಂದ ಅವರೆಲ್ಲರಿಗೂ ತಮಗೆ ಸಾಕಾಗುವಷ್ಟು ಕೆಲಸವೇ ಇಲ್ಲವೆಂದು ಹೇಳುತ್ತಿದ್ದರು.

ಪದ್ಮನಾಭರಾಯನಲ್ಲಿ ಚಟುವಟಿಕೆ ಹೆಚ್ಚಾಯಿತು. ವಿಲಕ್ಷಣಬುದ್ಧಿ ಶಾಲಿಯಾದ ಆ ವಕೀಲನು ಅನಲಸನಾದದ್ದರಿಂದ ಅವನ ಪ್ರಾಪ್ತಿಯು ಹೆಚ್ಚಾಯಿತು. ಪ್ರಾಪ್ತಿಯು ಹೆಚ್ಚಾದಹಾಗೆ ಅವನ ಉತ್ಸಾಹವೂ ಹೆಚ್ಚಾದ್ದ ರಿಂದ ಕೆಲಸಕ್ಕೆ ಬೇಸರವಿಲ್ಲದಂತಾಯಿತು. ಮನೆಯಲ್ಲಿಯ ಸುವ್ಯವಸ್ಥೆ ಗಾಗಿಯೂ ಅಭಿವೃದ್ಧಿಯನ್ನು ಹೊಂದುತ್ತಿರುವ ಪ್ರಾಪ್ತಿಗಾಗಿಯೂ ಅವನ

ಸಾಂಪತ್ತಿಕಸ್ಥಿತಿಯು ಕಲ್ಪನಾತೀತವಾಗಿ ಬೆಳೆಯಿತು. ಸಂತತಿ ಸಂಪತ್ತು ಆರೋಗ್ಯ ಸೌಕರ್ಯಗಳ ಹೆಚ್ಚಳಗಳ ಮೂಲಕ ಪದ್ಮನಾಭರಾಯನು ಇಹಲೋಕದಲ್ಲಿ ತಾನೋರ್ವನೇ ಸುಖಿಯೆಂದು ತಿಳಿದು ಆನಂದಿತನಾದನು.

ಎರಡೇ ತಿಂಗಳಗಳಾಚೆಗೆ ಪದ್ಮನಾಭನ ಸಂಸಾರವೆಂದರೆ ಹರಿದಷ್ಟೇ ಹಳ್ಳ ನಿಂತಷ್ಟೇ ತೀರ್ಥವೆಂಬದಾಗಿತ್ತು. ಅವನ ಜೀವಕ್ಕೆ ಸೌಖ್ಯವಿದ್ದಿಲ್ಲ. ಹೆಂಡತಿಯ ಜೀವಕ್ಕೂ ಸೌಖ್ಯವಿದ್ದಿಲ್ಲ. ಸಂಸಾರವೆಂಬದು ತಲೆಯ ಮೇಲೆ ಹೊತ್ತಿರುವ ಭಾರವಾದ ಬಂಡೆಯೆಂದು ತಿಳಿದು ಅವನು ಉದಾಸೀನನಾಗಿದ್ದನು. ಅದೆಲ್ಲ ಹೋಗಿ ಈಗ ಆನಂದಮಯವಾದ ಪರಿಸ್ಥಿತಿಯುಂಟಾಗಲಿಕ್ಕೆ ಕಾರಣವೇನು? ಭಗವತ್ಕೃಪೆ ಇದ್ದರೂ ಇರಬಹುದು. ಆದರೆ ದೃಶ್ಯವಾದ ಕಾರಣವು ಸುಕರವಾಗಿಯೂ ಸುಸಾಧ್ಯವಾಗಿಯೂ ಇರುವದೆಂಬದನ್ನು ನಿರ್ಮಲಾಬಾಯಿಯ ಉದಾಹರಣದಿಂದ ಕಲಿತುಕೊಳ್ಳಬಹುದಲ್ಲವೆ?

ತಾನು ಬಂದ ಉದ್ದೇಶವು ಸಫಲವಾಯಿತೆಂದು ಕಂಡು ನಿರ್ಮಲಾಬಾಯಿಯು ಕೃತಾರ್ಥಳಾಗಿ ತನ್ನ ಊರಿಗೆ ಹೊರಟಳು. ಪದ್ಮನಾಭರಾಯನು ಅಕ್ಕನ ಉಪಕಾರಗಳನ್ನು ನೆನೆನೆನೆದು ಕೊಂಡಾಡಿ ಅವಳ ಕಾಲ್ಗೆರಗಿ "ಅಕ್ಕಾ, ಹೋಗಿ ಬಾ, ನಾನೇನು ಕೊಟ್ಟರೂ ನಿನ್ನ ಉಪಕಾರ ತೀರದು" ಎಂದು ಕಣ್ಣಿಗೆ ನೀರು ತಂದು ಹೇಳಿದನು.

"ಪದ್ಮನಾಭ, ಇದರಲ್ಲೇನಿತರ ಉಪಕಾರ? ನನ್ನ ಕರಳಿಗಾಗಿ ನಾನು ಮಾಡಿದೆನು. ಉಪಕಾರ ತೀರಿಸುವದೇ ನಿನ್ನ ಮನಸ್ಸಿನಲ್ಲಿದ್ದರೆ ಲಲಿತಾಗೌರಿಯನ್ನು ರಂಗನಿಗೆ ತೆಗೆದುಕೊಂಡರೆ ನನ್ನ ಮೇಲೆಯೇ ನೀನು ಉಪಕಾರವನ್ನು ಹೊರಿಸಿದಂತಾಗುವದು" ಎಂದು ನಿರ್ಮಲಾಬಾಯಿಯು ಸ್ಮಿತವದನೆಯಾಗಿ ಮಾತಾಡಿದಳು.

ಅಕ್ಕನ ಮನೋಗತವು ಪದ್ಮನಾಭನಿಗಾದರೂ ರುಚಿಸಿತು. ಲಲಿತಾಗೌರಿಯಂಥ ಚಲುವೆಯೂ ಜಾಣೆಯೂ ಕೆಲಸಕ್ಕೆ ಬೇಸರಿಯದವಳೂ ಆದ ಸೊಸೆಯು ಯಾರಿಗೆ ಬೇಡ?

"ಅಕ್ಕಾ, ನಿನ್ನ ಮಾತಿಗೆ ನನ್ನ ಒಪ್ಪಿಗೆಯೇ ಇರುವದು. ಆದರೆ ಲಗ್ನ ಮಾಡಿಕೊಳ್ಳುವವನ ಮನಸ್ಸು!" ಎಂದು ಪದ್ಮನಾಭರಾಯನು ಮುಗನ

ಮುಖವನ್ನು ನೋಡಿ ವಿನೋದದಿಂದ ನುಡಿದನು.

"ಇದರಲ್ಲಿ ಯಾರನ್ನು ಕೇಳುವದೇನು ಉಳಿದಿದೆ? ಲಲಿತೆಯೂ ರಂಗನೂ ಈಗಾಗಲೇ ಮನಸಾ ಮನಸಾ ಗಂಡಹೆಂಡರೇ ಆಗಿರುವರು. ಅವನು ಇವಳಿಗೆ ಹೂವಿನ ಹೆರಳು ಹಾಕಿಸುತ್ತಾನೆ, ಇವಳು ಅವನಿಗೆ ಹೂಮಾಲೆಯನ್ನು ಕಟ್ಟಿ ಅರ್ಪಿಸುತ್ತಾಳೆ. ಇಬ್ಬರೂ ಕೂಡಿ ಹಾಡುತ್ತಾರೆ; ಇಬ್ಬರೂ ಕೂಡಿ ಹಾರ್ಮನಿ (ಹಾರ್ಮೋನಿಯಮ್) ಬಾರಿಸುತ್ತಾರೆ. ಈಗಿನ ಹುಡುಗರ ನಡತೆಯೇ ಚಮತ್ಕಾರವಾದದ್ದು!" ಎಂದು ಯಮುನಾಬಾಯಿಯಾದರೂ ಪರ್ಯಾಯದಿಂದ ತನ್ನ ಒಪ್ಪಿಗೆಯನ್ನಾದರೂ ಸೂಚಿಸಿದಳು.

ಲಲಿತೆಯು ಬಲವತ್ತರವಾದ ನಾಚಿಕೆಯಿಂದ ತಾಯಿಯ ಬೆನ್ನು ಮರೆಯಾಗಿ ನಿಂತುಕೊಂಡು ಮೆಲ್ಲನೆ ರಂಗನ ಮುಖವನ್ನು ನೋಡುತ್ತಿದ್ದಳು. ಯಾಕೆ ನೋಡಿದಳೆಂಬದು ಅವಳಿಗೂ ಚೆನ್ನಾಗಿ ತಿಳಿದಿದ್ದಿಲ್ಲ.

"ಯಮುನಾಬಾಯಿ, ಎಳೆಮಕ್ಕಳಿವರು, ಇವರಿಗೇನು ತಿಳಿಯುತ್ತದೆ? ಸಲಿಗೆಯಿಂದ ಕೂಡಿ ಮಾತಾಡಿದರೆ ನೀನು ಇವರ ಮೇಲೆ ಹಾಡುಕಟ್ಟಿ ಹಾಡಬರಬೇಡ!"

"ಏನಾಯಿತೀಗ? ಅವರು ತಿಳುವಳಿಕೆಯಿಂದಲೇ ಪರಸ್ಪರರೊಡನೆ ಪ್ರೇಮದಿಂದ ನಡೆಕೊಂಡಿದ್ದರೂ ನಮಗೆ ಸಂತೋಷವೇ!" ಎಂದು ಪದ್ಮನಾಭರಾಯನು ನುಡಿದು ಅಕ್ಕನನ್ನೂ ಲಲಿತೆಯನ್ನೂ ರಥದಲ್ಲಿ ಕುಳ್ಳಿರಿಸಿ ಸ್ಟೇಶನಕ್ಕೆ ಕರಕೊಂಡು ಹೋದನು.

# ದೇವರೇ ಪಾರುಮಾಡಿದಿ ಕಂಡಿಯಾ

" Life is as tedious as a twice-told tale "

ಧಾರವಾಡದ ಶಾಖೆಯೊಂದಕ್ಕೆ ಸಪ್ತಾಪುರವೆಂಬ ಹೆಸರು. ಊರ ದೂರಾಗಿ ಕಟ್ಟಿರುವ ಆ ಗ್ರಾಮದ ಮನೆಗಳಲ್ಲಿ ಒಂದು ಮನೆಯು ತುಸು ಹೊರಬೀಸಾಗಿದ್ದು ಅದನ್ನು ವಾಯುಸಂಚಾರಕ್ಕೆ ಅನುಕೂಲವಾಗಿರುವಂತೆ ಕಟ್ಟಿದ್ದರು. ಮನೆಯ ಸುತ್ತಲು ಚಿಕ್ಕದಾಗಿರುವದೊಂದು ಹೂದೋಟವೂ ಇತ್ತು.

ಆ ದಿವಸ ಮನೆಯಲ್ಲಿ ವಿಲಕ್ಷಣವಾದ ಸ್ತಬ್ಧತೆಯು ಕಂಡುಬರುತ್ತಿತ್ತು. ಮನೆಯವರೆಲ್ಲರೂ ತಮ್ಮ ತಮ್ಮ ಕೆಲಸವನ್ನು ಮುಂದಿಟ್ಟುಕೊಂಡಿದ್ದರೂ ಅದನ್ನು ಮಾಡಲರಿಯದೆ ಚಿಂತಾಕ್ರಾಂತರಾಗಿ ಅಲ್ಲಲ್ಲಿ ಕುಳಿತಿದ್ದರು. ತಂದು ಬಂದು ಹಾಕುವವನಾದ ಮನೆಯ ಯಜಮಾನನೇ ವ್ಯಾಧಿಗ್ರಸ್ತನಾಗಿ ಬಿದ್ದಲ್ಲಿಯೇ ಬಿದ್ದುಕೊಂಡಿದ್ದನು. ಎಂಟು ದಿವಸದಿಂದ ಅವನಿಗ ಈ ಕಡೆಯ ಪ್ರಜ್ಞೆಯೇ ಇದ್ದಿಲ್ಲ.

ಚಿಂತೋಪಂತನ ಸೋದರತ್ತೆಯ ಮಗಳಾದ ಅನ್ನಪೂರ್ಣೆಯು ವ್ಯಾಧಿತನಿಗೆ ಶುಶ್ರೂಷೆಮಾಡುವದಕ್ಕಾಗಿ ಬಳಿಯಲ್ಲಿ ಕುಳಿತುಕೊಂಡಿದ್ದಳು. ಅನಾಥ ಬಾಲಿಕಾಶ್ರಮದಲ್ಲಿದ್ದುಕೊಂಡು ಅನ್ನಪೂರ್ಣೆಯು ವ್ಯಾಧಿತರಿಗೆ ಆರೈಕೆಮಾಡುವ ವಿದ್ಯೆಯನ್ನು ಕಲಿತಿದ್ದಳು. ಏಕಾಕಿನಿಯಾಗಿ ಬಹಳೊತ್ತು ಕಾದು ಕುಳಿತ ಶ್ರಮಕ್ಕಾಗಿಯೂ, ವ್ಯಾಧಿತನ ದುರವಸ್ಥೆಯನ್ನು ಕಂಡು ಕೊಂಡದ್ದಕ್ಕಾಗಿಯೂ ಅನ್ನಪೂರ್ಣೆಯು ಉದ್ವಿಗ್ನಳಾಗಿದ್ದಳು.

ಆಕಸ್ಮಾತ್ತಾಗಿ ಚಿಂತೋಪಂತನು ತನ್ನ ವಿಶಾಲವಾದ ಕಣ್ತೆರೆದು ನೋಡಿದನು. ಕೋಣೆಯಲ್ಲಿ ಮೃದುಲಾಂಗಿಯಾದ ಅನ್ನಪೂರ್ಣೆಯು ತಕ್ಕ ಮಟ್ಟಿಗೆ ಸುಂದರವಾಗಿರುವ ತನ್ನ ಮೊಗದಲ್ಲಿ ಚಿಂತೆಯನ್ನಾಂತು ಗಲ್ಲದ ಮೇಲೆ ಕೈಯಿಟ್ಟುಕೊಂಡು ಕುಳಿತಿದ್ದಳು

" ಹೊತ್ತಾದಂತೆ ಕಾಣುತ್ತದೆ! ಹತ್ತರ ಗಾಡಿಗೆ ನಾನು ಹುಬ್ಬಳ್ಳಿಗೆ ಹೋಗಲೇಬೇಕು " ಎಂದು ಬಡಬಡಿಸಿ ಚಿಂತೋಪಂತನು ಎದ್ದುಕೂಡಲಿಕ್ಕೆ

ಹೋದನು. ಚಾಚಿದ ಕೈ ಎಳಕೊಳ್ಳಲಿಕ್ಕೆ ಅಸಮರ್ಥನಾಗಿರುವನಾದ ಆ ಬೇನೆಯುವನು ಏಳಲರಿಯದೆ ನರಳುತ್ತ ಅಂದದ್ದು : "ಯಾರಲ್ಲಿ? ನನ್ನನ್ನು ಎಬ್ಬಿಸಬಾರದೆ? ಹತ್ತರ ಗಾಡಿ ತಪ್ಪಿದರೆ ಕಚೇರಿಯ ಕೆಲಸವೆಲ್ಲ ಕೆಟ್ಟು ಹೋಗುವದು. ಕಲ್ಲನಗೌಡರು ರಜೆಯ ಮೇಲೆ ಹೋಗಿದ್ದಾರೆ. ಉಳಿದವರು ಸಂಬಳ ತೆಗೆದುಕೊಳ್ಳಲಿಕ್ಕೆ ಮಾತ್ರ ಇದ್ದಾರೆ. ನಾನು ಹೋಗಲೇಬೇಕು."

ಅನ್ನಪೂರ್ಣೆಯು ಮೆಲ್ಲನೆದ್ದು "ಬೇನೆ ಬಂದಾಗ ಕಚೇರಿಯ ಮಾತೇಕೆ? ನೆಟ್ಟಗಾಗಲಿ; ಕಚೇರಿಗೆ ಹೋಗುವಿರಂತೆ. ಬಹಳ ಮಾತಾಡಿ ಆಯಾಸ ಮಾಡಿಕೊಳ್ಳಬೇಡಿರಿ" ಎಂದು ಸದಯಾಂತಃಕರಣದಿಂದ ನುಡಿದಳು.

"ಬೇನೆ! ಯಾತರ ಬೇನೆ? ಯಾವಾಗಿನಿಂದ ಬೇನೆಬಿದ್ದಿರುವೆನು?"

"ಎಂಟಾನೆಂಟು ದಿವಸ ಮೈಮೇಲೆ ಎಚ್ಚರಿಕೆಯಿಲ್ಲದೆ ಮಲಗಿ ಕೊಂಡಿರುವಿರಿ! ಮಾತಾಡಬೇಡಿರೆಂದು ನಾನು ಹೇಳಲಿಲ್ಲವೆ? ಆಯಾಸ ಮಾಡಿಕೊಳ್ಳುತ್ತೀರಿ" ಎಂದು ಚಿಂತೋಪಂತನ ಮುಖವನ್ನು ನೋಡುತ್ತ ಅನ್ನಪೂರ್ಣೆಯು ನುಡಿದಳು.

"ಯಾರು! ನೀನು ಅನ್ನಪೂರ್ಣೆಯೇನು?"

"ಬಹಳ ಮಾತಾಡಬಾರದೆಂದು ಡಾಕ್ಟರರು ಶಾಸನಮಾಡಿರುವರು. ಕಣ್ಣುಮುಚ್ಚಿಕೊಂಡು ಮಲಗಿರಿ" ಎಂದು ಹೇಳಿ ಅನ್ನಪೂರ್ಣೆಯು ಚಿಂತೋಪಂತನಿಗೆ ಔಷಧವನ್ನು ಕುಡಿಸಿ ಅವನ ತಲೆದಿಂಬು ಸರಿಮಾಡಿಟ್ಟು ಮೈತುಂಬ ಚನ್ನಾಗಿ ಹೊದಿಸಿದಳು.

ಕಣ್ಣುಮುಚ್ಚಿಕೊಂಡು ಮಲಗಿದರೂ ಚಿಂತೋಪಂತನು "ಎಂಟಾನೆಂಟು ದಿವಸ ಎಚ್ಚರವಿಲ್ಲದೆ ಇದ್ದೇನೇ? ನನಗೆ ತಿಳಿಯದೆ ನಾನೆಂತು ಅಸ್ವಸ್ಥನಾದೆನೋ ಏನೋ! ಚಮತ್ಕಾರವೇ!!" ಎಂದು ಅವನು ಆಲೋಚಿಸಲಾಗಿ ಅವನ ನಿದ್ದೆಯು ಹಿಂದಾಯಿತು. ಅವನ ಮಿದುಳು ವಿಚಾರಗ್ರಹಣಕ್ಕೆ ಅಕ್ಷಮವಾಗಿದ್ದರೂ ಸಂಸಾರತಾಪದ ವಿವಿಧವಾದ ದುಃಸಂಗತಿಗಳು ಅವನ ಹೃದಯದಲ್ಲಿ ಸುತ್ತಾಡಿದ್ದರಿಂದ ದುಃಖಸಂತಪ್ತನಾಗಿ ಕಣ್ಣಿಗೆ ನೀರುತಂದನು. ಸಂಸಾರದಲ್ಲಿ ಅವನಿಗೆ ತಿಲಮಾತ್ರವೂ ಸುಖವಿರಲಿಲ್ಲ. ಅದರ ಭಾರವನ್ನು ಮಾತ್ರ ಅವನಿಗೆ ಅವ್ಯಾಹತವಾಗಿ ಹೊರಬೇಕಾಗಿತ್ತು.

ಚಿಂತೋಪಂತನು ಹದಿನೆಂಟು ವರುಷದವನಿದ್ದಾಗ ಅವನ ತಂದೆಯು ಒಂದು ಹೆಣ್ಣು ತೆಗೆದು ಮದುವೆ ಮಾಡಿದ್ದನು. ಅವನ ಮನಸ್ಸಿನಲ್ಲಿ ಬೇರೊಬ್ಬ ಅಭಿನವಸುಂದರಿಯನ್ನು ಮದುವೆಮಾಡಿಕೊಳ್ಳಬೇಕೆಂದಿತ್ತು. ಆದರೆ ಲಜ್ಜೆಗೂ ಜನರೂಢಿಗೂ ದುರಾಗ್ರಹಿಯಾದ ತಂದೆಯ ಅಂಜಿಕೆಗೂ ಅವನು ಈಡಾಗಿ ತನ್ನ ಮನೋಗತವನ್ನು ವ್ಯಕ್ತಪಡಿಸದಲೆ ಕಲ್ಲುಕಟ್ಟಿ ಕೊಂಡು ಭವಾರ್ಣವದಲ್ಲಿ ಈಸುಬಿದ್ದುಬಿಟ್ಟನು.

ತಂದೆ ತೀರಿಕೊಂಡ ಬಳಿಕ ಚಿಂತೋಪಂತನು ಸದರ್ನ ಮರಾಠಾ ರೇಲ್ವೆಯ ಮಾರ್ಗವನ್ನು ಮಾಡತಕ್ಕವನಾದ ಸರ್ ಟೀ. ಟಾಮ್‌ಸನ್‌ನೆಂಬ ಕಂತ್ರಾಟಿದಾರನ ಕೈಕೆಳಗೆ ಒಂದು ಚಾಕರಿಯನ್ನು ಸಂಪಾದಿಸಿಕೊಂಡು ಅಂದಿನಿಂದ ಸಪ್ತಾಪುರದಲ್ಲಿ ಮನೆಮಾಡಿಕೊಂಡಿದ್ದನು. ಚಿಂತೋಪಂತನ ಹೆಂಡತಿಯ ಹೆಸರು ಸುಶೀಲೆಯು. ಹೆಸರು ದಂಡ! ಅವಳು ಜಾತ್ಯಾ ದುಃಶೀಲೆ ಯಾಗಿದ್ದು ಮೇಲೆ ತಾಯಿಯ ಕಲಿಕೆ. ಕೇಳುವದೇನು? ಸೊಸೆಮುದ್ದು ಮನೆಯಲ್ಲಿ ಕಾಲಿಟ್ಟ ಕ್ಷಣದಿಂದ ಅತ್ತೆಯೊಡನೆ ಹುತ್ರಿಂದು ಜಗಳಕ್ಕೆ ಪ್ರಾರಂಭ ಮಾಡಿದಳು. ಚಿಂತೋಪಂತನು ಸೌಮ್ಯ ಸ್ವಭಾವದವನೂ ಸುಶೀ ಲನೂ ಆಗಿದ್ದನು. ಸಂಸಾರ ಸುಖದ ಹೊಸ ಭರತಿಯಲ್ಲಿ ಮನೆಯ ಕಲಹವ ವನ್ನು ಅವನು ಮೈಗೆ ಹಚ್ಚಿಕೊಳ್ಳಲಿಲ್ಲ.

ಸುಶೀಲೆಯು ಬೇಗ ಬೇಗನೆ ಇಬ್ಬರು ಗಂಡಮಕ್ಕಳನ್ನು ಹಡೆದಳು. ತಾಯಿ ಮುದುಕೆ, ಹೆಂಡತಿಯು ಕೂಸಿನ ತಾಯಿ! ಹೀಗಾಗಿ ಸಮಯಕ್ಕೆ ಊಟವಿಲ್ಲ; ದುಡಿದು ದಣಿದು ಮನೆಗೆ ಬರುವದರೊಳಗಾಗಿಯೇ ಅತ್ತೆ-ಸೊಸೆಯರು ಘೋರೆಂದು ಕಾದುತ್ತಿರುವರು. ಹೆಂಡರಾಡುವ ನಾಲ್ಕು ಸವಿ ಮಾತುಗಳು ಕೂಡ, ಪಾಪ, ಚಿಂತೋಪಂತನ ಕಿವಿಗೆ ಬೀಳುತ್ತಿದ್ದಿಲ್ಲ.

“ಪುಣ್ಯವಂತೆಯರು ಮುನಸೀಫ ಮಾಮಲೇದಾರರ ಹೆಂಡಿರಾಗಿ ಐಶ್ವರ್ಯ ದಲ್ಲಿ ಲೋಲಾಡುತ್ತಿರುವರು; ನನ್ನ ದೈವಕ್ಕೆ ಈ ಹತ್ತು ಗಂಟೆಯ ಅಡಿಗೆ ಮಾಡಿ ನೀರು ಹೊತ್ತು ಹೊತ್ತು ಸಾಯುವದು ಪ್ರಾಪ್ತವಾಯಿತು! ಮೇಲೆ ಇಂಥ ಅತ್ತೆಯ ಕಿಟಿಕಿಟಿ!” ಎಂದು ಕಂಡದ್ದನ್ನೆಲ್ಲ ಎಡವುತ್ತ ಪಾತ್ರೆಗಳನ್ನು ಇಕ್ಕರಿಸುತ್ತಿರುವ ಹೆಂಡತಿಯನ್ನು ನೋಡಿ ಚಿಂತೋಪಂತನಿಗೆ ಎಷ್ಟಾದರೂ ವ್ಯಸನವಾಗುತ್ತಿರಬಹುದು! ತನ್ನ ಮನಸ್ಸಿಗೆ ಬಂದಿದ್ದ ಗುಣಸಂಪನ್ನೆಯಾದ

ಸುಂದರಿಯು ತನ್ನ ಹೆಂಡತಿಯಾಗಲಿಲ್ಲೆಂಬ ಚಿಂತೆಯು ಅವನ ಮನಸ್ಸಿನಲ್ಲಿ ಹೆಚ್ಚಾಗಿ ಕಟೆಯುದಿರುವದೆ ? ಮೇಲಾಗಿ ಆ ಸುಚರಿತೆಯು ವಿಧವೆಯಾಗಿ ಜಗತ್ತಿನಲ್ಲಿ ಕಣ್ಣು ಕಟ್ಟಿ ಬಿಟ್ಟವರಂತೆ ಆಧಾರಹೀನಳಾದ ಸಂಗತಿಯಾದರೂ ಅವನ ವ್ಯಸನಕ್ಕೆ ಕಾರಣವಾಗಿತ್ತು.

ಚಿಂತೋಪಂತನು ಸುಶೀಲನೂ ಸಮಾಧಾನವುಳ್ಳ ವೃತ್ತಿಯುವನೂ ಆಗಿದ್ದರಿಂದ ಬಂಪದ್ದನ್ನೆಲ್ಲ ನುಂಗಿಕೊಂಡಿದ್ದನು. ಆದರೂ ಅವನ ಮುಂದೆ ಬಡಿಸಿಟ್ಟ ದುಃಖದ ಎಡೆಯು ಸವೆಯಲೊಲ್ಲದು.

ಲೋಹಮಾರ್ಗದ ರಚನೆಯು ಮುಗಿದು ಹೊಗೆಬಂಡಿಗಳು ಓಡಾಡ ಹತ್ತಿದ ಬಳಿಕ ಚಿಂತೋಪಂತನು ಹುಬ್ಬಳ್ಳಿಯಲ್ಲಿಯ ಒಂದು ರೇಲ್ವೆ ಅಫೀಸದ ಹೆಡ್‌ಕ್ಲಾರ್ಕನಾದನು. ದಿನಾಲು ಧಾರವಾಡದಿಂದ ಹುಬ್ಬಳ್ಳಿಗೆ ಹತ್ತು ಗಂಟೆಗೆ ಹೋಗಿ ಸಂಜೆಯ ಐದಕ್ಕೆ ಮನೆಗೆ ಬರುವನು. ಅಂತಃಕರಣದ ತಾಯಿಯು ತೀರಿಕೊಂಡದ್ದರಿಂದ ಹೆಂಡತಿಯ ತಾಪವು ಅವನಿಗೆ ಅಧಿಕವಾಗಿ ತೋರಿತು. ಸಿದ್ದೂ, ಗಣು ಎಂಬ ಅವನಿಬ್ಬರು ಮಕ್ಕಳು ಸಾಲೆ ಬಿಟ್ಟು ಮನೆ-ಮೂಳರಾಗಿ ಕುಳಿತರು.

ತಂದೆಯು ನೂರು ರೂಪಾಯಿ ಸಂಬಳವುಳ್ಳ ಅಧಿಕಾರಿಯಿರುವನೆಂಬ ಹೆಮ್ಮೆಯಿಂದಲೂ, ತಾಯಿಯ ಮೈಮೇಲಿರುವ ಮೂರು ನಾಲ್ಕು ಸೇರು ಬಂಗಾರದ ದೀಪ್ತಿಯಿಂದಲೂ ಸಿದ್ಧೇಶ್ವರನ ತಲೆ ತಿರುಗಿ ಹೋಗಿದ್ದರಿಂದ ಅವನು ಉದ್ದಾಮನಾಗಿ ವರ್ತಿಸುತ್ತಿದ್ದನು. ಚಿಕ್ಕವನು ವೇಶ್ಯಾಗೃಹಸಂಚಾರಿಗಳಾದ ರಾವಸಾಹೇಬರ ಅನುಯಾಯಿಯಾಗಿ ತಂಬಾಕಚರ್ವಣ ಧೂಮ್ರಪಾನಗಳ ವ್ಯಸನವನ್ನು ತಗಲಿಸಿಕೊಂಡು ಸುಲಿದ ಬಡಿಗೆಯಂತೆ ಕ್ಷೀಣನಾಗಿದ್ದನು. ಅಹೋರಾತ್ರಿ ನಾಟಕದ ಪದಗಳನ್ನು ಕೇಳಿದವರ ಕಿವಿ ಕೀಸರಾಗುವಂತೆ ಅಪಸ್ವರವಾಗಿ ಹಾಡುವನು. ವೇಶ್ಯಾ ಜನರ ಸೇವೆಯಲ್ಲಿ ನಿರತನಾಗಿದ್ದ ಗಣಪತಿಗೆ ಮನೆಯ ಅರಿವೇ ಇದ್ದಿಲ್ಲ.

ಸಿದ್ಧೇಶ್ವರನು ಅಕ್ಷರಸ್ಥನಾಗಿದ್ದುದರಿಂದ ಅವನ ತಂದೆಯು ಹುಬ್ಬಳ್ಳಿಯ ಗಿರಣಿಯಲ್ಲಿ ಒಂದು ಚಾಕರಿ ಕೊಡಿಸಿದ್ದನು. ಆದರೆ ಉನ್ಮತ್ತನಾದ ಆ ಪೋರನಿಗೂ ಗಿರಣಿಯ ವ್ಯವಸ್ಥಾಪಕನಿಗೂ ಕೂಡಿ ಬರಲಿಲ್ಲಾದ್ದರಿಂದ ಅವನು ವರ್ತಮಾನಪತ್ರಗಳ ಲೇಖಕನಾಗುವ ಯತ್ನದಲ್ಲಿರುವೆನೆಂದು ತಂದೆ

ತಾಯಿಗಳಿಗೆ ಹೇಳಿ ಕಾಗದ ಮಸಿಗಳಿಗೆ ಕಾಳರೂಪಿಯಾದನು. ಕಡೆಗೆ ಅವಿಚಾರಿಗಳಾದ ಮಕ್ಕಳನ್ನು ಕಂಡರೆ ತಂದೆಗೆ ಆಗುತ್ತಿದ್ದಿಲ್ಲ. ತಂದೆಯು ಸಮಕ್ಷದಲ್ಲಿ ಕುಳಿತು ಉಣ್ಣಲಿಕ್ಕೆ ಮಕ್ಕಳಿಗೆ ಮನಸ್ಸಾಗುತ್ತಿದ್ದಿಲ್ಲ.

ಚಿಂತೋಪಂತನಿಗೆ ನಿತ್ಯದಲ್ಲಿಯೂ ಒಂದೇ ಪ್ರಕಾರದ ತಾಪಗಳು. ಅದೇ ಊಟದ ಅನಾನುಕೂಲತೆ, ಅದೇ ಗಾಡಿಯ ಅವಸರ; ನಿರಂತರವಾದ ಕಚೇರಿಯ ಕೆಲಸದ ತಾಪ. ಮಕ್ಕಳ ಅವಿಚ್ಛಿನ್ನವಾದ ದುರ್ವ್ಯಾಪಾರ. ಚಿಂತೋಪಂತನೆಂಬೇ ಅವುಗಳನ್ನು ಅನುಭವಿಸುತ್ತಿದ್ದನೆ ಹೊರತಾಗಿ ಮತ್ತೊಬ್ಬನಾಗಿದ್ದರೆ ಉರುಲು ಹಾಕಿಕೊಳ್ಳುವ ಮಾತು.

ಮುನಸಿಪಲ್ ಇಲೆಕ್‌ಶನ್ನದ ಗಡಿಬಿಡಿಯ ಮೂಲಕ ಒಂದು ದಿವಸ ಚಿಂತೋಪಂತನಿಗೆ ಸ್ಟೇಶನಕ್ಕೆ ಹೋಗಲಿಕ್ಕೆ 'ಟಾಂಗೆ' ಸಿಗಲಿಲ್ಲ. ಹೊಟ್ಟೆಯಲ್ಲಿ ಕೂಳು ತುಂಬಿಕೊಂಡು ಅವನು ನಡೆಯುತ್ತ ಸ್ಟೇಶನಕ್ಕೆ ಹೊರಟನು. ಕರ್ಮಧರ್ಮ ಸಂಯೋಗದಿಂದ ಮಾರ್ಗದಲ್ಲಿ ಒಳಿತಾಗಿ ಮಳೆ ಹೊಡೆಯಿತು. ತೋಯಿಸಿಕೊಂಡು ಚಿಂತೋಪಂತನು ಕಚೇರಿಗೆ ಹೋದವನು ಸಂಜೆಗೆ ಜ್ವರ ತಕ್ಕೊಂಡೇ ಮನೆಗೆ ಬಂದನು.

ಮೇಲೆ ವಿವರಿಸಿದಂಥ ಅಸಹ್ಯವಾದ ಸಂಸಾರ ತಾಪಗಳನ್ನು ನೆನೆದು ಚಿಂತೋಪಂತನು ವ್ಯಾಕುಲನಾಗಿ ಆಗಾಗ್ಗೆ ಬಾಯಲ್ಲಿ ಏನೋ ಒಟಗುಡುತ್ತಿದ್ದನು. ಅನ್ನಪೂರ್ಣೆಯು ಅವನ ಬಾಯಿ ಸಪ್ಪಳವನ್ನು ಬಹಳ ಹೊತ್ತು ಕೇಳಿ ಮೆಲ್ಲನೆ ಮುಸುಕು ತೆಗೆದು ನೋಡಿದಳು. ಹೃದಯದಲ್ಲಿ ಕಲ್ಲೋಲವನ್ನುಂಟುಮಾಡುವ ವಿಚಾರಗಳ ನಿರ್ಭರಕ್ಕಾಗಿ ಪಾಪ, ಆ ರೋಗಿಯು ಆಯಾಸ ಹೊಂದಿದ್ದನು. ಮೈಯೆಲ್ಲ ಜೋರೆಂದು ಬೆವತಿತ್ತು. ಪತಿವ್ರತೆಯಾದ ಅನ್ನಪೂರ್ಣೆಯು ಚಿಂತೋಪಂತನ ದುಃಸ್ಥಿತಿಯನ್ನು ಕಂಡು ಒಳಿತಾಗಿ ಉಸುರ್ಗರೆದು ಜೋಕೆಯಿಂದ ಅವನ ಬೆವರೊರಿಸಿ ತನ್ನ ಸೆರಗಿನಿಂದ ಮೆಲ್ಲನೆ ಗಾಳಿ ಹಾಕಿದಳು. ತುಸು ಹೊತ್ತಿನಲ್ಲಿ ಅವನಿಗೆ ನಿದ್ದೆ ಹತ್ತಿತು.

ವಿಕಾರವಶತೆಯಿಂದುಂಟಾದ ಆಯಾಸಕ್ಕಾಗಿ ರೋಗಿಯು ಹೆಚ್ಚಿಗೆ ಕ್ಷೀಣನಾದನು. ನಿನ್ನೆಗಿಂತಲೂ ಈ ದಿವಸದ ಸ್ಥಿತಿಯು ಕೆಟ್ಟದ್ದು. ಡಾಕ್ಟರ ಮಂಗೇಶರಾಯರು ರೋಗಿಯ ನಾಡೀ ಪರೀಕ್ಷೆ ಮಾಡಿ ಅನ್ನಪೂರ್ಣೆಯನ್ನು ಕುರಿತು "ಕಠಿಣವಿದೆ" ಎಂದು ಹೇಳಿದರು.

"ಏನಾಯಿತು ?" ಎಂದು ಅನ್ನಪೂರ್ಣೆಯು ದ್ರವಹಾರಿ ಕೇಳಿದಳು.

"ಶರೀರ ನಿಶ್ಶಳಿಕೆಗೆ ಬಿದ್ದಿದ್ದಾರೆ. ಏನಾಗುತ್ತದೆಯೋ ಹೇಳಲಾಗದು."

"ಈ ಸಮಾಚಾರವನ್ನು ಸುಶೀಲಾಬಾಯಿಯವರಿಗೆ ತಿಳಿಸಲೆ ?" ಎಂದು ಅನ್ನಪೂರ್ಣೆಯು ಕಣ್ಣು ತುಂಬಾ ನೀರು ತಂದು ಕೇಳಿದಳು.

"ಉಪಾಯವೇ ಇಲ್ಲ, ತಿಳಿಸಬಹುದು." ಎಂದು ಹೇಳಿ ಡಾಕ್ಟರರು ಅನಿವಾರ್ಯಹಕ್ಕಾಗಿ ಕೆಲವು ಔಷಧಗಳನ್ನು ಕೊಟ್ಟು ಹೊರಟುಹೋದರು.

"ನಿಶ್ಶಳಿಕೆ" "ಸುಶೀಲಾಬಾಯಿಗೆ ತಿಳಿಸಲೆ ?" "ಉಪಾಯವಿಲ್ಲ" ಮುಂತಾದ ಮೇಲಿನ ಸಂವಾದದಲ್ಲಿಯ ಶಬ್ದಗಳು ಚಿಂತೋಪಂತನ ಕಿವಿಗೆ ಬಿದ್ದು ಅವನಿಗೊಂದು ಪ್ರಕಾರದ ಚೇತನವು ಬಂದಂತಾಯಿತು.

"'ಸುಶೀಲಾಬಾಯಿಕೆ ತಿಳಿಸಲೆ' ಯಾಕೆ ? ನಾನು ಔಷಧ ತೆಗೆದು ಕೊಳ್ಳುವದಿಲ್ಲವೆಂದು ತಿಳಿದು ಆ ಚಂಡಿಯನ್ನು ನನ್ನ ಮುಂದೆ ತಂದು ನಿಲ್ಲಿಸುವಿರೇನು ಮತ್ತೆ ?" ಎಂದು ವಿಚಾರಿಸಿ ಅವನು ತುಸು ಹೆದರಿದನು.

"ಉಪಾಯವಿಲ್ಲವೇಕೆಂದರು ? ನಾನು ಸಾಯುವೆನೇನು ? 'ಮರಣಂ ಪ್ರಕೃತಿಃ ಶರೀರಿಣಾಂ' ಎಂಬ ಮಾತು ಸತ್ಯವಿರಲಿ ಇರದಿರಲಿ, 'ವಿಕೃತಿರ್ಜೀವಿತಮುಚ್ಯತೇ ಬುಧೈಃ' ಎಂಬದು ಮಾತ್ರ ಸರ್ವಾಂಶಗಳಲ್ಲಿ ಸತ್ಯವು. ಆಃಹಾ, ಈ ಸಮಯದಲ್ಲಿ ಮರಣ ಬಂದರೆ ನಾನು ಗೆದ್ದೆನಲ್ಲವೆ ?" ಎಂದು ಅವನು ಮೆಲ್ಲನೆ ಉದ್ಗಾರ ತೆಗೆದು ಮತ್ತೆ ಕಣ್ಣು ಮುಚ್ಚಿದನು.

ತುಸು ಹೊತ್ತಿನ ಮೇಲೆ ಅನ್ನಪೂರ್ಣೆಯು ಅವನ ಕೈಹಿಡಿದು ನೋಡಿದಳು. ತುದಿ ಬೆರಳುಗಳು ತಣ್ಣಗಾಗಿದ್ದವು. ಅವಳ ಕೋಮಲವಾದ ಹಸ್ತಸ್ಪರ್ಶದಿಂದ ಚಿಂತೋಪಂತನಿಗೆ ತುಸು ಎಚ್ಚರ ಬಂದಂತಾಗಿ "ನಾನು ಸಾಯುವೆನೇನು ?" ಎಂದು ಅನ್ನಪೂರ್ಣೆಯ ಮುಖವನ್ನು ನೋಡಿ ಕೇಳಿದನು.

"ಭರವಸವಿಲ್ಲವೆಂದು ಡಾಕ್ಟರರು ಹೇಳಿದ್ದಾರೆ" ಎಂದು ಅವಳು ಗದ್ಗದಿತಕಂಠೆಯಾಗಿ ಮೆಲ್ಲನೆ ಉಸುರಿದಳು.

"ದೀನದಯಾಳಾ, ಪಾರುಮಾಡಿದಿ ಕಂಡಿಯಾ !"

ಬದುಕುವ ಆಶೆಯಿಲ್ಲೆಂದು ಡಾಕ್ಟರರು ಹೇಳಿದ ಸಂಗತಿಯನ್ನು ಕೇಳಿ ಸುಶೀಲೆಯು ತನ್ನ ಮುತ್ತೈದೆತನವನ್ನು ನೆನೆದು ದುಃಖಿತಳಾದಳು. ಗಣಪತಿಯು ರಂಗಾಸಾನಿಗಾಗಿ ಕೊಯ್ದಿರುವ ಹೂವಿನ ಬುಟ್ಟಿಯನ್ನು ತೋಟ

ದಲ್ಲಿಯೇ ಬಿಟ್ಟು ತಂದೆಯ ಬಳಿಗೆ ಬಂದನು. ಸಿದ್ಧೇಶ್ವರನು ತಾನು ಬರೆದಿಟ್ಟ ಕಾಗದಗಳನ್ನು ಅವಸರದಿಂದ ಪ್ರಾಜ್ಞ್ಯವಾಗಿ ಕೂಡಿಸತೊಡಗಿದನು.

ಹೆಂಡತಿಯೂ ಮಕ್ಕಳೂ ತನ್ನ ಬದಿಗೆ ಬಂದು ನಿಂತದ್ದು ಕಂಡು ಚಿಂತೋಪಂತನ ಮನಸ್ಸಿನಲ್ಲಿ ಅನೇಕ ಪ್ರಕಾರದ ವಿಕಾರಗಳು ಉದ್ಭವಿಸಿದವು. ಹೆಂಡತಿಯ ಮೇಲೆ ಅವನ ಪ್ರೇಮವು ವಿಶೇಷವಾಗಿ ಇಲ್ಲದಿದ್ದರೂ "ಧರ್ಮೇ ಚ ಅರ್ಥೇ ಚ ಕಾಮೇ ಚ ನಾತಿಚರಾಮಿ" ಎಂದು ತಾನು ಅವಳೊಡನೆ ಪ್ರತಿಜ್ಞೆ ಮಾಡಿದ್ದನ್ನು ಸರ್ವಥಾ ಅವನು ಉಲ್ಲಂಘಿಸಿದ್ದಿಲ್ಲ. ಆದರೂ ಸಂಸಾರದಲ್ಲಿ ತನಗೆ ಸುಖವಾಗಲಿಲ್ಲವೆಂದು ನೆನಿಸಿ ಅವನು ದುಃಖಿತನಾದನು. ಸಿದ್ಧೇಶ್ವರನೂ ಗಣೇಶನೂ ಚಿಕ್ಕ ಮಕ್ಕಳಿದ್ದಾಗ ಇವರು ತನ್ನ ಅರಗಿಳಿಗಳೇ ಎಂದು ಅವನು ಅಕ್ಕರತೆಯನ್ನು ಹೊಂದಿದ್ದನು. ಅದೇ ಮಕ್ಕಳು ಈಗ ವ್ರಾತ್ಯರಾಗಿ ತಾವೂ ಸುಖಿಗಳಾಗಲಿಲ್ಲ, ತಂದೆಯಾದ ತನಗೂ ಸುಖ ಕೊಡಲಿಲ್ಲವೆಂದು ಕಂಡು ಸರ್ವಸಂಗ ಪರಿತ್ಯಾಗ ಮಾಡಿದ ಬಾವಾ ಬೈರಾಗಿಗಳ ಜೀವಿತವೇ ವಿಹಿತವಾದದ್ದೆಂದು ಅವನು ತಿಳಿದನು. ಹೆಂಡತಿಯು ದುಃಖದಿಂದ ಅಳುತ್ತಿರುವವನ್ನು ಕಂಡು ಅವನಂದದ್ದು :

"ಯಾಕೆ ಅಳುತ್ತೀ ? ಸಾವು ಬಿಡಿಸುವವರಾರು ? ನನ್ನ ಅವಸ್ಥೆ ಏನೆಂದು ಶೋಕಿಸಬೇಡ. ನನಗೆ ಯಾವ ವ್ಯಥೆಯೂ ಇಲ್ಲ ! ಸಮಾಧಾನವನ್ನು ತಾಳಬೇಕು. ಬೇರೆ ಮಾರ್ಗವೇ ಇಲ್ಲ."

ಉಪಚಾರಕ್ಕಾಗಿ "ನಿಮ್ಮನ್ನು ಬಿಟ್ಟು ಹೇಗೆ ಸಾಯಲಿ !" ಎಂದೆನ್ನಬೇಕೆಂದು ಅವನು ಯೋಚಿಸಿದನು. ಆದರೆ ಸಾಯುವ ಸಮಯದಲ್ಲಿ ಸುಳ್ಳಾಡಲರಿಯದೆ ಅವನು ಹಲ್ಲಲ್ಲಿ ನಾಲಿಗೆ ಇಟ್ಟುಕೊಂಡು ಕುಳಿತನು.

"ಮುಂದೆ ನನ್ನ ಗತಿಯೇನು ? ಸಿದ್ಧೇಶ್ವರ ಗಣಪತಿಗಳಿಗೆ ಏನು ಹೇಳುತ್ತೀರಿ ?" ಎಂದು ನಿಜವಾದ ದುಃಖದಿಂದ ಸುಶೀಲೆಯು ಕೇಳಿದಳು.

"ಗತಿಯೇನು ! ಲಾಯಿ.ಫ ಅಶ್ಯುರನ್ಸದ ೪೦೦೦ ರೂಪಾಯಿಗಳು ಬರುವವು. ನಿನ್ನ ಮೈಮೇಲೆ ಬಂಗಾರವಿದೆ; ನಾವಿದ್ದ ಮನೆಯನ್ನು ಕೊಂಡು ಬಿಟ್ಟಿದ್ದೇನೆ. ಕಬಗೇರಿಯ ಗದ್ದೆಯಿಂದ ಹೊಟ್ಟೆಗೆ ಸಾಕಷ್ಟು ನೆಲ್ಲು ಬರುತ್ತದೆ. ಹೇಗಾದರೂ ಇರಿರಿ. ಹುಡುಗರು ಒಳ್ಳೇ ರೀತಿಯಿಂದ ನಡಕೊಂಡರೆ ಹೊಟ್ಟೆ ಬಟ್ಟೆಗೆ ಏನು ಕಡಿಮೆ ?" ಎಂದು ನುಡಿದವನೇ ಮತ್ತೆ ಧ್ರುವ

ಬಂದಂತಾಗಿ ಮಲಗಿದನು. ಇಷ್ಟಕ್ಕೆಯೇ ನಾಲಿಗೆ ಕುಂಠಿತವಾದದ್ದು ಕಂಡು ಇನ್ನೇನು ಮರಣವೇ ಬಂದಿತೆಂದು ನೆನೆದು ಅವನು ಒಳ್ಳೇ ಸಂತುಷ್ಟನಾಗಿ ಮಲಗಿದನು.

ಈಗ ಪ್ರಾಣವು ಹೋಗುತ್ತದೋ ಇನ್ನೊಂದು ಕ್ಷಣಕ್ಕೆ ಹೋಗುತ್ತದೋ ಎಂದು ಎಲ್ಲರೂ ಹೌಹಾರಿ ಕುಳಿತರು. ತೀರ್ಥ ಗಂಗಾಜಲಗಳ ಹನಿಗಳು ಕಷ್ಟದೊಂದಿಗೆ ಗಂಟಲಿನಲ್ಲಿ ಇಳಿದವು. ಹಾಗೂ ಹೀಗೂ ರಾತ್ರಿ ಪಾರಾಯಿತು. ಚಿಂತೋಪಂತನಿಗೆ ಮನೋಹರವಾದ ಕನಸು ಬಿದ್ದಂತಾಗಿ ಅವನು ಸುಖನಿದ್ರೆಗೈದನೆಂದು ಹೇಳಬಹುದು.

ಮರುದಿವಸ ಶ್ವಾಸೋಚ್ಛ್ವಾಸವು ಸಮಾಧಾನಕರವಾಗಿ ನಡೆಯಿತು. ನಾಡಿಗಳು ಮೆಲ್ಲನೆ ಆಡಲಾರಂಭಿಸಿದುವು. ಡಾಕ್ಟರರು ಚಿಂತೋಪಂತನ ಸರ್ವಾಂಗವನ್ನೆಲ್ಲ ಚೆನ್ನಾಗಿ ಪರೀಕ್ಷಿಸಿ "ಇನ್ನೇನು ಚಿಂತೆಯಿಲ್ಲ!" ಎಂದು ನಗೆಮೊಗವನ್ನು ತಾಳಿ ಹೇಳಿದರು.

ಸುಶೀಲೆಯು ಸಮಾಧಾನದ ಉಸುರ್ಗರೆದು "ನೋಡಿರಣ್ಣಾ, ನೀವೇ ಹೊಟ್ಟೆಯಲ್ಲಿ ಹಾಕಿಕೊಳ್ಳಿರಿ!" ಎಂದು ಡಾಕ್ಟರರಿಗೆ ಹೇಳಿಕೊಂಡಳು.

"ಚಿಂತೇ ಬಿಡಿರಿ! ಮಾತ್ರ ನೀವು ಇಲ್ಲಿ ನಿಷ್ಕಾರಣವಾಗಿ ಗೊಂದಲ ಮಾಡಿ ಇವರ ನಿದ್ದೆ ಕೆಡಿಸಬೇಡಿರಿ. ಅವನಷ್ಟು ನಿದ್ದೆ ಒಳ್ಳೇದು. ಶುಶ್ರೂಷೆಗೆ ಅನ್ನಪೂರ್ಣಾಬಾಯಿಯವರು ಒಬ್ಬರು ಮಾತ್ರ ಇರಲಿ. ನೀವೆಲ್ಲರೂ ನಿಮ್ಮ ಉದ್ಯೋಗಕ್ಕೆ ಹೊರಟುಹೋಗಿರಿ" ಎಂದು ಹೇಳಿ ಎಲ್ಲರನ್ನು ಕರೆಕೊಂಡು ಡಾಕ್ಟರರು ಹೊರಬಿದ್ದು ಹೋದರು.

ಬಹಳೊತ್ತಿನ ಮೇಲೆ ನಿದ್ರೆ ತಿಳಿದಂತಾಗಿ "ನಾನು ಸತ್ತೆನೇನು?" ಎಂದು ಚಿಂತೋಪಂತನು ಅರನಿದ್ದೆಯಲ್ಲಿ ಕೇಳಿದನು.

ಯಮಪಾಶವು ಸಡಿಲಾಗಿ ಕಳಚಿಬಿದ್ದುದರಿಂದಲೇ ಅವನ ಬಾಯಿಯಿಂದ ಶಬ್ದಗಳು ಹೊರಟವಷ್ಟೆ? ಚಿಂತೋಪಂತನ ವಿಲಕ್ಷಣವಾದ ಪ್ರಶ್ನವನ್ನು ಕೇಳಿ ಅನ್ನಪೂರ್ಣೆಗೆ ವಿನೋದವಾಗಿ ಅವಳು ನಗು ಕೇಳಬರುವಂತೆ ನಕ್ಕಳು. ತನ್ನ ಕನಸಿಗೂ ಆ ನಗೆಗೂ ಸಂಬಂಧವಿದ್ದಂತಾಗಿ ಚಿಂತೋಪಂತನು ಮೆಲ್ಲನೆ ಕಣ್ದೆರೆದು ನೋಡಿದನು.

"ಅನ್ನಪೂರ್ಣಾ ನೀನೆಂದು ಬಂದಿ? ನಿನ್ನೆ ಮೊನ್ನೆ ನಿನ್ನನ್ನು

ಎಲ್ಲಿಯೊ ನೋಡಿದಂತಾಯಿತು. ”

“ ಮಾತಾಡಗೊಡಬಾರದೆಂದು ಡಾಕ್ಟರರು ಹೇಳಿದ್ದಾರೆ. ” ಎಂದು ಅನ್ನಪೂರ್ಣೆಯು ಮಂದಸ್ಮಿತೆಯಾಗಿ ಹೇಳಿದಳು.

“ ನಾನಿನ್ನು ಸಾಯಲಿಕ್ಕಿಲ್ಲೇನು? ” ಎಂದು ಅವನು ಮತ್ತೆ ಕೇಳಿದನು.

“ ಸಾವಿನ ಮಾತೇ ತೆಗೆಯಬೇಡಿರಿ. ಇಂದಿಗೆಂಟನೆಯ ದಿವಸ ನೀವೇ ಸಂಬಳ ತೆಗೆದುಕೊಳ್ಳಲಿಕ್ಕೆ ಹುಬ್ಬಳ್ಳಿಗೆ ಹೋಗುವಿರಿ. ಸದ್ಯಕ್ಕೆ ದಯಮಾಡಿ ಮಾತಾಡಬೇಡಿರಿ. ಕಣ್ಣು ಮುಚ್ಚಿಕೊಂಡು ನಿದ್ರೆ ಮಾಡಲಿಕ್ಕೆ ಯತ್ನಮಾಡಿರಿ. ”

ಆಜ್ಞೆಯ ಮೇರೆಗೆ ಚಿಂತೋಪಂತನು ಕಣ್ಣು ಮುಚ್ಚಿದಂತೆ ಮಾಡಿದನು. ಆದರೆ ಅವು ಮುಚ್ಚಲೊಲ್ಲವು. ನಿಚ್ಚಳವಾಗಿ ಕಣ್ದೆರೆದು ಕೆಲಹೊತ್ತಿನವರೆಗೆ ಅವನು ಅಸಂಬದ್ಧವಾಗಿ ಬಡಬಡಿಸಿದಂತೆ ಮಾಡಿದನು. ಅನ್ನಪೂರ್ಣೆಯು ಅವನ ಮಾತುಗಳನ್ನು ತಡೆಯಲಿಲ್ಲ, ಅವನಿಗೆ ಉತ್ತರವನ್ನೂ ಕೊಡಲಿಲ್ಲ. ಅವನೇ ಮಾತಾಡಿ ದಣಿದು ಮತ್ತೆ ತುಸು ನಿದ್ರೆ ಮಾಡಿದನು. ಅರ್ಧಗಳಿಗೆಯಲ್ಲಿಯೇ ಮತ್ತವನು ಎಚ್ಚತ್ತು ಜೀವಕಳೆಯಿಂದ ಯುಕ್ತವಾದ ತನ್ನ ಕಣ್ಣು ತೆರೆದು ನೋಡಿದನು. ಅನ್ನಪೂರ್ಣೆಯು ಕೆಳಗೆ ಮೋರೆ ಮಾಡಿಕೊಂಡು ಕಾಲುಚೀಲವನ್ನು ಹೆಣೆಯುತ್ತ “ ಹರಿ ಕೊಟ್ಟದ್ದುಂಡು ಇಟ್ಟಂತಿರೋದಲ್ಲದೆ ! ಪರತೊಂದು ಬಯಸುವರೇ ” ಎಂದು ಬಹು ಮೆಲ್ಲಗೆ ಮಂಜುಲವಾಗಿ ಹಾಡುತ್ತಿದ್ದಳು. ಆ ಸ್ವರದ ಸೊಂಪಿಗೆ ಚಿಂತೋಪಂತನ ಜೀವಕ್ಕೆ ಉತ್ಸಾಹ ಬಂದಂತಾಗಿ “ ಪೂರ್ಣಾ, ನಾನಾಗಲೇ ಏನೇನೋ ಹುಚ್ಚನಂತೆ ಮಾತಾಡುತ್ತಿದ್ದೆನಲ್ಲವೆ ? ” ಎಂದು ಕೇಳಿದನು.

“ ಆಹುದು ! ಏನೇನೋ ಬಡಬಡಿಸುತ್ತಿದ್ದಿರಿ. ” ಎಂದು ಅವಳು ಸುಳ್ಳಾಡಿದಳು. ನಿಜವಾಗಿ ಹೇಳಬೇಕಾದರೆ ಚಿಂತೋಪಂತನು ಬಡಬಡಿಸಲಿಲ್ಲ. ಎಚ್ಚರುಳ್ಳವನಾಗಿಯೇ ಮಾತಾಡಿದ್ದನು.

“ ಆಡಬಾರದ್ದನ್ನು ಆಡಿದೆನೇನು ? ” ಎಂದು ಅವನು ಕಿಂಚಿತ್ ಪಶ್ಚಾತ್ತಾಪದಿಂದ ಕೇಳಿದನು.

“ ಆಡಿದರೂ ಆಡಿರಬಹುದು ! ಜ್ವರದವರೇನಾಡಿದರೂ ಅದನ್ನು ಲಕ್ಷಕ್ಕೆ ತರಕೂಡದೆಂಬದು ನಾವು ಕಲಿತ ಶುಶ್ರೂಷಾಶಾಸ್ತ್ರದ ನಿಯಮವು. ” ಆದರೆ ಅನ್ನಪೂರ್ಣೆಯು ಅನಭಿಜ್ಞಳೇ ?

# ಗೃಹಕಥಾ

[ಸತಿಯು ಪತಿಯ ಹಾಗೂ ಪತಿಯು ಸತಿಯ ಮನೋವೃತ್ತಿಗಳನ್ನು ಅರಿತು ಪರಸ್ಪರರು ಪರಸ್ಪರರನ್ನು ಸಂತೋಷಗೊಳಿಸಿದರೆ ಮಾತ್ರ ಸಂಸಾರವು ಉಭಯತರಿಗೂ ಸುಖಮಯವಾಗುತ್ತದೆ ಹೊರತಾಗಿ, ಅವರಲ್ಲಿ ಯಾರಾದರೊಬ್ಬರು ಅಹಂಭಾವದಿಂದ ಪ್ರೇರಿತರಾಗಿ, ಪರರ ಮನೋವೃತ್ತಿಗಳನ್ನು ಲಕ್ಷಿಸದೆ ಸ್ವಸುಖಾಭಿಲಾಷಿಯಾದರೆ, ಸಂಸಾರವು ಹೇಗೆ ಕಷ್ಟಮಯವಾಗುತ್ತದೆಂಬದು ಈ ಚಿಕ್ಕ ಕಥೆಯಲ್ಲಿ ತೋರಿಸಿದೆ. ಆದರೆ, ನಮ್ಮ ಕಥಾನಾಯಿಕೆಯಾದ ಪ್ರೇಮವಲ್ಲರಿಯು ಶಿಕ್ಷಣದ ಸಂಸ್ಕಾರವನ್ನು ಹೊಂದಿದವಳಾದ್ದರಿಂದ ವ್ಯವಹಾರ ಚತುರೆಯಾದ ಅನ್ನಪೂರ್ಣಾಬಾಯಿಯ ಸದುಪದೇಶವನ್ನು ಗ್ರಹಿಸಿ ತನ್ನ ಆಗ್ರಹವನ್ನು ಬಿಟ್ಟುಕೊಟ್ಟು ಮತ್ತೆ ಹೇಗೆ ಸುಖಭಾಗಿನಿಯಾದಳೆಂಬದಾದರೂ ಇದರಲ್ಲಿ ತೋರಿಸಿದೆ. ]

ದಿವಾಕರ ದೇವರಾವ ದೇಶಪಾಂಡೆ ಎಂಬ ಹೆಸರಿನ ಅಲ್ಪವಯಸ್ಕನಾದ ಬಾಲಕನ ತಂದೆತಾಯಿಗಳಿಬ್ಬರೂ ಏಕಕಾಲಕ್ಕೆ ವಿಲಕ್ಷಣವಾದ ಜ್ವರದ ಪೀಡೆಯಿಂದ ತೀರಿಕೊಂಡದ್ದರಿಂದ ಸಕಲ ಸಂಪತ್ತುಗಳಿಂದ ತುಂಬಿ ತುಳಕುತ್ತಿರುವ ಅವನ ಮನೆಗೆ ನಿಯಾಮಕರಿಲ್ಲದಂತಾಯಿತು. ಅವನ ಸಂರಕ್ಷಣದ ಭಾರವೂ ಅವನ ಜಾಗಿರಿಯ ವ್ಯವಸ್ಥೆಯ ಭಾರವೂ ಕೋರ್ಟ ಆಫ ವಾರ್ಡ್ಸ ಎಂಬ ನ್ಯಾಯಾಸ್ಥಾನದ ಕಡೆಗೆ ಬಂದಿತು. ದಿವಾಕರನು ಸುಂದರನೂ ಚಪಲನೂ ಬುದ್ಧಿವಂತನೂ ಆದ ಬಾಲಕನಾಗಿರುವದರಿಂದ ಜಜ್ಜ ಸಾಹೇಬರ ಪ್ರೇಮವು ಅವನ ಮೇಲೆ ಅಧಿಕವಾಗಿತ್ತು. ಅವನ ಊಟ ಉಡಿಗೆ ಆರೈಕೆ ಆರೋಗ್ಯರಕ್ಷಣಗಳ ಕೆಲಸವನ್ನು ಸಾಹೇಬರು ದಿವಾಕರನ ಪ್ರೀತಿಯ ಸೋದರಮಾವನ ಕಡೆಗೆ ಒಪ್ಪಿಸಿದ್ದರು. ದಿವಾಕರನು ಸರಕಾರದ ಹಾಯಸ್ಕೂಲಿನಲ್ಲಿ ಅಭ್ಯಾಸಮಾಡುತ್ತಿದ್ದರೂ ಮನೆಯಲ್ಲಿ ಅವನ ಮಾನಸಿಕ ಹಾಗೂ ನೈತಿಕ ಶಿಕ್ಷಣಗಳ ಮೇಲ್ವಿಚಾರಣದ ಕೆಲಸವು ಒಬ್ಬ ಚತುರನಾದ ಪದವೀಧರನ ಕಡೆಗೆ ಕೊಡಲ್ಪಟ್ಟಿತ್ತು. ಹೀಗೆ ವ್ಯವಸ್ಥಿತವಾದ ಶಿಕ್ಷಣ ಪೋಷಣಗಳು ದೊರೆಯುತ್ತಿರಲು ಕೇಳುವದೇನು ? ದಿವಾಕರನು ಬುದ್ಧಿಶಾಲಿಯಾದ ವಿದ್ಯಾರ್ಥಿಯೂ ರೂಪವಂತನೂ ಬಲವಂತನೂ ಆದ ತರುಣನೂ ಆಗುತ್ತ ನಡೆದನು. ಶಾಠ್ಯ ದಂಭ ಅಹಂಕಾರಗಳ ಸಂಪರ್ಕವಿಲ್ಲದೆಯೂ ದುರಾಚರ

ಈದ ಹಾದಿಗೆ ಹೋಗದೆಯೂ ದಿವಾಕರನು ತನ್ನ ವಿದ್ಯಾವ್ಯಾಸಂಗವನ್ನು ಚೆನ್ನಾಗಿ ಮಾಡುತ್ತ ಸಾಹೇಬರಿಗೂ, ಮಾಸ್ತರನಿಗೂ ಶಿಕ್ಷಕರಿಗೂ ಕೂಡಿಯೇ ಕೀರ್ತಿಯನ್ನು ಕೊಡುವವನಾದನು. ಯಥಾಕ್ರಮವಾಗಿ ಇಯತ್ತೆ ಇಯತ್ತೆಗಳನ್ನು ದಾಟಿ ಅವನು ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಯಲ್ಲಿ ಪಾಸಾಗಿಬಿಟ್ಟನು.

ಆ ಕಾಲಕ್ಕೆ ವರಗಳ ವ್ಯಾಪಾರವೇ ತೇಜಿಯಲ್ಲಿತ್ತು. ಹುಟ್ಟಿದ ಹುಳಕ್ಕೆ ಕೂಡ ಯೋಗ್ಯತೆ ಮೀರಿ ವರದಕ್ಷಿಣೆ! ಫಾಯನಲ್ಲ ಪರೀಕ್ಷೆಯಾಗಿ ಅಸಿಸ್ಟಂಟ ಕಲೆಕ್ಟರರ ಕಚೇರಿಯಲ್ಲಿ ಉಮೇದವಾರನಾಗಿದ್ದರಾಯಿತು, ಅವನು ದೊಡ್ಡ ವರನು. ವರದಕ್ಷಿಣೆ ಎಷ್ಟೆಂದು ಕೇಳಿದ್ದೊಂದೇ ತಡ, 'ಸಾವಿರ ರೂಪಾಯಿ, ಮೇಲೆ ವರೋಪಚಾರ!' ಎಂಬ ಮಾತು ಬಂದಿತೇ. ವತನವೃತ್ತಿ ಮನೆ ಮಾರುಗಳೇನಾದರೂ ಇವೆಯೋ ಎಂದು ಕನ್ಯೆಯನ್ನೂ ಮೇಲೆ ಸಾವಿರ ರೂಪಾಯಿಗಳಷ್ಟು ಕೊಡತಕ್ಕವನು ಕೇಳಿದರೆ ತಪ್ಪಾಯಿತೆ? 'ಯಾಕೆ, ಬಹಳ ಕೇಳುತ್ತೀರಿ? ನಮ್ಮ ವತನವೃತ್ತಿಗಳನ್ನು ನೀವು ಕೊಂಡುಕೊಳ್ಳತಕ್ಕವರೋ? ಇನ್ನೊಮ್ಮೆ ಕೇಳಿದರೆ ವರದಕ್ಷಿಣೆ ಹದಿನೈದು ನೂರು!' ಎಂಬ ಉದ್ಧಟವಾದ ಉತ್ತರವನ್ನು ಆ ನೀರಿನವನ ಮಗನು ಕೊಡುವನು. ವರಗಳ ವ್ಯಾಪಾರವು ಹೀಗೆ ಘನಚಕ್ರವಾಗಿ ನಡೆದಿರುವಾಗ ದಿವಾಕರನಂಥ ಶ್ರೀಮಂತನೂ ಕುಲೀನನೂ ಉಚ್ಚಶ್ರೇಣಿಯ ಶಿಕ್ಷಣದ ಮಾರ್ಗದಲ್ಲಿರುವವನೂ ಆದ ತರುಣನ ಮೇಲೆ ಚವರ ಹಾರದಿದ್ದೀತೆ? ದೊಡ್ಡ ದೊಡ್ಡ ದೇಸಾಯಿ ದೇಶಪಾಂಡೆ ಮುಂತಾದ ಜಮೀನದಾರರೂ ಜಜ್ಜ ಕಲೆಕ್ಟರ ಮುಂತಾದ ಅಧಿಕಾರಿಗಳೂ ಸುಂದರಿಯರಾದ ತಮ್ಮ ಕನ್ಯೆಯರನ್ನು ಕೊಡಹೋದಲ್ಲಿ, ಕೋರ್ಟ ಆಫ ವಾರ್ಡ್ಸದವರು ಸದ್ಯಕ್ಕೆ ದಿವಾಕರನ ಮದುವೆ ಮಾಡುವದು ತಮಗೆ ಇಷ್ಟವಿಲ್ಲೆಂದು ಹೇಳಿದರು.

ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ದಿವಾಕರನು ಮುಂದೆ ಮುಂಬಯಿಯಲ್ಲಿಯ ದೊಡ್ಡದೊಂದು ಕಾಲೇಜಕ್ಕೆ ಹೋದನು. ಅಲ್ಲಿಯಾದರೂ ಅವನು ಬುದ್ಧಿವಂತರಾದ ವಿದ್ಯಾರ್ಥಿಗಳಲ್ಲಿ ಅಗ್ರಗಣ್ಯನೆನಿಸಿಕೊಂಡು ಬೀ. ಎ. ಪರೀಕ್ಷೆಯಲ್ಲಿ ಬಹುಮಾನದ ಪದವಿಯನ್ನು ಹೊಂದಿದನು. ಬುದ್ಧಿವಂತನೂ ಸುಸ್ವಭಾವದವನೂ ಸಂಪತ್ತಿನ ಸೌಕರ್ಯದಲ್ಲಿರುವವನೂ ಆದ ಆ ತರುಣನು ಪ್ರತಿಷ್ಠಿತರ ಸಮಾಜದಲ್ಲಿ ಮೆರೆಯಲಾರಂಭಿಸಿದನು. ಮುಂಬಯಿ

ಯಂಥ ಸುಧಾರಣೋತ್ತೇಜಕವಾದ ಕ್ಷೇತ್ರದಲ್ಲಿ ಅವನ ನಿವಾಸವು. ಅವನ ಸಹಾಧ್ಯಾಯಿಗಳೂ ಸ್ನೇಹಿತರೂ ಕಾಲೇಜದ ಫೆಲೋ ಪ್ರೊಫೆಸರರೂ ಎಲ್ಲರೂ ಸುಧಾರಣಾವಾದಿಗಳು. ಸುಧಾರಿಸಿದ ಆಚಾರವಿಚಾರಗಳುಳ್ಳ ಸಮಾಜದಲ್ಲಿ ಓಡಾಡುವವನಾದ ದಿವಾಕರನು ನಖಶಿಖಾಂತವಾಗಿ ಸುಧಾರಕನಾಗಿ ಹೋದನು. ಆ ಪರಿಸ್ಥಿತಿಯಲ್ಲಿದ್ದರೆ ಪೆದ್ದನಂಥ ಗ್ರಾಮ್ಯನೋರ್ವನು ಕೂಡ ವರ್ಷಾರು ತಿಂಗಳದಲ್ಲಿ ಸುಧಾರಣೆಯ ಪ್ರವಾಹಕ್ಕೆ ಬಿದ್ದು ಅರಿಯುವ ತಾನೆಷ್ಟು ದೂರ ಹೋಗಿರುವೆನೆಂಬದನ್ನು ಕಂಡು. ಅವನಿಗೆಯೇ ಆಶ್ಚರ್ಯವಾಗ ಬಹುದು. ದಿವಾಕರನಂತೂ ಸುಧಾರಣೆಗೆ ಅನುಕೂಲನು. ಈಸು ಕಲಿಯ ಬೇಕೆಂದು, ಬೇಕಾಗಿ ಅವನು ಆ ಮಹಾಪ್ರವಾಹದಲ್ಲಿ ಹಾರಿಕೊಂಡು ವಿನೋದದಿಂದ ತೇಲತೇಲುತ್ತ ಹೋಗಿ, ಸುಧಾರಣಾ ಮಹಾರ್ಣವದ ತರಂಗ ತತಿಗಳ ಹೊಡತವನ್ನು ಲಕ್ಷಿಸದೆ ಅವನು ಅಲ್ಲಿ ಆನಂದದಿಂದ ಹೊಯ್ದಾಡ ಲಾರಂಭಿಸಿದನು. ಉಣಿಸುತಿನಿಸಿನ ಚಮತ್ಕಾರ, ವೇಷವೈಚಿತ್ರ್ಯ, ನಡೆನುಡಿ ಗಳ ಒಯ್ಯಾರ ಮುಂತಾದ ಮಾತುಗಳಲ್ಲಿ ದಿವಾಕರನು ಅಚ್ಚ ಸುಧಾರಕರ ತಲೆ ಮೇಲೆ ಕೈ ಇಟ್ಟನು.

ಬಿ. ಏ. ಪರೀಕ್ಷೆಯಾಯಿತು; ಸುಧಾರಣೆಯ ಯಥೇಷ್ಟವಾದ ಪರಿಚಯ ವಾಯಿತು; ಇಂದು ನಾಳೆ ಕೋರ್ಟಿನವರು ಸಂಪತ್ತನ್ನೆಲ್ಲ ತನ್ನ ಸ್ವಾಧೀನಕ್ಕೆ ಕೊಡತಕ್ಕವರು; ಇಂಥ ಸೌಕರ್ಯದ ಸ್ಥಿತಿಯಲ್ಲಿ ತಾನಿನ್ನು ಸಸ್ತ್ರೀಕವಾಗಿ ಸಂಸಾರದ ಸುಖವನ್ನು ಯಥೇಷ್ಟವಾಗಿ ಭುಂಜಿಸಬೇಕೆಂಬ ವಿಚಾರವು ದಿವಾ ಕರನಲ್ಲಿ ಹುಟ್ಟಿದ್ದು ಸಹಜವೇ ಸರಿ. ಆದರೆ ತನಗಿನ್ನು ಯೋಗ್ಯಳಾದ ಪತ್ನಿ ಯೆಂದರೆ ಎಂಥವಳು? ಅಪರಿಚಿತಳೂ ಅಸಂಸ್ಕೃತಳೂ ಆಗಿರುವ ಓರ್ವ ಹಳ್ಳಿಗಾಡ ಕನ್ಯೆಯನ್ನು ದಲಾಲರ ಮುಖಾಂತರವಾಗಿ ಹುಡುಕಿ ಮದುವೆ ಮಾಡಿಕೊಂಡು ಸಂಸಾರ ಸುಖವನ್ನು ಹೊಂದುವೆನೆಂಬುವದೂ ಕಬ್ಬಿಣದ ಅಲಂಕಾರಗಳನ್ನು ಮಾಡಿ ಇಟ್ಟುಕೊಂಡು ಮೆರೆಯುವೆನೆಂಬುವದೂ ಒಂದೇ ಎಂದು ಶಂಕಿಸಿ, ಅವನು ಸುಧಾರಣಾಶಾಣೋಲ್ಲೀಢಿತಳಾದ ಓರ್ವ ವಿದುಷೀ ಮಣಿಯ ಪ್ರೇಮ ಸಂಪಾದನವನ್ನು ಮಾಡಿಕೊಳ್ಳುವ ಉದ್ಯೋಗದಲ್ಲಿ ತೊಡ ಗಿದನು. ಕರ್ಮಧರ್ಮ ಸಂಯೋಗದಿಂದ ಒಂದು ನಾಕ್ಯಮಣಿಯ ಪರಿ ಚಯವೂ ಅವನಿಗೆ ಅಕಸ್ಮಾತ್ತಾಗಿ ಆಯಿತು. ಮುಂಬಯಿಯ ಬಳಿಯಲ್ಲಿ

ರುವ ಮಾತಂಗ ದ್ವೀಪದಲ್ಲಿಯ ಗುಹೆಗಳನ್ನು ದಿವಾಕರನು ನೋಡ ಹೋದ ಕಾಲಕ್ಕೆಯೇ “ ಫೀಮೇಲ ಯುನಿವ್ಹರ್ಸಿಟೀ ಕಾಲೇಜ ” ಎಂಬ ವಿದ್ಯಾಸಂಸ್ಥೆಯಲ್ಲಿ ಕಲಿಯುತ್ತಿರುವ ತರುಣಿಯರ ವೃಂದವಾದರೂ ಅಲ್ಲಿಗೆ ಬಂದಿತ್ತು. ಆ ವೃಂದದಲ್ಲಿದ್ದ ಮಿಸ್ ಪ್ರೇಮವಲ್ಲರೀ ಎಂಬ ಸುಂದರಿಯಾದ ಒಯ್ಯಾರಿಯೊಬ್ಬಳು ಸಶಾಸ್ತ್ರವಾದ ಶೃಂಗಾರ ಚೇಷ್ಟಿತಗಳನ್ನು ನಟಿಸಿ ದಿವಾಕರನ ಚಿತ್ತವೃತ್ತಿಯನ್ನು ಅಪಹರಿಸಿಕೊಂಡಳು.

ಪ್ರೇಮವಲ್ಲರಿಯು ಹದಿನೆಂಟು ವರ್ಷದ ನವತರುಣಿಯು. ಗೌರವರ್ಣದ ಆ ಸುಂದರಿಯ ಉಡಿಗೆ ತೊಡಿಗೆಗಳು ಬಹು ಸೊಬಗಿನವು. ಕೈಯಲ್ಲಿಯ ಅಂದವಾದ ಪುಸ್ತಕವನ್ನು ತಾಳದೊಂದಿಗೆ ತನ್ನ ತೊಡೆಗೆ ಬಡಿಯುತ್ತ ಸೇಕ್ಸಪಿಯರನದೊಂದು “ ಸಾನೆಟ್ ” ಪದವನ್ನು ಮೆಲ್ಲನೆ ಬಹು ಇಂಪಾಗಿ ಹಾಡುತ್ತಿರುವ ಮಿಸ್ ಪ್ರೇಮವಲ್ಲರಿಯನ್ನು ಕಂಡು ದಿವಾಕರನು ಮೋಹಿತನಾದದ್ದು ಆಶ್ಚರ್ಯವಲ್ಲ. ಮುಂಬಯಿಗೆ ಬಂದ ಬಳಿಕ ಟ್ರಾಮವೇದಲ್ಲಾಗಲಿ, ನಾಟಕಗೃಹದಲ್ಲಾಗಲಿ ದಿವಾಕರ ಪ್ರೇಮವಲ್ಲರಿಯರ ಸಂದರ್ಶನವಾದಾಗ ಅವರವರ ನಡುವೆ ಮೃದುಸ್ಮಿತದ ಪ್ರಣಾಮಗಳು ನಡೆದವು. ಬರಬರುತ್ತ ಸಂಕೋಚವು ಸಡಿಲಾಗಿ ಅವರೀರ್ವರ ನಡುವೆ ಕುಶಲಪ್ರಶ್ನಗಳ ವ್ಯವಹಾರವು ನಡೆಯಿತು. ಮುಂದೆ ಇಬ್ಬರೂ ಕೂಡಿ ಸೇಕ್ಸಪಿಯರನ “ ರೋಮಿಯೋ ಆ್ಯಂಡ ಜೂಲಿಯೇಟ್ ’ ಎಂಬ ಸುರಸವಾದ ನಾಟಕವನ್ನೋದಿದರು. ಒಬ್ಬರ ಮಾರ್ಮಿಕತೆಯನ್ನು ಒಬ್ಬರು ಕೊಂಡಾಡಿದರು. ಒಂದು ದಿನ ಪ್ರೇಮವಲ್ಲರಿಯು ದಿವಾಕರನಿಗೊಂದು ಚಿತ್ರಮಯವಾದ ಕೊರಳಪಟ್ಟಿಯನ್ನು ಕಾಣಿಕೆಯಾಗಿ ಕಳಿಸಿದಳು; ಅದಕ್ಕೆ ಪ್ರತಿಯಾಗಿ ದಿವಾಕರನೊಂದು ಬೆಲೆಯುಳ್ಳ ರೇಶಿಮೆಯ ದುಕೂಲವನ್ನು ‘ In token of love (ಪ್ರೇಮದ ಕುರುಹು)’ ಎಂಬ ವಿಳಾಸ ಸಹಿತವಾಗಿ ಕಳಿಸಿದನು. ಮುಂದೆ ನಡೆದ ಚಮತ್ಕಾರಗಳನ್ನು ರಸಿಕರಾದ ವಾಚಕರು ಊಹಿಸಬಹುದಾದ್ದರಿಂದ ಅದನ್ನು ನಾವು ಇಲ್ಲಿ ಬೆಳಸಿ ಹೇಳಲಿಚ್ಛಿಸುವದಿಲ್ಲ. ಪ್ರಥಮ ಪರಿಚಯವಾದ ಒಂದೆರಡು ತಿಂಗಳಗೆಳಲ್ಲಿಯೇ ದಿವಾಕರ ಪ್ರೇಮವಲ್ಲರಿಯರು ದಂಪತಿಗಳಾದರು.

“ ನಿಮ್ಮ ಆಸ್ತಿಯನ್ನು ನೀವು ನಿಮ್ಮ ಸ್ವಾಧೀನಕ್ಕೆ ತೆಗೆದುಕೊಳ್ಳತಕ್ಕ

ದ್ದೆ'ಂದು ಕೋರ್ಟ-ಆಫ ವಾರ್ಡ್ಸ್‌ದ ಅಧಿಕಾರಿಗಳು ದಿವಾಕರನಿಗೆ ತಿಳಿಸಿದ ಮೇರೆಗೆ ಅವನು ಸಸ್ತ್ರೀಕನಾಗಿ ಊರಿಗೆ ಬಂದು ದೊಡ್ಡ ಶ್ರೀಮಂತನಾಗಿ ಇರತೊಡಗಿದನು. ಊರಲ್ಲಿಯ ಮನೆಯು ಮನಸ್ಸಿಗೆ ಬರಲಿಲ್ಲವಾದ್ದರಿಂದ ನವದಂಪತಿಗಳು ಊರಹೊರಗಿರುವ ತಮ್ಮ ಬಂಗಲೆಯಲ್ಲಿ ಇರಹೋದರು. ಅಲ್ಲಿ ಅವರು ಸೋಜಿಗದ ಸಂಸಾರವನ್ನು ಹೂಡಿದರು. ಎಲ್ಲಿ ನೋಡಿದಲ್ಲಿ ಮೇಜು, ಕುರ್ಚಿ, ಕಪಾಟುಗಳೂ ಚಿತ್ರಪಟ ಕನ್ನಡಿಗಳೂ ಕರ್ಟನ್ ಕನಾತು ಗಳೂ ಮಂಚತಿವಾಸಿಗೆಗಳೂ ಪಿಯಾನೋ ಹಾರ್ಮೋನಿಯಮ್‌ಗಳೂ ಬಹು ಪರಿಷ್ಕಾರದೊಂದಿಗೆ ಮಂಡಿಸಲ್ಪಟ್ಟಿದ್ದವು. ಮನೆಯ ಸುತ್ತಲಿನ ರಮ್ಯವಾದ ಉದ್ಯಾನದ ಆರೈಕೆಗಾಗಿ ನಾಲ್ಕು ಜನ ತೋಟಿಗರು. ಮನೆಯಲ್ಲಿ ಕೈಗೊಬ್ಬ ಕಾಲಿಗೊಬ್ಬ ಸೇವಕನು. ಹೆಂಡತಿಗೊಂದು ಗಂಡನಿಗೊಂದು ಹೀಗೆ ಎರಡು ಕುದುರೆಯ ರಥಗಳು. ಹತ್ತುವ ಕುದುರೆಗಳಾದರೂ ಬೇರೆ ಬೇರೆ. ವರ್ಷ ಎಂಟೊಂಬತ್ತು ಸಾವಿರ ರೂಪಾಯಿಗಳನ್ನು ಗಂಡಹೆಂಡರಿಬ್ಬರೇ ಬೇಕಾದ ಹಾಗೆ ತೂರಾಡಬಹುದಾದ ಸಮಯದಲ್ಲಿ ಸಂಸಾರಸಾಗರದ ದುಃಖಮಯ ವಾದ ತರಂಗಗಳು ಇವರಿಗೆ ತೊಂದರೆಯನ್ನು ಕೊಡಲು ಸತ್ವಹೀನವಾಗಿ ದ್ದವು. ಚಹಾ-ಕಾಫಿ, ಊಟ-ಉಡಿಗೆ, ಗಾನ-ವಾದನ, ವಾಚನ-ಚಿತ್ರ ಲೇಖನ, ಅಶ್ವದಮನ, ವನೋಪವನಗಳಲ್ಲಿ ವಿಹರಣ ಮುಂತಾದ ವ್ಯವಸಾಯ ಗಳಲ್ಲಿ ಅವರು ವರ್ಷರುತಿಂಗಳುಗಳನ್ನು ಆಡಾಡುತ್ತ ಕಳೆದರು.

“ ಸ್ವರ್ಗೀಯ ” “ ಸ್ವರ್ಗೀಯ ”ವೆಂದು ಹೇಳಲ್ಪಡುವ ಹುಚ್ಚು ಪ್ರೇಮದ ನಿರ್ಭರವೆಲ್ಲ ಇಳಿದುಹೋದ ಬಳಿಕ ನಾನು ನಾನೆಂಬ ಐಹಿಕವಾದ ವಿಚಾರವು ಮನುಷ್ಯನ ಹೃದಯವನ್ನು ಆಕ್ರಮಿಸುವದುಂಟು. ದೇಶಸ್ಥನಾದ ಈ ದಿವಾಕರನಿಗೆ ನನ್ನಂಥ ಸುಂದರಿಯೂ ಸುಸಂಸ್ಕೃತೆಯೂ ಆದ ಸ್ತ್ರೀ ರತ್ನದ ಪ್ರಾಪ್ತಿಯಿಂದಲೇ ಸುಖವಲ್ಲದೆ ಅವನ ಐಶ್ವರ್ಯದಿಂದೇನು ಎಂಬ ವಿಚಾರವು ಮೆಲ್ಲನೆ ಪ್ರೇಮವಲ್ಲರಿಯ ಮನಸ್ಸಿನಲ್ಲಿ ಹೊಕ್ಕಿಕೊಂಡಿತು. ಸುಧಾ ರಿಸಿದ ಸ್ತ್ರೀಗೆ ಉಚಿತವಾದ ಸ್ವಾತಂತ್ರ್ಯವು ಈ ಮನೆಯಲ್ಲಿ ತನಗೆ ಸಂಪೂರ್ಣ ವಾಗಿ ಇರುವದೋ ಇಲ್ಲವೋ ಎಂಬದನ್ನು ಅವಳು ಅನೇಕ ಪರಿಯಾಗಿ ಪರೀ ಕ್ಷಿಸಿ ನೋಡಿದಳು. ಅದು ಇದ್ದಿತ್ತು. ಉದಾರನಾದ ಪತಿಯ ಪರವಾನು ಗ್ರಹವೆಂದು ಭಾವಿಸದೆ ತಾನನುಭವಿಸುತ್ತಿರುವ ಸ್ವಾತಂತ್ರ ಸುಖವು ತನ್ನಲ್ಲಿ

ಸ್ವಾಯತ್ತವಾಗಿರುವ ಗುಣಗಳ ಪರಾಕ್ರಮದಿಂದಲೇ ತನಗೆ ಪ್ರಾಪ್ತವಾಗಿ
ರುವದೆಂಬ ಭಾವನೆಯು ಅವಳಿಗಾಯಿತು. ತನಗಾಗಿ ತನ್ನ ಮನೆಗೆ ಬಂದಿ
ರುವ ತನ್ನ ಪ್ರಿಯ ಪತ್ನಿಗೆ ಯಾತರಿಂದಲೂ ಕೊರತೆಯಾಗಬಾರದೆಂದು ದಿವಾ
ಕರನು ಹೆಂಡತಿಯ ಇಚ್ಛಾನುವರ್ತಿಯಾಗಿ ನಡೆದರೆ ಅವನು ಹೀನಸತ್ವನೆಂದು
ಅವಳು ತಿಳುಕೊಂಡಳು. ಹೆಂಡತಿಯ ಅಧಿಕಾರ ಮರ್ಯಾದೆಯನ್ನು ಅವಳು
ಮೆಲ್ಲಮೆಲ್ಲನೆ ಉಲ್ಲಂಘಿಸಿದಳು. ಪ್ರೀತಿಯುತನಾದ ಪತಿಗೆ ಇದೆಲ್ಲ ಮೊದಲು
ಮೊದಲು ವಿನೋದವೇ ಆಗಿ ತೋರಿತು. ಪತಿಯು ಬೇಡವೆಂದರೂ ನೂರು
ರೂಪಾಯಿಗಳನ್ನು ಕೊಟ್ಟು ಪ್ರೇಮವಲ್ಲರಿಯು ಒಂದು ಮಂಗನನ್ನು
ಕೊಂಡಳು. 'ಮಂಗ ಮಂಗಗಳಿಗೆ ಗಂಟು' ಎಂದು ನಕ್ಕು ಪತಿಯು
ಸುಮ್ಮನಿದ್ದನು. ಗಂಡನಿಗಿಂತ ತನಗೆ ಮೊದಲು ಊಟಕ್ಕೆ ಬಡಿಸಲಿಲ್ಲೆಂದು
ಸಿಟ್ಟಾಗಿ ಅವಳು ಅಡಿಗೆಯವನನ್ನು ಹೊರಗೆ ಹಾಕಿದಳು. ಹೋಗಲೆಂದವ
ನು ದಿವಾಕರನೆಂದರೆ ತನಗೆ ಅಂಕಿತವಾಗಿರುವದೊಂದು ಪ್ರಾಣಿಯೆಂದು
ನಿಶ್ಚಿತವಾದ ಕಲ್ಪನೆಯಾದ ಬಳಿಕ ಪ್ರೇಮವಲ್ಲರಿಯು ತನ್ನ ಸ್ವಾತಂತ್ರ್ಯ
ವನ್ನೂ ಪತಿಯ ಸ್ವಾತಂತ್ರ್ಯವನ್ನೂ ತನ್ನ ವಶದಲ್ಲಿಯೇ ಇಟ್ಟುಕೊಂಡು ಮನೆ
ಯನ್ನು ಆಳಲಾರಂಭಿಸಿದಳು.

ಬರಬರುತ್ತ ತನ್ನ ಸುಖದಲ್ಲಿಯೇ ಕೊರತೆಯಾಗಲಾರಂಭಿಸಿತೆಂದು
ದಿವಾಕರನಿಗೆ ಕಂಡುಬಂದಿತು. ತನ್ನೆಡೆಗೆ ಸುಖವು ಬಾರದಿದ್ದರೆ ತಾನೇ
ಸುಖವಿದ್ದಲ್ಲಿಗೆ ಹೋದರಾಯಿತೆಂದು ಹೇಳಿ ಅವನು ಸಮಾಧಾನ ಹಚ್ಚಿ
ಕೊಳ್ಳುವನು. ಆದರೇನು? ಹೆಂಡತಿಯೊಡನೆ ಕುಳಿತು ನಾಲ್ಕು ವಿನೋದದ
ಮಾತುಗಳನ್ನಾಡುವೆನೆಂದರೆ ಅವಳು ಅವನಿಗೆ ವಿಶೇಷವಾದ ಆದರವನ್ನು
ತೋರಿಸದಾದಳು. "ಪ್ರೇಮವಲ್ಲರಿ, ಪಿಯಾನೋ ಪೇಟಿಯನ್ನು ತೆಗೆದು
ತುಸು ಹಾಡಬಾರದೇ!" ಎಂದು ಕೇಳಿದರೆ "ನಾನೊಲ್ಲೆ! काव्यशास्त्र
विनोदेन कालो गच्छति धीमतां ಎಂದು ಜಂಬ ಹೇಳುತ್ತಿರುವಿರಿ. ಸುಮ್ಮನೆ
ಪುಸ್ತಕವನ್ನೋದಿರಿ" ಎಂದು ಅವಳು ಹೇಳುವಳು "ಅಲ್ಲಾ, ನೀನೇ
ಚಹ ಮಾಡಬಾರದೆ? ಅಡಿಗೆಯವಳು ನಿಸ್ಸಾರವಾದ ಚಹ ಮಾಡಿರುವಳು"
ಎಂದು ಅವನು ಕೇಳಿಕೊಂಡರೆ "ನಾನೇನು ದಾಸಿಯಲ್ಲ" ಎಂಬ ಅಭದ್ರ
ವಾದ ಉತ್ತರವು. ಒಂದು ದಿವಸವಂತೂ ಪ್ರೇಮವಲ್ಲರಿಯು ಗಂಡನನ್ನು

ಕೇಳದೆ ತಾನೋರ್ವಳೇ ನಾಟಕವನ್ನು ನೋಡಲಿಕ್ಕೆ ಹೊರಟುಹೋದಳು.

ಮರುದಿವಸ ಮಧ್ಯಾಹ್ನದ ಭೋಜನವಾದ ಬಳಿಕ ಪ್ರೇಮವಲ್ಲರೀ ಬಾಯೀಸಾಹೇಬರವರು ಒಯ್ಯಾರದ ಪೋಷಾಕು ಮಾಡಿಕೊಂಡು ಇನ್ನು ಯುರೋಪಿಯನ್ ಮಡಮ್ಮನಂತೆ ಪೇಟೆಗೆ ಜೀನಸುಗಳನ್ನು ತರಲಿಕ್ಕೆ ಹೊರಡತಕ್ಕವಳು. ಅವರು ತಮ್ಮ ಸ್ವಂತ ರಥದ ಸಾರಥಿಯನ್ನು ಕೂಗಿ ರಥ ಸಿದ್ಧ ಮಾಡೆಂದು ಆಜ್ಞಾಪಿಸಿದರು. ಆದರೆ ಸಾರಥಿಯು ಉಲುವೇ ಇಲ್ಲ. ಸಿಟ್ಟಾಗಿ ರಥವಿರುವ ಸ್ಥಳಕ್ಕೆ ಹೋಗಿ ನೋಡಿದರು. ಅಲ್ಲಿ ರಥವೂ ಇಲ್ಲ; ಕುದುರೆಗಳೂ ಇಲ್ಲ. ಕಡುಕೋಪದಿಂದ ಬೂಟುಗಾಲಪ್ಪಳಿಸುತ್ತ ಅಮ್ಮನವರ ಮೆರವಣಿಗೆಯು ರಾಯರಿದ್ದಲ್ಲಿಗೆ ಬಂದಿತು.

"ಪತಿರಾಜ! ನನ್ನ ರಥ-ಕುದುರೆಗಳೆಲ್ಲಿ? ಪ್ರಾತಃಕಾಲದಲ್ಲಿಯೇ ನೀವು ಅವುಗಳನ್ನು ಎಲ್ಲಿಗೋ ಕಳಿಸಿದಿರಂತೆ! ನನ್ನ ರಥದ ಗೊಡವೆಗೆ ಹೋಗುವ ಪ್ರಯೋಜನವು ನಿಮಗೇನಿತ್ತು?" ಎಂದು ಕ್ರುದ್ಧಳಾದಂತೆ ನಟಿಸಿ ಪ್ರೇಮವಲ್ಲರಿಯು ಗಂಡನನ್ನು ಕುರಿತು ಪ್ರಶ್ನೆ ಮಾಡಿದಳು.

"ನಿಮ್ಮ ರಥವೇ? ಅದನ್ನು ನಾನು ಮಾರಿಬಿಟ್ಟೆನು!" ಎಂದು ತನ್ನ ಮುಖದಲ್ಲಿ ಯಾವ ಪ್ರಕಾರದ ವಿಕಾರವನ್ನಾದರೂ ವ್ಯಕ್ತಪಡಿಸದೆ ದಿವಾಕರನು ಬಹು ಶಾಂತನಾಗಿ ಹೇಳಿದನು.

"ಏನು? ನನ್ನ ರಥವನ್ನು ನೀವು ಮಾರಿದಿರಾ?" ಎಂದು ಆ ಹೆಂಡತಿಯು ಸಂತಾಪಾತಿಶಯದಿಂದ ಗಂಡನನ್ನು ಬಡಿಯಹೋದವಳಂತೆ ಉದ್ಗಾರ ತೆಗೆದಳು.

"ಮಾರಿದೆನು; ಅದರಲ್ಲೇನಾಯಿತು? ಕೆಲಸಬಿದ್ದಾಗ ನೀವು ನನ್ನ ರಥದಲ್ಲಿ ಕುಳಿತುಕೊಂಡು ಹೋಗಬಹುದು."

"ನನ್ನ ಕೆಲಸದ ಪಂಚಾಯತಿ ಮಾಡಬೇಡಿರಿ. ನನ್ನ ರಥವನ್ನು ಮಾರಲಿಕ್ಕೆ ನಿಮಗೆ ಅಧಿಕಾರವೇನು?"

ವಿಚಾರವಂತನಾದ ದಿವಾಕರರಾಯನು ಹೆಂಡತಿಯ ಮೂರ್ಖತನವನ್ನು ಕಂಡು ನಕ್ಕು "ಪ್ರಿಯೆ, ನನಗೆ ಅಧಿಕಾರವಿತ್ತೆಂದೇ ನಾನು ಆ ರಥವನ್ನು ಮಾರಿದೆನು. ಬೇಕಾದರೆ ನೀನು ವಕೀಲರನ್ನು ಕೇಳಿಕೊಂಡು ಬಾ!" ಎಂದು ಕಿಂಚಿತ್ತಾದರೂ ವ್ಯಗ್ರನಾಗದೆ ನುಡಿದನು.

" ಕೇಳುವ ಪ್ರಸಂಗ ಬಂದಾಗ ಕೇಳುವೆನಂತೆ! ಆದರೆ ಈಗ ರಥ ವನ್ನು ಮಾರುವಂಥಾದ್ದೇನಾಗಿತ್ತು ? "

" ಮಾರುವಂಥದೇನೂ ಆಗಿಲ್ಲ. ದೇವರ ಕೃಪೆಯಿಂದ ಇನ್ನೂ ಹತ್ತು ರಥಗಳನ್ನು ಕೊಳ್ಳಬಹುದು. ಸದ್ಯಕ್ಕೆ ಆ ರಥವನ್ನು ನಾನು ನಿನ್ನ ಹಿತಕ್ಕಾಗಿ ಮಾರಿದೆನು. ಸಮಯಾಸಮಯಗಳ ವಿಚಾರವನ್ನು ಮಾಡದೆ, ಹೆಂಡತಿ ಯಾದ ನೀನು ನನ್ನ ಆಜ್ಞೆಯನ್ನು ಕೇಳದೆ ರಥದಲ್ಲಿ ಕುಳಿತು ನಿನ್ನೆ ನಾಟಕಕ್ಕೆ ಹೋದದ್ದು ನನಗೆ ರುಚಿಸಲಿಲ್ಲ. ವಲ್ಲರೀ, ಸುಶಿಕ್ಷಿತಳಾದ ನಿನಗೆ ನಾನು ಕೊಟ್ಟ ಸ್ವಾತಂತ್ರ್ಯದ ಉಪಭೋಗವನ್ನು ಮಾಡಲು ಬರಲಿಲ್ಲ. ಕೆಲವು ಮಾತಿನ ಅನುಭವವು ನಿನಗೆ ಚನ್ನಾಗಿ ಬರುವವರೆಗೆ ನಿನ್ನ ಸ್ವಾತಂತ್ರ್ಯ ದಲ್ಲಿಯ ಅನೇಕಾಂಶಗಳನ್ನು ಸೆಳಕೊಳ್ಳುವ ವಿಚಾರದಲ್ಲಿ ನಾನಿದ್ದೇನೆ. "

ಪ್ರೇಮವಲ್ಲರಿಯು ಹೆಮ್ಮೆಯಿಂದ ಸೆಟೆದು ನಿಂತು " ಓಹೋ! ಬಾಳ ಗಂಗಾಧರ ಟಿಳಕರೇ ನೀವು! ನನ್ನನ್ನು ಪ್ರೀತಿಸುತ್ತೇನೆಂದು ಬಾಯಿಯಿಂದ ಒಣ ಮಾತುಗಳನ್ನಾಡುವಿರಿ. ನಿಮ್ಮ ಕೃತಿಗಳನ್ನು ನೋಡಲಾಗಿ ಅವು ನಿಃಸಂದೇಹವಾಗಿ ವಿಪರೀತವಾಗಿವೆ. ನಿಮ್ಮಂಥ ಹುಳುಕುಬುದ್ಧಿಯವರ ವಿಚಾರಗಳಿಂದ ಹಾನಿಯೇ ಹೊರತಾಗಿ ಸುಪರಿಣಾಮವಾಗಲಾರದು. ನೀವು ನನ್ನಿಂದ ಬೇರೆ ಇರಬೇಕಾಗುವದು ! " ಎಂದು ನುಡಿದು ಅವಳು ತನ್ನ ವಕ್ತೃತ್ವವನ್ನು ಪ್ರಕಟಗೊಳಿಸಿದಳು.

"ಸುಮ್ಮನಿರು ವಲ್ಲರಿ! ಇಂಥ ಅಪ್ರಶಸ್ತವಾದ ಅಲಂಕಾರಿಕ ಭಾಷೆಯು ನನಗೆ ಸೇರುವದಿಲ್ಲ. ನಾನು ಈ ಮನೆಯ ಸ್ವಾಮಿಯು. ಇಲ್ಲಿಯ ಸಕಲ ವಸ್ತುಗಳ ವಿನಿಯೋಗವನ್ನು ನಾನು ನನ್ನ ಇಚ್ಛೆಗೆ ಬಂದಂತೆ ಮಾಡಬಲ್ಲೆನು. ಹಿಂದೂ ಧರ್ಮಶಾಸ್ತ್ರದ ಮೇರೆಗೆ ಹೆಂಡತಿಯಾದ ನಿನಗೆ ಇಲ್ಲಿ ಯಾವ ಪ್ರಕಾರದ ಸ್ವಾತಂತ್ರ್ಯವೂ ಇಲ್ಲ. " ಎಂದು ದಿವಾಕರನು ಗದ್ದರಿಸಿ ನುಡಿದನು.

ಕ್ರೋಧಾತಿಶಯದಿಂದ ಪ್ರೇಮವಲ್ಲರಿಯದ ಮುಖವು ಕೆಂಪಗೆ ಕೆಂಜಗ ವಾಯಿತು. ಶಿರ ಬಿಗಿದು ಒತ್ತಾಯದ ಕಂಬನಿಗಳು ಉದುರಿದವು. ಮತ್ತೊಂದು ಮಾತಾಡದೆ ಅವಳು ರಭಸದಿಂದ ಹೊರಬಿದ್ದು ಬಂದು ತನ್ನ ಕೋಣೆಗೆ ಹೋದಳು. ಕುರ್ಚಿಯ ಮೇಲೆ ಕುಳಿತು ಸಮಾಧಾನವಾಗಲಿಲ್ಲ.

ಎದ್ದು ಮಂಚದ ಮೇಲಿನ ಹಾಸಿಗೆಯನ್ನು ರುಳಿಸಿ ಅವಳು ಬಿದ್ದುಕೊಂಡಳು. ಆದರೂ ಸಮಾಧಾನವಿಲ್ಲ. ಪತಿಯು ಹೀಗೇಕೆ ತನ್ನ ವಿಷಯವಾಗಿ ದ್ರೋಹ ಮಾಡಿದನೆಂಬದು ಆವಳಿಗೆ ಚನ್ನಾಗಿ ತಿಳಿಯಲಿಲ್ಲ. ಬಿಕ್ಕಿಬಿಕ್ಕಿಸಿ ಅತ್ತಳು. ಆದರಿಂದ ಜೀವಕ್ಕೆ ತುಸು ಸಮಾಧಾನವೆನಿಸಿದರೂ ತನ್ನ ಸ್ವಾತಂತ್ರ್ಯಕ್ಕೆ ಹೀನತೆ ಬಂದಿತಲ್ಲಾ ಎಂಬ ವ್ಯಸನವು ಅವಳನ್ನು ಅಧಿಕವಾಗಿ ಬಾಧಿಸಿತು. "ನಾನು ಹೆಂಗಸಾಗಿದ್ದೆಯೋ ತಪ್ಪೋ, ಅವನು ಪುರುಷನಾಗಿರುವನೆಂಬ ಗರ್ವವು ಹೆಚ್ಚಾಯಿತೋ" ಎಂದು ನುಡಿದು ಪ್ರೇಮವಲ್ಲರಿಯು ತನ್ನ ದೈವ ವನ್ನು ನಿಂದಿಸಿದಳು. ಮತ್ತೂ ಅವಳ ಕಣ್ಣಿಗೆ ನೀರು ಬಂದಿತು; ಮತ್ತಿಷ್ಟು ಸಮಾಧಾನವಾಯಿತು. "ಎಂದಿಲ್ಲದೆ ಅವರು ಹೀಗೇಕೆ ಇಂದು ಮಾಡಿ ದ್ದಾರು? ನನ್ನಲ್ಲಿಯಾದರೂ ದೋಷವೇನು? ಮಿಸ್ ಸೋರಾಬಜೀ, ಮಿಸೆಸ್ ಫರ್ನಾಂಡೀಜ ಮುಂತಾದ ಸಖಿಯರು ನಾಟಕಕ್ಕೆ ಹೋಗೋ ಣೆಂದು ಕ್ಲಪ್ತಿಯನ್ನು ತೆಗೆದದ್ದರಿಂದ ಹೋದೆನು. ಹೋದರೇನಾಯಿತು? ಆವರ ಕಣ್ಣುಗಳನ್ನು ಬೇರೆ ನಾನು ತೆಗೆದುಕೊಂಡು ಹೋಗಿ ಅವುಗಳಲ್ಲಿ ಜಾಗರಣದ ಪೀಡೆಯನ್ನು ಹಾಕಲಿಲ್ಲವಷ್ಟೇ?" ಎಂದು ತನ್ನೊಳಗೆ ತಾನೇ ಪ್ರಶ್ನೆ ಮಾಡಿದಳು. ಮತ್ತೇನೋ ಒಂದು ವಿಚಾರವು ಹುಟ್ಟಿ ಅವಳು ಲಜ್ಜಾಕ್ರಾಂತಳಾಗಿ ನಕ್ಕಳು. "ಅಂದರೇನಾಯಿತು? ಒಂದು ದಿವಸ ನಾಟಕಕ್ಕೆ ಹೋಗದಷ್ಟು ಪರಾಧೀನತೆಯೇನು?" ಎಂದು ವಾದಿಸಿದಳು. ಹೊರಗೆ ಬಂದು ನಡುಮನೆಯಲ್ಲಿ ವಿಮನಸ್ಕಳಾಗಿ ಅಡ್ಡಾಡಿದಳು. ಅಲ್ಲಿಯೂ ಸೊಗಸಾಗಲಿಲ್ಲ. ಮತ್ತೆ ಬಂದು ಹಾಸಿಗೆಯ ಮೇಲೆ ಶಾಲು ಮುಸುಗಿಟ್ಟು ಕೊಂಡು ಮಲಗಿದಳು. ಸಮಾಧಾನವೆಲ್ಲಿ! ವಿಷದ ಗಾಳಿ ಬೀಸುತ್ತಿರುವ ದೇನು ಈ ದಿವಸ? ಎಂದು ಅವಳು ಮುಸುಗು ತೆರೆದು ಗಾಳೀ ಹಾಕಿ ಕೊಂಡಳು. "ಅವರು ನನ್ನನ್ನು ಸಮಾಧಾನಗೊಳಿಸಲು ಇಲ್ಲಿ ಬಂದಾ ದರೂ ಬರಲಿ! ಹೇಗೆ ಮಾಡುವೆನೋ ತಿಳಿದೀತು!" ಎಂದು ಚಿಂತಿಸಿ ಪತಿಯು ಬಂದದ್ದೇ ಆದರೆ ಕೋಪನಿರಾಕರಣದ ಕಟುವಚನಗಳ ಸಮ್ಮೇಲನ ವನ್ನು ಹೇಗೆ ಸಾಧಿಸತಕ್ಕದ್ದೆಂಬ ವಿಚಾರದಲ್ಲಿ ತೊಡಗಿದಳು. ಆದರೇನು? ಅವಳು ಯೋಚಿಸಿದಂತೆ ಪತಿಯು ಬಂದು ತಾನೊಡ್ಡಿದ ಬಲೆಯಲ್ಲಿ ಬಿದ್ದರೆ ಅದೆಲ್ಲ ಸರಿಯಷ್ಟೆ? ಅವನು ಬರಲೇ ಇಲ್ಲ. ಅರ್ಧ ತಾಸು, ತಾಸು,

ಎರಡು ತಾಸು ಹಾದೀ ನೋಡಿದರೂ ಆ ಧೂರ್ತನು ಅತ್ತ ಹಣಿಯಿಕ್ಕಿ ನೋಡಲಿಲ್ಲ. ಆ ಕೋಪನಗೆ ಇಮ್ಮಡಿಯಾದ ಸಂತಾಪವಾಯಿತು. ಸ್ತ್ರೀಯರ ಬ್ರಹ್ಮಾಸ್ತ್ರವೇ ಪ್ರಯೋಜನವಿಲ್ಲದೆ ಹಾಗೆಯೇ ಉಳಿಯಿತು. ಕಡೆಗೆ ನಿರಾಶೆಯಿಂದ ಅವಳು ಚನ್ನಾಗಿ ಮುಸುಗಿಟ್ಟುಕೊಂಡು ಮಲಗಿ ಬಿಟ್ಟಳು. ಕೆಲಹೊತ್ತಿನ ಮೇಲೆ ಅನ್ನಪೂರ್ಣಾಬಾಯಿಯು (ಅಡಿಗೆಯವಳು) ಪ್ರೇಮವಲ್ಲರಿಯು ಮಲಗಿದ್ದ ಸ್ಥಳಕ್ಕೆ ಬಂದು "ಬಾಯೀಸಾಹೇಬರೆ, ಭೋಜನಕ್ಕೆ ದಯ ಮಾಡುವದಿಲ್ಲವೆ ?" ಎಂದು ಕೇಳಿದಳು.

"ಅವರ ಭೋಜನವಾಯಿತೇನು ?" ಎಂದು ಪ್ರೇಮವಲ್ಲರಿಯು ಬಹು ದೀನಸ್ವರದಲ್ಲಿ ಕೇಳಿದಳು.

"ರಾಯರ ಗೊಡವೆ ನಿಮಗೇಕೆ ? ನೀವು ನಿಮ್ಮ ಭೋಜನವನ್ನು ತೀರಿಸಿಕೊಂಡರಲ್ಲವೆ ? ಎರಡು ತಾಸು ರಾತ್ರಿಯಾಗಿ ಹೋಯಿತು !"

"ಪತಿಗಳಾದವರ ಅಧಿಕಾರವು ಅವರಿಗೆ ಸಲ್ಲಲಿ ! ಅವರ ಊಟ ತೀರಿಹೋದಮೇಲೆ ನಾನು ಉಣ್ಣುವೆನಂತೆ !" ಎಂದು ಆಜ್ಞಾಧಾರಕಳಾದ ಆ ಪತ್ನಿಯು ಆಕ್ಕಸದಿಂದ ನುಡಿದಳು.

"ರಾಯರ ಹಾದಿಯನ್ನು ನೀವು ನೋಡಬೇಕಾಗಿಲ್ಲ. ನಿಮ್ಮ ಅಡಿಗೆ ಬೇರೆಯಾಗಿದೆ, ರಾಯರ ಅಡಿಗೆ ಬೇರೆಯಾಗಿದೆ. ರಾಯರು ಮೂರು ತಾಸು ರಾತ್ರಿಯ ಮೇಲೆ ಮನೆಗೆ ಬರುವರಂತೆ. ಇಂದೇಕೋ ಕಾರ್ಯ ಗಳು ವಿಪರೀತವಾಗಿ ನಡೆದಿರುತ್ತವೆ !" ಎಂದು ಅನ್ನಪೂರ್ಣೆಯು ನುಡಿದಳು.

"ಅನ್ನಪೂರ್ಣಾಬಾಯಿ, ನನ್ನ ಅಡಿಗೆಯೇ ಬೇರೆಯಾಗಿದ್ದ ಪಕ್ಷದಲ್ಲಿ ಅದನ್ನು ನಾನು ಬೇಕಾದಾಗ ಉಣ್ಣುವೆನಂತೆ ! ಮನೆಯ ಯಜಮಾನರ ಊಟವಾದ ಬಳಿಕ ನಿಮ್ಮ ಫಲಾಹಾರದೊಂದಿಗೆ ನಾನು ಊಟಕ್ಕೆ ಬರು ವೆನು. ಈಗ ನನಗೆ ತಲೆಸೂಲೆ ಬಹಳಾಗಿದೆ; ಸ್ವಲ್ಪ ಚಹ ಮಾಡಿ ತನ್ನಿರಿ."

ರಾತ್ರಿಯ ಹತ್ತು ಗಂಟೆಗೆ ಮತ್ತೆ ಅನ್ನಪೂರ್ಣಾಬಾಯಿಯು ತನ್ನ ಯಜ ಮಾನತಿಯನ್ನು ಊಟಕ್ಕೆ ಎಬ್ಬಿಸಿದಳು. ಪ್ರೇಮವಲ್ಲರಿಯು ಅನಿರ್ವಾಹಕ್ಕಾಗಿ ಎದ್ದು ಭೋಜನಶಾಲೆಗೆ ಬಂದಳು. ಹಾಗೂ ಹೀಗೂ ಕೈಯಂಜಲ ಬಾಯಂ ಜಲ ಮಾಡಿ ಅವಳು ಕೈದೊಳೆದು ಮಂಚಕ್ಕೆ ಬಂದಳು. ಎಷ್ಟಾದರೂ ನವ ತರುಣಿಯೇ ಅವಳು ! ತಾಂಬೂಲಸಮಾರಂಭಕ್ಕೆ ಪತಿಯು ಬಳಿಯಲ್ಲಿಲ್ಲ

ವಾದ್ದರಿಂದ ಅದು ಅವಳಿಗೆ ಸೊಗಸಾಗಲಿಲ್ಲ. ಉದ್ದಡ್ಡಗಲವಾಗಿರುವ ಆ ಪಟ್ಟೆಮಂಚದ ಮೇಲೆ ತಾನೊಬ್ಬಳೇ ಮಲಗಿದ ಆ ತರುಣಿಗೆ ಭಣಭಣವಾಯಿತು. ಪತಿಗೆ ಶರಣುಹೋಗಿ ಇಂದು ತನ್ನ ಮೇಲೆ ಇಷ್ಟೇಕೆ ಅವಕೃಪೆಯೆಂದು ಕೇಳಬೇಕೆಂದು ಅವಳೊಮ್ಮೆ ಆಲೋಚಿಸಿದಳು. ಆದರೆ ಹಾಗೆ ಮಾಡುವದು ಸ್ವಾಭಿಮಾನಕ್ಕೆ ಹಾನಿಯೆಂದು ಅಹಂಕಾರವು ಉದ್ರೇಕದಿಂದ ಬೋಧಿಸಿತು. ಆ ಮಗ್ಗಲೊಮ್ಮೆ ಈ ಮಗ್ಗಲೊಮ್ಮೆ ಹಾಸಿಗೆಯ ಮೇಲೆ ಹೊರಳಾಡಿ ಆ ಚಂಚಲೆಯು ಬೇಸತ್ತು ಹೋದಳು. ಏನು ಮಾಡಿದರೂ ಕಣ್ಣಿಗೆ ಕಣ್ಣು ಹತ್ತಲೊಲ್ಲದು. ಮೆಲ್ಲನೆ ಎದ್ದು ಅವಳು ಅನ್ನಪೂರ್ಣೆಯಿದ್ದ ನಡುಮನೆಗೆ ಬಂದಳು.

ಅಷ್ಟು ರಾತ್ರಿಯಾಗಿದ್ದರೂ ಅನ್ನಪೂರ್ಣಾಬಾಯಿಯು ದೀಪದ ಬೆಳಕಿಗೆ ಕುಳಿತು ವಾಣೀವಿಲಾಸ ಮಹಾಭಾರತದ ಆದಿಪರ್ವದಲ್ಲಿಯ ಕೆಲವೊಂದು ಪ್ರಕರಣವನ್ನು ಓದುತ್ತ ಕುಳಿತಿದ್ದಳು. ಅಡಿಗೆಯವಳೆಂದರೆ ಅನ್ನಪೂರ್ಣೆಯು ಕುಲಹೀನೆಯಲ್ಲ. ಸಂಭಾವಿತನಾದ ಸದ್ಗೃಹಸ್ಥನ ಹೆಂಡತಿಯಾಗಿದ್ದಳವಳು. ಅವಳ ಪತಿಗೆ ತಿಂಗಳಾ ನೂರು ರೂಪಾಯಿಗಳ ಸಂಬಳವಿದ್ದರೂ ಅತ್ತವ್ಯಯನಾದ (ಕನ್ನಡ ಐದನೆಯ ಪುಸ್ತಕ ನೋಡಿರಿ.) ಆ ತರುಣ ಗೃಹಸ್ಥನ ಬಳಿಯಲ್ಲಿ ಸಂಚಿತಾರ್ಥವೇನೂ ಇದ್ದಿಲ್ಲ. ಏರತಕ್ಕವನಾದ ಆ ಮನುಷ್ಯನು ಮುಂದೇನು ಸಂಚಯಮಾಡುತ್ತಿದ್ದನೋ ಬಿಡುತ್ತಿದ್ದನೋ, ಆಕಸ್ಮಾತ್ತಾಗಿ ವಿಷಮಜ್ವರದಿಂದ ತೀರಿಕೊಂಡು ಹೆಂಡತಿಯನ್ನು ಗತಿಗೇಡಿಯನ್ನಾಗಿ ಮಾಡಿ ಕೂಡಿಸಿದ್ದನು. ಅನ್ನಪೂರ್ಣೆಯು ಶಾಂತಸ್ವಭಾವದವಳೂ ಸುಶಿಕ್ಷಿತಳೂ ಅಲ್ಪಸಂತೋಷದವಳೂ ಆಗಿದ್ದರಿಂದ ಆ ಸುಶೀಲೆಯು ದಿವಾಕರರಾಯನಂಥವನಲ್ಲಿ ಆಶ್ರಯವನ್ನು ಹೊಂದಿ ದೇವರು ಇಟ್ಟಂತೆ ಇದ್ದು ಸಮಾಧಾನದಿಂದಿದ್ದಳು. ಪ್ರೇಮವಲ್ಲರಿಯು ಹಾಗೆ ಆಕಸ್ಮಾತ್ತಾಗಿ ತನ್ನೆಡೆಗೆ ಬರುವದನ್ನು ಕಂಡು ಅನ್ನಪೂರ್ಣೆಯು ಚಟ್ಟನೆ ಎದ್ದುನಿಂತಳು.

"ಹಾಗೆ ಎದ್ದಿರೇಕೆ? ಕುಳಿತುಕೊಳ್ಳಿರಿ" ಎಂದು ಪ್ರೇಮವಲ್ಲರಿಯು ಚಾಪೆಯ ಮೇಲೆ ಕುಳಿತುಕೊಂಡು ಅನ್ನಪೂರ್ಣೆಯನ್ನಾದರೂ ಕುಳ್ಳಿರಿಸಿಕೊಂಡು "ಅನ್ನಪೂರ್ಣಾಬಾಯಿ, ಇಂದೇಕೋ ನನ್ನ ಜೀವಕ್ಕೆ ಸಮಾಧಾನವಿಲ್ಲದ್ದರಿಂದ ನಿಮ್ಮೊಡನೆ ನಾಲ್ಕು ಮಾತಾಡಿ ಹೋಗಬೇಕೆಂದು ಬಂದಿದ್ದೇನೆ"

ಎಂದು ವಿನಯದಿಂದ ನುಡಿದಳು.

" ಅಹುದು ! ಇಂದೇಕೆ ನಿಮ್ಮಿಬ್ಬರ ನಡುವೆ ಇಂಥ ಚಮತ್ಕಾರವಾದ ರಸಕಸಿಯು ? ಮಧ್ಯಾಹ್ನದಲ್ಲಿಯೇ ಕೇಳಬೇಕೆಂಬ ಮನಸ್ಸಾಗಿತ್ತು. ಆದರೆ 'ಗಂಡಹೆಂಡರ ನಡುವಿನ ಜಗಳ ಜಗಳವಲ್ಲ, ಹೆಂಡೆಮುತ್ತಿನ ಹಾರ ಪಾಶವಲ್ಲ' ವೆಂದು ತಿಳಿದು ಸುಮ್ಮನಿದ್ದೆನು." ಎಂದು ಅನ್ನಪೂರ್ಣೆಯು ಕೆನ್ನೆಯಲ್ಲಿಯೇ ನಕ್ಕು ನುಡಿದಳು.

" ಏನು ಮಣ್ಣೋ ! ಅವರಿಂದಲೇ ಕಾಲುಕೆದರಿ ಜಗಳ ತೆಗೆಯಲಾಯಿತು. ಅದಿರಲಿ ಅನ್ನಪೂರ್ಣಾಬಾಯಿ, ಪತಿಯನ್ನು ಯಾವಾಗಲೂ ಸಂಪೂರ್ಣವಾದ ಸಂತೋಷದಲ್ಲಿಡುವದು ಹೆಂಡತಿಯ ಕೈಯಲ್ಲಿಯ ಮಾತಾಗಿರುವದೇನು ?"

ಈ ಮಾತು ಕೇಳಿ ಅನ್ನಪೂರ್ಣೆಯ ಕಣ್ಣುಗಳಲ್ಲಿ ಅಶ್ರುಬಿಂದುಗಳೊತ್ತಿಬಂದವು. ಪತಿಯನ್ನು ಬೇಕಾದ ಹಾಗೆ ಸಂತೋಷಗೊಳಿಸಬಲ್ಲ ಜಾಣೆಯಾದ ಆ ಸುಶೀಲೆಯ ಗಂಡನು ಸದಾ ಸಂತುಷ್ಟನಾಗಿದ್ದ ಮಾತು ನೆನಪಾಗಿ ಅವಳಿಗೆ ವ್ಯಸನವಾಯಿತು. ಆದರೂ ಅವಳು ಬೇಗನೆ ಸಮಾಧಾನವನ್ನು ತಳೆದು ಕಣ್ಣೀರೊರಸಿಕೊಂಡು " ಇರಬಹುದು; ನಾನೇನು ಬಲ್ಲೆ ? ಆದರೂ ಹೆಂಡತಿಯನ್ನು ಸದಾ ಸಂತೋಷದಲ್ಲಿಡುವೆನೆಂಬ ಪತಿಯ ಪ್ರಯತ್ನಗಳಾದರೂ ಸರ್ವಥಾ ಸಫಲವಾಗಿರುವವೇನು ?" ಎಂದು ಆ ಚತುರೆಯಾದ ವಿಧವೆಯು ನಿಪುಣವಾದ ಪ್ರಶ್ನೆ ಮಾಡಿದಳು.

ಈ ಮಾತು ಪ್ರೇಮವಲ್ಲರಿಯ ಮನಸ್ಸಿಗೆ ಬಾಣ ಬಡಿದಂತೆ ನಟ್ಟಿತು. ಅವಳು ಇಲ್ಲದ ನಗೆ ತಾಳಿ " ನೀವು ಅವರ ಪಕ್ಷವನ್ನು ಹಿಡಿದು ಹೀಗೆ ಮಾತಾಡುವಿರಿ. ಅವರು ನನ್ನನ್ನು ಸಂತೋಷಗೊಳಿಸಲು ಪ್ರಯತ್ನ ಮಾಡುತ್ತಿರುವದು ಸರಿ. ಆದರೆ ಅವರ ಪ್ರಯತ್ನಗಳು ಸಫಲವಾಗಿಲ್ಲವೆಂದು ಹೇಗೆ ಹೇಳುವಿರಿ ?" ಎಂದು ಆಶ್ಚರ್ಯತೆಯಿಂದ ಕೇಳಿದಳು.

" ಹೇಳಿದರೆ ಸಣ್ಣ ಬಾಯಲ್ಲಿ ದೊಡ್ಡ ತುತ್ತು ತೆಗೆದುಕೊಂಡಂತಾದೀತು ! ಆದರೂ ಹೇಳುತ್ತೇನೆ. ರಾಯರು ತಮ್ಮ ಸಂಪತ್ತನ್ನೆಲ್ಲ ನಿಮಗೋಸ್ಕರವಾಗಿ ಕಾದಿಟ್ಟಿರುವರೋ ಎಂಬಂತೆ- ದುಡ್ಡಿನ ಮೋರೆಯನ್ನು ಯತ್ಕಿಂಚಿತ್ತಾದರೂ ನೋಡದೆ ನೀವು ಬೇಡಿ ಬೇಡಿದ್ದನ್ನೆಲ್ಲ ಹಿಡುಕೊಂಡು

ನಿಂತಿರುವರು. ಪರದಾರ ಸೋದರರಾದ ಅವರಿಗೆ ಯಾರೂ ಹೆಸರಿಡುವಂತಿಲ್ಲ. ಇವೆರಡೂ ಮಾತುಗಳಲ್ಲಿ ನೀವು ವಾದಿಸಬಂದಲ್ಲಿ ನಾನು ಕೇಳಿದವಳಲ್ಲ. ಹೀಗಿದ್ದು ನಿಮ್ಮ ಸಂತೋಷಕ್ಕೇನು ಕಡಿಮೆಯಾಯಿತೆಂದು ನೀವು ಪತಿಯ ಆಜ್ಞೆಯನ್ನು ಅಪ್ಪಿತಪ್ಪಿಯಾದರೂ ಉಲ್ಲಂಘಿಸುವಿರಿ ? ''

'' ನಿನ್ನೆ ನಾನು ನಾಟಕಕ್ಕೆ ಹೋಗಿದ್ದೊಂದೆಯೇ ಸರಿ. ಸಖೀಜನರ ಮನಸ್ಸು ಮುರಿಯಲರಿಯದೆ ಹೋದೆನು. ಏನಾಯಿತದರಲ್ಲಿ ? ''

'' ನಾಟಕದ ಛಂದಕ್ಕಾಗಿ ಹೋದಿರಿ. ಹೆಚ್ಚು ಮಾತಾಡಿದ್ದಕ್ಕೆ ಕ್ಷಮಿಸಿರಿ. ಪತಿಯಾಜ್ಞೆಯನ್ನು ಮುರಿದು ಹೋದಿರಿ. ಇದರಲ್ಲಿ ಪತಿಯ ಸಂತೋಷಕ್ಕಿಂತಲೂ ನಿಮ್ಮ ಸಂತೋಷವು ಹೆಚ್ಚಾಗಿ ತೋರಿತೋ ಇಲ್ಲವೊ ? ವಸ್ತುತಃ, ಶಾಸ್ತ್ರತಃ, ನಿಮ್ಮ ಒಡೆಯರೂ ಈ ಮನೆಯ ಸಂಪತ್ತಿನ ಒಡೆಯರೂ ಆದ ನಮ್ಮರಾಯರು, ನಿಮ್ಮ ಸಂತೋಷಕ್ಕೆ ವಿರುದ್ಧವಾಗಿದ್ದಂಥದೊಂದು ಕೆಲಸ ಮಾಡಿ ತಾವು ಸಂತೋಷಪಟ್ಟಿರುವದನ್ನು ನೀವು ಎಂದಾದರೂ ಕಂಡಿರುವಿರೋ ? ''

ಅನ್ನಪೂರ್ಣೆಯು ಆಡಿದ ಮಾತುಗಳಲ್ಲಿ ಯಾವದನ್ನಾದರೂ ತೆಗೆದು ಹಾಕುವಂತೆ ಇದ್ದಿಲ್ಲ. ಪ್ರೇಮವಲ್ಲರಿಯು ನಿರುತ್ತರಳಾಗಿ ಹುಚ್ಚು ಹಿಡಿದವರಂತೆ ಕುಳಿತಳು. '' ಅವರು ನನ್ನಲ್ಲಿ ಹೆಚ್ಚಾದ ಪ್ರೇಮವನ್ನು ತಳೆದಿರುವರೆಂಬ ಮಾತಿನಲ್ಲಿ ತಿಲಮಾತ್ರವಾದರೂ ವ್ಯತ್ಯಾಸದ ದೋಷವು ನನಗೆ ತೋರಲೊಲ್ಲದು. ನನ್ನ ಅಭಿಲಾಷೆಗಳ ಪೂರ್ತಿಗಾಗಿ ಅವರು ತಮ್ಮ ದುಡ್ಡು ಸೂರೆ ಮಾಡುತ್ತಿರುವದಾದರೂ ನಿಜವೇ. ಇನ್ನು ನಾನಾದರೂ ಮಾಡಿದ ತಪ್ಪೇನು?'' ಎಂದು ತನ್ನೊಳಗೆ ಚಿಂತಿಸುತ್ತಿರುವಾಗ ಅವಳ ವಿಚಾರಸರಣಿಯು ಅಲ್ಲಿಯೇ ನಿಂತಿತು. ' ನಾನಾದರೂ ಮಾಡಿದ ತಪ್ಪೇನು ? ' ಎಂಬ ಪ್ರಶ್ನವನ್ನು ಅವಳು ತನ್ನ ಮನಸ್ಸಿಗೆ ಕೇಳಿದಾಗ ' ನಿರ್ದೋಷಿ ' ಎಂಬ ಉತ್ತರ ಬರಲೊಲ್ಲದು.

'' ಅನ್ನಪೂರ್ಣಾಬಾಯಿ, ಅವರಿಗೊಂದು ಮಾತಿನಿಂದ ಸಂತೋಷವಿಲ್ಲವೆಂದು ತಿಳಿಯಿರಿ. ಅದೇ ಮಾತಿನಿಂದ ನನಗೆ ಸಂತೋಷವಿದ್ದರೆ ಅದನ್ನು ನಾನೇಕೆ ಮಾಡಬಾರದು ? ಮಾಡಿದರೆ ತಪ್ಪೇನು ? '' ಎಂದು ಪ್ರೇಮವಲ್ಲರಿಯ ವಿಚಾರ ಸಮ್ಮೂಢೆಯಾಗಿ ಕೇಳಿದಳು.

" ನೀವು ನಾಟಕಕ್ಕೆ ಹೋದ ಪ್ರಶ್ನವನ್ನೇ ತೆಗೆದುಕೊಳ್ಳೋಣ. ನೀವು ಹೋಗುವದರಿಂದ ರಾಯರಿಗೆ ಸಂತೋಷವೋ ಅಸಂತೋಷವೋ ನಮಗೆ ತಿಳಿದಿಲ್ಲವೆಂದು ಕಲ್ಪಿಸಿರಿ. ಅಂಥ ಸಮಯದಲ್ಲಿ ನಾಟಕಕ್ಕೆ ಹೋಗುವದು ಉಚಿತವೊ ಅನುಚಿತವೊ ಎಂಬದನ್ನು ನಾವು ನೋಡಿಕೊಳ್ಳಬೇಕಲ್ಲವೆ ? ಸದಸದ್ವಿವೇಕದಿಂದ ನೋಡಲಾಗಿ ಅದು ಅನುಚಿತವೆಂದು ಕಂಡಲ್ಲಿ ನಾಟಕಕ್ಕೆ ಹೋಗುವ ವಿಚಾರವನ್ನು ಬಿಟ್ಟೇಬಿಡಬೇಕಲ್ಲವೆ ? ಏನು, ಇದಕ್ಕೂ ನಿಮ್ಮಲ್ಲಿ ವಾದವಿರುವದೊ ? "

" ಇದಕ್ಕೇತರ ವಾದ ಅನ್ನಪೂರ್ಣಾಬಾಯಿ ? "

" ಒಳಿತಾಗಿ ಮಾತಾಡಿದಿರಿ ! ಇನ್ನು ನಾಟಕಕ್ಕೆ ಹೋದರೆ ಚಿಂತೆಯಿಲ್ಲವೆಂದು ವಿವೇಕವು ಹೇಳಿದ್ದಾದಲ್ಲಿ ಹೋಗಬಹುದು. ಅಡ್ಡೀ ಇಲ್ಲ. ' ನಾಟಕಕ್ಕೆ ಹೋಗಬಹುದು, ಅಥವಾ ಹೋಗುವದು ಅವಶ್ಯವಾಗಿರುವದು ' ಎಂದು ತೋರಿದ ಪ್ರಸಂಗದಲ್ಲಿ ಕೂಡ ನಿಮ್ಮ ಪತಿರಾಯರು ನಿಷ್ಕಾರಣವಾಗಿ ಆಗ್ರಹತೊಟ್ಟು ನಿಮಗೆ ಹೋಗಬೇಡವೆಂದು ಆಜ್ಞಾಪಿಸಿದರೆಂದು ಕಲ್ಪಿಸೋಣ. ಆಗ ನೀವು ಹೋಗುವವರೋ ಹೋಗದಿರುವವರೋ ? " ಎಂಬದೊಂದು ದೊಡ್ಡ ಮುಂಡಿಗೆಯನ್ನು ಅನ್ನಪೂರ್ಣೆಯು ಪ್ರೇಮವಲ್ಲರಿಯ ಮುಂದೆ ಚೆಲ್ಲಿದಳು.

" ನಾನೇನು ಹೇಳಲಿ ? ಹೋದರೆ ಏನಾಗುವದು ? " ಎಂದು ಪ್ರೇಮವಲ್ಲರಿಯು ಮೂಢೆಯಂತೆ ಕೇಳಿದಳು.

" ನಿಮ್ಮ ಸಂತೋಷಕ್ಕಾಗಿ ನೀವು ಅನ್ಯರಿಗೆ ಅಸಂತೋಷವನ್ನು ಉಂಟುಮಾಡಿದರೂ ಚಿಂತೆಯಿಲ್ಲವೆನ್ನುವಿರಾ ? ಆ ಅನ್ಯರೆಂದರೆ ಪ್ರತ್ಯಕ್ಷ ನಿಮ್ಮ ಪ್ರಾಣೇಶ್ವರರು. ನಿಮ್ಮ ಹಿತಕ್ಕಾಗಿಯೇ ತಾವು ಹುಟ್ಟಿರುವವರಂತೆ ವರ್ತಿಸಿ ನಿಮ್ಮ ಹಿತವಾದದ್ದು ಕಂಡು ತಾವು ಸಂತೋಷಪಡುತ್ತಿರುವ ಪ್ರಾಣೇಶ್ವರರು ಮತ್ತೆ ! "

" ಅನ್ನಪೂರ್ಣಾಬಾಯಿ, ನಿಮ್ಮಲ್ಲಿ ಮೆಸ್ಮೆರಿಝುಮ್ ಇಲ್ಲವೆ ಹಿಪ್ನಾಟಿಝುಮ್ ಎಂಬ ವಿದ್ಯೆ ಬೇರೆ ಇಲ್ಲವಷ್ಟೆ ? ಏಕೋ ಈ ಸಮಯದಲ್ಲಿ ನೀವು ಅಂದದ್ದಕ್ಕೆ 'ಹೂಂ' ಎನ್ನುವ ಬುದ್ಧಿ ನನಗಾಗಿದೆ " ಎಂದು ಪ್ರೇಮವಲ್ಲರಿಯು ಬಹು ನಮ್ರಳಾಗಿ ನುಡಿದಳು.

ಅನ್ನಪೂರ್ಣೆಯು ನಕ್ಕು "ಎಲ್ಲಿಯ ಮೆಸ್‌ಮೆರಿಝ್ಮವ್, ಏನು ಕಥೆ! ನಿಮ್ಮಲ್ಲಿ ತಿಳುವಳಿಕೆ ಇದೆ ಎಂಬುದು ಸಿದ್ಧಾಂತವಾಯಿತು ಸರಿ. ಅದಿರಲಿ. ಅನ್ಯರಿಗೆ, ಅನ್ಯರಿಗೇಕೆ, ಪತಿರಾಯರಿಗೆ ಅಸಂತೋಷವನ್ನುಂಟು ಮಾಡಿ ನೀವು ನಿಮ್ಮ ಸಂತೋಷವನ್ನು ಸಾಧಿಸಿಕೊಳ್ಳುವದು ಅಯೋಗ್ಯವೆಂಬ ಮಾತಿಗೆ ನೀವು ಒಪ್ಪಿದಂತಾಯಿತಷ್ಟೆ ? " ಎಂದು ಕೇಳಿದಳು.

" ನಮ್ಮ ಸಂತೋಷವಾಗುವ ಕೆಲಸದಲ್ಲಿ ಪತಿರಾಯರು ತಾವೇಕೆ ಅಸಂತೋಷವನ್ನು ಹುಟ್ಟಿಸಿಕೊಳ್ಳಬೇಕು ? "

" ಅದು ಅವರ ವಿಚಾರವು. ನಿಮ್ಮ ಸಂತೋಷಕ್ಕಾಗಿ ಪತಿಗೆ ಅಸಂತೋಷವನ್ನುಂಟು ಮಾಡುವದು ನಿಮ್ಮ ಧರ್ಮವಲ್ಲವಷ್ಟೆ ? "

"ಅಲ್ಲ" ಎಂದು ಪ್ರೇಮುವಲ್ಲರಿಯು ಪ್ರಾಂಜಲಳಾಗಿ ಉತ್ತರವಿತ್ತಳು.

" ತೀರಿ ಹೋಯಿತು ! ಜಗಳವಿನ್ನೆಲ್ಲಿ ಉಳಿಯಿತು ? "

" ಅನ್ನಪೂರ್ಣಾಬಾಯಿ, ಈ ಜಗತ್ತಿನಲ್ಲಿ ಗಂಡ ಹೆಂಡರಿರ್ವರೂ ಸಮಾನಾಧಿಕಾರಿಗಳಲ್ಲವೆ ? ನಾವೇ ಸೋತು ಪತಿಯ ಸಂತೋಷದ ಕೆಲಸಗಳನ್ನಷ್ಟು ಮಾಡುತ್ತಿರಬೇಕೆ ? "

"ನಿಮ್ಮೀ ವಾದದಲ್ಲಿ ದೋಷವಿಲ್ಲ. ಆದರೆ ನಮ್ಮರಾಯರು ನಿಷ್ಕಾರಣವಾಗಿ ನಿಮ್ಮ ಸಂತೋಷದಲ್ಲಿ ಮಣ್ಣುಗಲಿಸಲು ಯತ್ನಿಸುವರೆಂದು ನೀವು ತಿಳಿದಿದ್ದರೆ ಅದು ತಪ್ಪು. ಯಾಕೆಂದರೆ ನಿಮಗೆ ಸಂತೋಷವಾಗಲೆಂದು ಹಗಲಿರುಳು ಅವರು ಶ್ರಮಪಡುತ್ತಿರುವದನ್ನು ನೀವು ಅರಿತವರಾಗಿರುವಿರಿ. ವಿಚಾರ ತಿಳಿಯದೆ ನೀವೊಂದು ಮಾತು ಮಾತಾಡುತ್ತಿದ್ದರೆ ಬೇಡೆಂದು ಹೇಳಲು ಅವರಿಗೆ ಅಧಿಕಾರವಿರುವದೊ ಇಲ್ಲವೋ ? "

" ನಾನು ಮಾಡಿದ್ದೊಂದು ಕೆಲಸವು ಅವಿಚಾರದ್ದೇ ಎಂದು ಹೇಗೆ ಹೇಳುವಿರಿ ? "

" ಅದು ಬುದ್ಧಿವಂತರ ಕೆಲಸವು. ನಿಮಗಿಂತಲೂ ರಾಯರು ಬುದ್ಧಿವಂತರೆಂಬದಕ್ಕೆ ನಿಮಗೆ ಮಾನ್ಯವಾಗಿರುವ ಯುನಿವ್ಹರ್ಸಿಟಿಯೇ ಪ್ರಮಾಣವು. ನಿಮ್ಮ ಮನಸ್ಸೇ ಸಾಕ್ಷಿಯು. ತಮ್ಮ ಮನೆಯಲ್ಲಿ ನಡೆದಿರುವ ಕಾರ್ಯಕ್ರಮಗಳ ವಿಹಿತಾವಿಹಿತಗಳ ನಿರ್ಣಯವನ್ನು ರಾಯರೇ ಮಾಡತಕ್ಕವರಲ್ಲವೆ ? "

" ಅಂದರೆ ನಾನೆಂದರೆ ಈ ಮನೆಯಲ್ಲಿ ಯಾತಕ್ಕೂ ಬಾರದವಳೆಂದು

ನಿಮ್ಮಭಿಪ್ರಾಯವೆ?'' ಎಂದು ಸಾಶಂಕಳಾಗಿ ಪ್ರೇಮವಲ್ಲರಿಯು ಕೇಳಿದಳು.

'' ಯಾರು ಹಾಗೆ ಹೇಳುವರು ಬಾಯೀಸಾಹೇಬ ! ನೀವಾದರೂ ಈ ಮನೆಯಲ್ಲಿ ರಾಯರಿಗೆ ಸಮಾನರಾದ ಅಧಿಕಾರಿಗಳು. ನೀವು ರಾಯರಿಗೆ ಸಮಾನರಾದ ಅಧಿಕಾರಿಗಳೆಂದರೆ ರಾಯರ ಅಧಿಕಾರವನ್ನು ನೀವು ಕಸು ಕೊಳ್ಳಲಾರಿರಿ ಎಂಬದನ್ನು ನೀವು ಮರೆಯಲಾರಿರಿ. ಈ ಮನೆಯಲ್ಲಿ ನಿಮಗೆ ಅಧಿಕಾರವು ಪ್ರಾಪ್ತವಾಗಿದ್ದರೆ ಅದರೊಡನೆ ಕೆಲವು ಕರ್ತವ್ಯಗಳಾದರೂ ನಿಮಗೆ ಬಿಡದವಾಗಿವೆ. ನಿರಂತರವಾಗಿ ಪತಿಗೆ ಸಂತೋಷವಾಗುವಂಥ ಕೆಲಸ ವನ್ನೇ ಮಾಡುತ್ತಿರುವದು ನಿಮ್ಮ ಕರ್ತವ್ಯವು. ಈ ಕರ್ತವ್ಯವೊಂದನ್ನು ಮಾಡಿದ ಮಾತ್ರದಿಂದಲೇ ಈ ಮನೆಯ ಸ್ವಾಮಿನಿಯೆಂಬ ಬಹುಮಾನದ ಪದವಿಯು ನಿಮಗೆ ಪ್ರಾಪ್ತವಾಗುವದು."

" ಸರಿ ! ಆದರೆ ನಾವು ಯಾವಾಗಲೂ ಪತಿಯ ಛಂದಾನುವರ್ತಿ ಗಳೇ ಆಗಿದ್ದುಕೊಂಡರೆ ನಮ್ಮ ಸುಖದ ಬಗ್ಗೆ ವಿಚಾರ ಮಾಡಲು ನಮಗೆ ಅವಕಾಶವೇ ಉಳಿಯಲಿಕ್ಕಿಲ್ಲ."

'' ರಹಸ್ಯವೇನಿರುವದು ಈ ಮಾತಿನಲ್ಲಿಯೇ ! ಸಮಾನಾಧಿಕಾರಿಗಳೇ ವರಿದ್ದಲ್ಲಿ ಅವರವರು ತಮ್ಮ ತಮ್ಮ ಅಧಿಕಾರದ ಮರ್ಯಾದೆಯನ್ನು ಕಾದು ಕೊಂಡಿರಬೇಕಾದರೆ ಒಬ್ಬರೊಬ್ಬರು ಒಬ್ಬರೊಬ್ಬರ ಮನೋವೃತ್ತಿಯಂತೆ ನಡೆಯಬೇಕು. ಇಲ್ಲಿಯೇ ನೋಡಿರಿ ! ನಮ್ಮ ರಾಯರು ಯಾವಾಗಲೂ ನಿಮ್ಮ ಹಿತವನ್ನೇ ಮಾಡುತ್ತಿದ್ದು ನಿಮಗಾದ ಸುಖವನ್ನು ಕಂಡು ತಾವು ಸುಖಿಸುತ್ತಿರುವರು. ನೀವಾದರೂ ಅದರಂತೆ ವರ್ತಿಸಿ ಅವರಿಗಾದ ಸುಖ ವನ್ನು ಕಂಡು ಸುಖಿಸುವೆನೆಂಬ ವಿಚಾರವನ್ನು ನೀವು ಮಾಡಿದರೆ ಹೇಗೆ ಬಂಗಾರದಂತಾಗುವದು ನೋಡಿರಿ ! ನಿಮ್ಮ ಹಿತವನ್ನು ರಾಯರು ಪ್ರಯತ್ನ ಪೂರ್ವಕವಾಗಿ ಮಾಡುತ್ತಿರುವರು. ಇದರಿಂದ ನಿಮ್ಮ ಹಿತವು ಸಾಧಿಸಿತಷ್ಟೆ? ಅವರ ಹಿತವಾಗುವಂತೆ ನೀವು ಮಾಡಿದರೆ ಅನಾಯಾಸವಾಗಿ ಅವರ ಸುಖವು ಸಾಧಿಸುವದು. ಸ್ವಸುಖವನ್ನು ತಾವೇ ಸಾಧಿಸಿಕೊಳ್ಳುವದೂ ಕತ್ತಲೆಯಲ್ಲಿ ಕುಳಿತು ಮುಟುಮುಟನೆ ಉಂಡೆ ಅನ್ನರಸಗಳನ್ನು ತಿನ್ನುವದೂ ಒಂದೇ ಸರಿ. ಪದಾರ್ಥವು ಸವಿಯಾಗಿರಬಹುದು, ಆದರೆ ಅದರಲ್ಲಿ ಸ್ವಾರಸ್ಯವಿಲ್ಲ. ಈ ವರ್ಗರು ಚತುರೆಯರು ಅನ್ಯೋನ್ಯರನ್ನು ಬೆರಗು ಮಾಡಬೇಕೆಂದು ಒಂದೊಂದು ಚಮ

ಶ್ಕಾರವಾದ ಪಕ್ವಾನ್ನದ ತಾಟುಗಳನ್ನು ಸಿದ್ಧಗೊಳಿಸಿ, ಈರ್ವರೂ ಇದಿರುಬದಿ ರಾಗಿ ಕುಳಿತು, ಇವಳು ತನ್ನ ತಾಟಿನಲ್ಲಿಯ ಪದಾರ್ಥಗಳನ್ನು ಅವಳ ತಾಟಿ ನಲ್ಲಿಯೂ ಅವಳು ತನ್ನ ಪದಾರ್ಥಗಳನ್ನು ಇವಳ ತಾಟಿನಲ್ಲಿಯೂ ಹಾಕಿ, ಒಬ್ಬರೊಬ್ಬರ ಕೌಶಲ್ಯವನ್ನೂ ಆದರವನ್ನೂ ಬಣ್ಣಿಸುತ್ತ ಹಾಸ್ಯವಿನೋದ ಯುತವಾದ ಮಾತುಗಳನ್ನಾಡುತ್ತ ಉಂಡರೆ ಅವರಿಬ್ಬರಿಗೂ ಎಷ್ಟು ಸಂತೋಷ ? ಭೋಜನಕ್ಕಾದರೂ ಎಷ್ಟಾದರೂ ಸ್ವಾರಸ್ಯ ? ಹಾಗೆಯೇ ಪತಿಯು ಸತಿಯ ಸುಖವನ್ನೂ ಸತಿಯು ಪತಿಯ ಸುಖವನ್ನೂ ಮಾಡಲಣಿ ಸಿದರೆ ಇಬ್ಬರ ಸುಖಗಳೂ ಸಾಧಿಸುವವಲ್ಲದೆ ಅವರವರ ಸುಖಕ್ಕೆ ಬಗೆಬಗೆಯ ಸ್ವಾರಸ್ಯವಾದರೂ ಬರುವದು. ರಾಯರಿಗೆ ನೀವು ಮಾಡಿಕೊಟ್ಟ ತಾಂಬೂಲ ವನ್ನು ಸೇವಿಸಲು ಬಲು ಅಕ್ಕರತೆ! ಅವರು ಪ್ರೇಮದಿಂದ ನಿಮ್ಮ ತುರಬಿಗೆ ಒಂದು ಹಾರವನ್ನು ತೊಡಕಿಸಿದರೆಂದು ತಿಳಿಯಿರಿ. ಆ ಸೊಬಗು ಸ್ವರ್ಗದ ಪುಷ್ಪವೃಷ್ಟಿಯಿಂದಾದರೂ ಬರಬಲ್ಲದೆ ? ”

ಪ್ರೇಮವಲ್ಲರಿಯು ವಿನೋದವನ್ನು ತಾಳಿ ಯಥೇಚ್ಛವಾಗಿ ನಕ್ಕಳು. ಇಂದು ತನ್ನ ಜೀವಕ್ಕೆ ವ್ಯಸನವಾಗಿತ್ತೆಂಬ ಅರಿವನ್ನೇ ಅವಳು ಸಂಪೂರ್ಣ ವಾಗಿ ಮರೆತುಬಿಟ್ಟಳು. “ ಅನ್ನಪೂರ್ಣಾಬಾಯಿ, ನೀವು ಒಳ್ಳೇ ರಸಿಕರು ” ಎಂದು ವಲ್ಲರಿಯು ನುಡಿಯುವಷ್ಟರಲ್ಲಿಯೇ ಅನ್ನಪೂರ್ಣೆಯ ವೈಧವ್ಯದ ನೆನ ಪಾಗಿ ಅವಳ ಕಣ್ಣುಗಳಲ್ಲಿ ದುಃಖಾಶ್ರುಗಳೊತ್ತಿ ಬಂದವು. “ಅಕ್ಕಾ,—ಇಂದಿ ನಿಂದ ನಾನು ನಿಮ್ಮನ್ನು ಅಕ್ಕನೆಂದೇ ಕರೆಯುವೆನು.—ಅಕ್ಕಾ, ನಿಮ್ಮಂಥ ಉತ್ತಮಳಾದ ಸ್ತ್ರೀಗೆ ಇಂಥ ದುರವಸ್ಥೆಯು ಪ್ರಾಪ್ತವಾಗಿರುವದನ್ನು ಕಂಡು ನನಗೆ ನಿಜವಾಗಿ ವ್ಯಥೆಯಾಗಿದೆ, ಏನು ಮಾಡಲಿ ! ”

ಧೀರೆಯಾದ ಅನ್ನಪೂರ್ಣೆಯು ದುಃಖದ ವಿಚಾರಗಳಿಗೆ ಈಡಾಗದೆ “ಬಾಯಿಯವರೆ, ಈ ಮಾತಿನಲ್ಲಿ ಯಾರು ಏನು ಮಾಡಬೇಕಾಗಿದೆ? ದೇವರು ಕರುಣಾಪೂರ್ಣನಾಗಿ ನನ್ನ ಉಡಿಯಲ್ಲಿ ಸುಖದ ಫಲವನ್ನೇ ನೀಡಿದ್ದನು. ಹತ್ತು ವರ್ಷದ ಮೇಲೆ ಅದೇ ಫಲವನ್ನು ಅವನೇಕೋ ಎತ್ತಿಕೊಂಡು ಹೋದನು. ನನ್ನ ಹಣೇ ಬರಹವು ಹಾಗಿರಲಿ. ದೇವರು ನಿಮ್ಮ ಉಡಿಯಲ್ಲಿ ಯಾದರೂ ಪರಮಸ್ಪೃಹಣೀಯವಾದ ಫಲವನ್ನು ನೀಡಿದ್ದಾನೆ. ಅದನು ಅನಾದರಿಸದೆ ಜೋಕೆಯಿಂದ ಅದರ ಸ್ವಾರಸ್ಯವನ್ನು ಸೇವಿಸುತ್ತ ನಡೆದರೆ

ನಿಮಗೂ ನಿಮ್ಮ ಪತಿರಾಯರಿಗೂ ಕೂಡಿಯೇ ಮಿತಿಮೀರಿದ ಸುಖ; ಗಂಟು ಹಾಕಿ ನಿಮ್ಮಿಬ್ಬರನ್ನು ಒತ್ತಟ್ಟಿಗಿರಿಸಿದ ಪರಮಾತ್ಮನಿಗಾದರೂ ಸಂತೋಷ.''

ಪ್ರೇಮವಲ್ಲರಿಯು ಅನ್ನಪೂರ್ಣೆಯ ಕಾಲ್ಗೆರಗಿ "ಅಕ್ಕಾ, ಇಂದಿನಿಂದ ನಾನು ನಿಮ್ಮ ಉಪದೇಶದಂತೆ ನಡೆಯುವೆನು. ನಾನು ನನ್ನ ಪತಿರಾಯರ ಇಚ್ಛೆಯನ್ನು ಮೀರಿದವಳೇ ಹೆಡ್ಡಳು." ಎಂದು ನುಡಿದು ಆ ಸಾಧ್ವಿಯ ಮುಖವನ್ನು ನೋಡುತ್ತ ಕುಳಿತಳು.

"ನನ್ನದೇನು ಉಪದೇಶ! ಗುರುಹಿರಿಯರು ಕಲಿಸಿದ ಉಪದೇಶ ಇದು. ದಾಂಪತ್ಯಧರ್ಮ, ಅದರ ಯೋಗ್ಯತೆ, ಅದರ ಸ್ವಾರಸ್ಯಗಳು ನಮ್ಮ ಜನಾಂಗದವರಿಗೆ ತಿಳಿದಷ್ಟು ಬೇರೆ ಜನಾಂಗದವರಿಗೆ ತಿಳಿದಿಲ್ಲ. ಈ ಧರ್ಮ ದಿಂದ ನಡೆದರೆ ಇಹದಲ್ಲಿ ಸಂಪೂರ್ಣವಾದ ಸುಖದ ಪ್ರಾಪ್ತಿಯು. ಪರಮಾರ್ಥ ಬೋಧವಾದರೂ ಅದರಲ್ಲಿಯೇ ತುಂಬಿ ತುಳುಕುತ್ತಲಿದೆ."

"ಅಕ್ಕಾ, ಅಲ್ಲಿ ಕೇಳಿದಿರಾ? ಗಡಿಯಾರದಲ್ಲಿ ಢಣ್ಣನೆ ಒಂದು ಹೊಡೆ ಯಿತು. ಮಲಗಿಕೊಳ್ಳಿರಿನ್ನು. ನಾನು ಹೋಗುತ್ತೇನೆ.'' ಎಂದು ಪ್ರೇಮ ವಲ್ಲರಿಯು ಎದ್ದು ನಿಂತು ಮೂಢೆಯಂತೆ ಅವನತಮುಖಿಯಾಗಿ ನಕ್ಕು, "ಎಲ್ಲಿಗೆ ಹೋಗಲಿ ನಾನಿನ್ನು? ಅವರ ಬಳಿಗೆ ಹೋಗಿ ಕ್ಷಮೆ ಬೇಡಿಕೊಳ್ಳ ಲಿಯಾ? ಕ್ಷಮೆಯಾದರೂ ಸಿಕ್ಕಬಹುದೇನು?" ಎಂದು ಕೇಳಿದಳು.

"ಕ್ಷಮಿಸಲಿಕ್ಕೆ ರಾಯರು ನಿಮ್ಮ ಮೇಲೆ ಕೋಪಿಸಿಕೊಂಡಿದ್ದರೆ ಸರಿ ಯಷ್ಟೆ? ನಿಮ್ಮಲ್ಲಿಯ ಅಪಕ್ವವಾದ ವಿಚಾರಗಳನ್ನು ತೆಗೆದು ಹಾಕಲು ಅವರು ಮಾಡಿದ ಪ್ರಯತ್ನವಿದು.''

"ಹಾಗಾದರೆ ಈಗಲೇ ನಡೆದೆನು. ಆದರೆ ಅಕ್ಕಾ, ಅವರು ನಿದ್ರಾವಶ ರಾಗಿ ಮಲಗಿದ್ದರೆ ಹೇಗೆ ಮಾಡಲಿ?."

ಅನ್ನಪೂರ್ಣೆಯು ನಸುನಕ್ಕು "ಹುಚ್ಚು ಹಾಳಾಗಲಿ! ಅವರಿಗೆ ನಿದ್ರೆಯೋ ನಿಮಗೋಸ್ಕರವಾಗಿ ಆತುರತೆಯಿಂದ ಮಾರ್ಗಪ್ರತೀಕ್ಷೆ ಮಾಡು ತ್ತಿರುವರೋ ಎಂಬದು ನಿಮಗೆಯೇ ತಿಳಿಯಬೇಕು. ಹೋಗಿರಿ. ಅವರಿಗೆ ನಿದ್ರೆ ಬಂದದ್ದಾಗಿರಲಿ, ಇಲ್ಲವೆ ನಿಮ್ಮ ಮೇಲೆ ಅವರು ಕೋಪ ಮಾಡಿದ್ದೇ ಆಗಲಿ, ಆಗಿದ್ದರೆ ನಾಳೆ ಬೆಳಿಗ್ಗೆ ಬಂದು ನನ್ನ ಮುಂದೆ ಹೇಳಿರಿ.''

# ಮನೆಮನೆಯ ಸಮಾಚಾರ

ಪ್ರಮೋದನಗರದ ಸಮೀಪದಲ್ಲಿ ಹೂವಿನಹಳ್ಳಿಯೆಂಬದೊಂದು ಗ್ರಾಮ ವಿರುವದು. ಅಲ್ಲಿ ಪ್ರೌಢರಾಯನೆಂಬ ದೊಡ್ಡ ವೃತ್ತಿವಂತನಾದ ಗೃಹಸ್ಥ ನಿದ್ದನು. ಪ್ರೌಢರಾಯರಿಗೆ ಇಬ್ಬರು ಗಂಡುಮಕ್ಕಳೂ, ಒಬ್ಬ ಹೆಣ್ಣು ಮಗಳೂ ಇದ್ದರು. ರಾಯರ ಹಿರಿಯ ಮಗನಾದ ರಾಮಚಂದ್ರರಾಯನು ತಕ್ಕಮಟ್ಟಿಗೆ ವಿದ್ಯಾರ್ಜನವನ್ನು ಮಾಡಿ ತಂದೆಯವರ ತಲೆಯ ಮೇಲಿದ್ದ ಸಂಸಾರದ ಭಾರವನ್ನು ತಾನು ಹೊತ್ತುಕೊಂಡು ಆ ಪ್ರಾಂತದಲ್ಲಿ ಒಳ್ಳೇ ಪ್ರತಿಷ್ಠಿತನೆಂದು ಹೆಸರಾದನು. ಚಿಕ್ಕವನಾದ ವಿಜಯರಾಯನು ಕಾಲೇಜದಲ್ಲಿ ಅಭ್ಯಾಸ ಮಾಡುತ್ತಿದ್ದ ಒಳ್ಳೇ ಬುದ್ಧಿವಂತನಾದ ವಿದ್ಯಾರ್ಥಿಯಾಗಿದ್ದನು. ಮಗಳಾದ ವತ್ಸಲೆಯನ್ನು ನೆರೆಹಳ್ಳಿಯ ದೇಸಾಯರ ಮಗನಾದ ತಿರುಮಲರಾಯನಿಗೆ ಕೊಟ್ಟಿತ್ತು. ತಿರುಮಲರಾಯನಾದರೂ ವಿಜಯರಾಯನೊಂದಿಗೆ ಕಾಲೇಜ ದಲ್ಲಿ ಅಭ್ಯಾಸ ಮಾಡುತ್ತಿದ್ದನು.

ಹೀಗೆ ಮನೆಯೆಲ್ಲ ಸಂತತಿ ಸಂಪತ್ತುಗಳಿಂದ ತುಂಬಿ ತುಳುಕುತ್ತಿರುವ ದನ್ನು ನೋಡಿ ಪ್ರೌಢರಾಯರಿಗೂ ಅವರ ಧರ್ಮಪತ್ನಿಯವರಾದ ಯಮುನಾ ಬಾಯಿಯವರಿಗೂ ಸಂಸಾರಸುಖದ ಪರಮಾವಧಿಯು ತೃಪ್ತಿಯಾಗಿ ಜಗತ್ತಿ ನಲ್ಲಿ ತಾವೇ ಧನ್ಯರೆಂದು ಅವರು ತಿಳುಕೊಂಡಿದ್ದರು.

ಆದರೆ ಈ ಮೃತ್ಯುಲೋಕದಲ್ಲಿ ಸತ್ಯವಾದ ಸುಖವೆಲ್ಲಿ? ನುಣ್ಣಗೆ ಕಾಣುವ ದುಃಖದ ಬೀಜಗಳನ್ನು ಸುಖದ ಸಾರವೆಂದು ತಿಳಿದು ನಾವು ಯಥೇಷ್ಟವಾಗಿ ಗುಳುಗುಳನೆ ನುಂಗಿದರೆ ಮುಂದೆ ಕಷ್ಟವೇ ಸಂಭವಿಸುವ ದೆಂದು ಅನಾದಿಕಾಲದಿಂದ ಅನುಭವಿಕರಾದ ಜ್ಞಾನಿಗಳು ಸಾರಿ ಹೇಳುತ್ತಿ ಬಂದಿದ್ದರೂ, ನಿವಾರಿಸಲ್ಪಟ್ಟಾಗ್ಯೂ ಬಿಟ್ಟುಬಿಡದಲೆ ದೀವಿಗೆಗೆ ಅಡರುತ್ತಿ ರುವ ಶಲಭಗಳಂತೆ, ನಾವು ಸುಳ್ಳು ಸುಖದ ಹಂಬಲವನ್ನು ಸರ್ವಥಾ ಬಿಡು ವದಿಲ್ಲ. ಈ ಮಾತಿನಿಂದ ಲೋಕದ ಜನರು ಸಂಸಾರ ಮಾಡುವದನ್ನು ಬಿಡತಕ್ಕದ್ದೆಂದು ನಾವು ಹೇಳುವದಿಲ್ಲ. ಸಂಸಾರವನ್ನು ಕರ್ತವ್ಯವೆಂದು ತಿಳಿದೇ ಮಾಡತಕ್ಕದ್ದಲ್ಲದೆ ಅದರಲ್ಲಿ ಅಧಿಕವಾದ ಆಸಕ್ತಿಯನ್ನು ತಳೆಯುವ

ದಲ್ಲ. ಸುಖಾಭಿಲಾಷೆಯನ್ನು ಹೊಂದುವದು ಮನುಷ್ಯನ ಸ್ವಭಾವಸಿದ್ಧ
ವಾದ ಗುಣವಾದ್ದರಿಂದ ಅದು ದೋಷವಲ್ಲ. ಜ್ಞಾನಿಗಳು ನಿತ್ಯವಾದ ಸುಖ
ವನ್ನು ಬಯಸಿದರೆ ಇತರರು ತಮ್ಮ ಕ್ಷುದ್ರವಾದ ದೃಷ್ಟಿಗೆ ಕಂಡ ಸುಖಾಪೇಕ್ಷೆ
ಯನ್ನು ಮಾಡುವದುಂಟು.

ಸಾಮಾನ್ಯರಾದ ಮನುಷ್ಯರ ಸುಖಕ್ಕೆ ಅನೇಕವಾದ ಕಂಟಕಗಳಿರು
ವವು. ಅವುಗಳಲ್ಲಿ ಮೃತ್ಯುವೆಂಬದು ಬಹು ಘೋರವಾದದ್ದು. ಪ್ಲೇಗದ
ರೂಪವನ್ನು ತಾಳಿ ಮೃತ್ಯುವು ಹದ್ದಿನಂತೆ ಎರಗಿ ಪ್ರೌಢರಾಯನ ಮುಂಗೈ
ಮೇಲಿರುವ ಅರಗಿಳಿಯಾದ ರಾಮಚಂದ್ರರಾಯನನ್ನು ಭರ್ರನೆ ಎತ್ತಿಕೊಂಡೊ
ಯ್ದಿತು. ಅದೇ ಬೇನೆಯಿಂದ ರಾಮಚಂದ್ರನ ಹೆಂಡತಿಯಾದರೂ ತೀರಿ
ಕೊಂಡು ಪರದೇಶಿಯಾದ ತನ್ನ ಚಿಕ್ಕ ಬಾಲಕನ ಸಂರಕ್ಷಣದ ಭಾರವನ್ನು
ಮುದುಕಿಯಾದ ತನ್ನ ಅತ್ತೆಯ ಮೇಲೆ ಹೊರಿಸಿ ಹೋದಳು. ಪುತ್ರಶೋಕದ
ಉಗ್ರವಾದ ಸಂತಾಪದಿಂದ ಪ್ರೌಢರಾಯರು ಕೂಡ ಬೇಗನೆ ಪರಲೋಕ
ವಾಸಿಗಳಾದರು.

ಪಾಪ! ಯಮುನಾಬಾಯಿಯವರು ಸಂಸಾರಸುಖದ ಸ್ವಾದವನ್ನೇ
ಸೇವಿಸಿದವರು ಹೊರತಾಗಿ ಅವರಿಗೆ ದುಃಖದ ಗಾಳಿ ಕೂಡ ಇದುವರೆಗೆ ತಗಲಿ
ದ್ದಿಲ್ಲ. ಮುಪ್ಪಿನ ಕಾಲದಲ್ಲಿ ಪ್ರಾಪ್ತವಾದ ಪತಿಪುತ್ರರ ವಿಯೋಗದ ದುಃಖ
ದಿಂದ ಅವರು ಮುರಿದು ಮುಟ್ಟಿಗೆಯಾದರು. ಮೇಲೆ ೬-೭ ವರ್ಷದ
ಅರ್ಭಕನಾದ ಮೊಮ್ಮಗನನ್ನು ಸಂರಕ್ಷಿಸುವ ಭಾರವೊಂದು ಅವರ ಮೈಮೇಲೆ
ಬಿದ್ದಿತ್ತು. ಅವರೂ ತಿಳುವಳಿಕೆಯುಳ್ಳವರಾದ ಯಮುನಾಬಾಯಿಯವರು
ಪುರಾಣ ಪುಣ್ಯಕಥೆಗಳನ್ನು ಕೇಳುವದರಲ್ಲಿಯೂ, ವ್ರತನಿಯಮಗಳನ್ನು ಆಚ
ರಿಸುವದರಲ್ಲಿಯೂ, ದಾನಧರ್ಮಗಳನ್ನು ಮಾಡುವದರಲ್ಲಿಯೂ ಕಾಲಕ್ಷೇಪ
ಮಾಡುತ್ತ ತಮ್ಮ ದುಃಖಗಳನ್ನು ಮೆಲ್ಲಮೆಲ್ಲನೆ ಮರೆಯುತ್ತ ಬಂದು ಇದ್ದವ
ರನ್ನು ನೋಡಿಕೊಂಡು ಇದ್ದರು.

"ಉತ್ಸವಪ್ರಿಯಾಃ ಖಲು ನಾರ್ಯಃ" ಎಂಬಂತೆ ಮನೆಯಲ್ಲಿ ಲಗ್ನ
ಮುಹೂರ್ತಗಳಾದರೆ ಹೆಣ್ಣುಮಕ್ಕಳು ತಮಗುಂಟಾದ ಕಡುತರವಾದ ದುಃಖ
ಗಳನ್ನು ಮರೆತು ಉಬ್ಬಿನಿಂದ ಮಂಗಲೋತ್ಸವಗಳನ್ನು ನೆರವೇರಿಸುವದುಂಟು.
ಪ್ರೌಢರಾಯರು ತೀರಿಕೊಂಡು ವರ್ಷವಾದ ಕೂಡಲೆ ಯಮುನಾಬಾಯಿಯ

ವರು ತಮ್ಮ ಚಿಕ್ಕ ಮಗನಾದ ವಿಜಯರಾಯನ ವಿವಾಹಮಹೋತ್ಸವವನ್ನು ಬೆಳಿಸುವವರಾದರು. ಕನ್ನೆಯ ತಂದೆಯು ದೊಡ್ಡದೊಂದು ತಾಲೂಕಿನ ತಹಶೀಲದಾರನಾಗಿದ್ದನು. ಅವನ ಹೆಂಡತಿಯಾದ ರಖಮಾಬಾಯಿಯು ತಹಶೀಲದಾರನಿಗೆ ಇಮ್ಮಡಿಯಾದ ಅಧಿಕಾರವನ್ನು ಆ ತಾಲೂಕಿನಲ್ಲಿ ಮೆರಿಸುತ್ತಿದ್ದಳು. ಇಂಥವರು ಅಭಿಮಾನಕ್ಕೊಳಗಾಗಿ ಒಬ್ಬಳೇ ಒಬ್ಬಳಾಗಿರುವ ತಮ್ಮ ಪ್ರೀತಿಯ ಮಗಳ ಕಲ್ಯಾಣೋತ್ಸವಕ್ಕಾಗಿ ಹೇರಳವಾಗಿ ಹಣ ವೆಚ್ಚ ಮಾಡಿದರು. ಸೊಸೆಯು ರೂಪವತಿಯಾಗಿರುವದರಿಂದಲೂ ವಿವಾಹಮಹೋತ್ಸವವು ತಿಂಗಳಾನು ತಿಂಗಳು ನಡೆದಿದ್ದರಿಂದಲೂ ಯಮುನಾಬಾಯಿಯವರ ಮನಸ್ಸಿಗೆ ವಿಶೇಷವಾದ ಆನಂದವಾದ್ದರಿಂದ ಅವರು ಹಿಂದಿನ ದುಃಖಗಳನ್ನೆಲ್ಲ ಸಂಪೂರ್ಣವಾಗಿ ಮರೆತು ಮಗನಾದ ವಿಜಯರಾಯನ ಸಂಸಾರಸುಖವೆಂಬ ನಾವೆಯಲ್ಲಿ ಕುಳಿತು ಮತ್ತೆ ಭವಸಾಗರದ ಶಾಂತವಾದ ನೀರಿನಲ್ಲಿ ಸಂಚಾರ ಮಾಡಲಾರಂಭಿಸಿದರು.

ವಿಜಯರಾಯನು ವಿಶ್ವವಿದ್ಯಾಲಯದ ಪದವೀಧರನಾಗಿ ಬಂದ ಬಳಿಕ ಅವನು ಪ್ರಮೋದನಗರದಲ್ಲಿ ಘನವಾದ ವ್ಯಾಪಾರವನ್ನು ನಡಿಸುತ್ತ ಅಲ್ಲಿ ಮನೆಮಾಡಿಕೊಂಡು ಇದ್ದನು. ಅವನು ಮನೆಯಿಂದ ಧನವಂತನು; ಸ್ವತಃ ವಿದ್ಯಾವಂತನು, ಸುಶೀಲನು, ತರುಣನು ಆಗಿದ್ದರಿಂದ ಅವನ ಸಂಸಾರ ಸುಖಕ್ಕೆ ಕೊರತೆಯಿಲ್ಲ.

ವಿಜಯರಾಯನ ಹೆಂಡತಿಯಾದ ಸುಭದ್ರೆಯು ರೂಪವತಿಯೂ, ಚತುರೆಯೂ ಆಗಿದ್ದರೂ ಗರ್ವಿಷ್ಠರಾದ ತಂದೆತಾಯಿಗಳ ಅಕ್ಕರೆಯಲ್ಲಿ ಬೆಳೆದವಳಾದ್ದರಿಂದ ಅವಳಲ್ಲಿ ನಮ್ರತೆಯು ತುಸು ಕಡಿಮೆಯಾಗಿತ್ತು. ಬಹಿರಂಗವಾಗಿ ಅವಳು ವಿನೀತೆಯಂತೆ ನಡಕೊಳ್ಳುತ್ತಿದ್ದರೂ ಚರ್ಯೆ ನೋಡಲಾಗಿ ಇವಳು ಗೃಹಕಲಹವನ್ನುಂಟು ಮಾಡುವಳೆಂದು ಚಾಣಾಕ್ಷರಾದ ಯಮುನಾಬಾಯಿಯವರು ತಿಳುಕೊಂಡುಬಿಟ್ಟಿದ್ದರು. ಆದರೂ ಇವನೊಬ್ಬ ಮಗನ ಸುಖದಲ್ಲಿ ವಿಷಾದವು ತಿಲಮಾತ್ರವಾದರೂ ಬೆರೆಯಲಾಗದೆಂದು ಯೋಚಿಸಿ ಆ ಮಾತೆಯು ಸೊಸೆಯ ಛಂದಾನುವರ್ತಿಯಾಗಿಯೇ ಇದ್ದಳು. ಸುಭದ್ರೆಯ ತಂದೆಯು ತೀರಿಕೊಂಡದ್ದರಿಂದ ಅವನು ಗಳಿಸಿಟ್ಟ ಧನವೆಲ್ಲ ಅವಳದೇ ಆಗಿದ್ದರಿಂದ, ವಿಜಯರಾಯನು ತನ್ನ ಪ್ರಿಯತಮೆಯಾದ ಹೆಂಡತಿಯು ಹಾಕಿದ

ಉಗುಳನ್ನು ಸಹಸಾ ದಾಟಿದಂತಾದನು.

ಸುಭದ್ರೆಯು ಗರ್ವಿಷ್ಠಳಂತೆ ನಡೆಕೊಂಡರೂ ಮನೆಯಲ್ಲಿ ಯಮುನಾಬಾಯಿಯವರ ಅಧಿಕಾರವು ಅಬಾಧಿತವಾಗಿ ಉಳಿದದ್ದರಿಂದ ಆಪ್ತರಿಷ್ಟರಿಗೂ ಅನುಯಾಯಿ ವರ್ಗಕ್ಕೂ ಅವಳಿಂದ ವಿಶೇಷವಾದ ಪೀಡೆಯಾಗಲಿಲ್ಲ. ವಿನಯ ನಮ್ರತೆಗಳೂ ಸೌಜನ್ಯ ಮಧುರಾಲಾಪಗಳೂ ದರಿದ್ರರಲ್ಲಿರತಕ್ಕ ಗುಣಗಳೆಂದು ಸುಭದ್ರೆಯ ತಿಳುವಳಿಕೆಯಾಗಿತ್ತು. ತಾನು ದೊಡ್ಡವರ ಮಗಳೆಂದು ತಿಳಿದು, ಪತಿಯೂ ಅತ್ತೆಯವರೂ ತನ್ನನ್ನು ಆದರಿಸುವರೆಂದು ಆ ಹೊಸಮೊದಲುಗಿತ್ತಿಯ ನಂಬಿಕೆಯಾಗಿತ್ತು. ಮಗ-ಸೊಸೆಯರು ಸುಖದಿಂದಿರಲೆಂದೆಣಿಸಿ ಯಮುನಾಬಾಯಿಯವರು ತಮ್ಮ ಉತ್ತಮೋತ್ತಮವಾದ ಅಲಂಕಾರಗಳನ್ನು ಸೊಸೆಯ ಮೈಮೇಲಿಡಿಸಿ ಅಕ್ಕರೆಯನ್ನು ಪಡುತ್ತಿರುವದರ ಬೆಲೆಯು ಸುಭದ್ರೆಗೆ ತಿಳಿಯಲಿಲ್ಲ. ಪರಸತಿಯರನ್ನು ಕಣ್ಣೆತ್ತಿ ನೋಡದ ವಿಜಯರಾಯನು ಹೆಂಡತಿಯ ಇಚ್ಛಾನುವರ್ತಿಯಾಗಿರಲಿಕ್ಕೆ ತನ್ನ ರೂಪ-ಯೌವನಗಳೇ ಕಾರಣಗಳೆಂದು ಅವಳು ತಿಳುಕೊಂಡಿದ್ದಳು.

ಯೌವನ, ಧನ, (ಅಂಶತಃ) ಪ್ರಭುತ್ವಗಳು ಸುಭದ್ರೆಯಲ್ಲಿ ಸೇರಿರಲು ಸಂಪೂರ್ಣವಾದ ಅನರ್ಥಕ್ಕೆ ದುರ್ಬೋಧನವೊಂದೇ ಕಡಿಮೆಯಾಗಿತ್ತು. ಕಾಲಕ್ಕೆ ಸರಿಯಾಗಿ ಅದರದೂ ಪೂರ್ತಿಯಾಯಿತು. ಸುಭದ್ರೆಯ ತಾಯಿಯು ಮಗಳ ಸಂಸಾರವನ್ನು ನೋಡುವದಕ್ಕಾಗಿ ಅಳಿಯನ ಮನೆಗೆ ನಡೆತಂದಳು. ರಖುಮಾಬಾಯಿಯು ಗರ್ವಿಷ್ಠಳೂ, ನಿಷ್ಠುರಳೂ, ಕಲಹಪ್ರಿಯಳೂ ಆಗಿದ್ದಳು. ಬಂದು ಒಂದೆರಡು ದಿನಗಳಲ್ಲಿಯೇ ರಖುಮಾಬಾಯಿಗೆ ಯಮುನಾಬಾಯಿಯವರ ಅಧಿಕಾರವು ಕಣ್ಣು ಕಿಸರಾಗಿ ಕಂಡಿತು. ಸುಭದ್ರೆಯ ಲಗ್ನದ ಕಾಲದಲ್ಲಿ ನಡೆದ ವಾಗ್ವಾದಗಳ ನೆನಪು ಬುದ್ಧ್ಯಾ ಕೆದರಿ ತೆಗೆದು ರಖುಮಾಬಾಯಿಯು ಆಗಾಗ್ಗೆ ತನ್ನ ಬೀಗಿತ್ತಿಗೆ ಮರ್ಮಭೇದಕವಾದ ಮಾತುಗಳನ್ನಾಡುವಳು. ಸುಳ್ಳುಸುಳ್ಳೆಯೇ ತನಗೆ ಅನಾದರವಾಯಿತೆಂದು ಹೇಳಿ ಅವಳು ಸೆಡವು ಮಾಡಿಕೊಂಡು ಕೂಡುವಳು. ಸುಭದ್ರೆಯಾದರೂ ತನ್ನ ತಾಯಿಯನ್ನು ಮೇಲುಕಟ್ಟಿ ಮೆಲ್ಲನೆ ಅತ್ತೆಯೊಡನೆ ವ್ಯಾಜ್ಯಮಾಡಲು ಉಪಕ್ರಮಿಸಿದಳು.

ಅಪರೂಪದ ಹಾಗೆ ಮನೆಗೆ ಬಂದಿರುವ ಬೀಗಿತ್ತಿಯೊಡನೆ ನಿಷ್ಕಾರಣ-

ವಾಗಿ ವ್ಯಾಜ್ಯಮಾಡಕೂಡದೆಂದು ನೆನೆಸಿ, ಯಮುನಾಬಾಯಿಯವರು ರುಖಮಾಬಾಯಿಯ ದುರುಕ್ತಿಗಳನ್ನು ಕೇಳಿಯೂ ಕೇಳದಂತೆ ಮಾಡಿ ಅವಳಿಗೆ ತಕ್ಕದಾದ ಉಪಚಾರಗಳನ್ನೇ ಮಾಡುತ್ತಿದ್ದರು. ಸೊಸೆಯ ಔದ್ಧತ್ಯಕ್ಕೆ ವಿನೋದವೆಂದು ತಿಳಿದು ಅವರು ನಗುವರು. ಬಹಿಃಪ್ರಾಣನಾಗಿದ್ದ ತಮ್ಮ ಮೊಮ್ಮಗನಾದ ರಂಗಣ್ಣನಿಗೆ ರುಖಮಾಬಾಯಿಯಾಗಲಿ ಸುಭದ್ರೆಯಾಗಲಿ ಏನಾದರೂ ಆಡಿದ್ದರೆ, "ಆದರೇನಾಯಿತು, ಹಿರಿಯರಾಡಿದ್ದಕ್ಕೆ ಸುಮ್ಮನಿರಬೇಕು!" ಎಂದು ಬುದ್ಧಿ ಹೇಳಿ ಆ ಸಾಧ್ವಿಯು ಆ ಮಗುವನ್ನೆತ್ತಿ ಮುದ್ದಾಡಿ ಸಂತೈಸುವಳು.

ತನ್ನ ಹೆಂಡತಿಯು ತುಸು ಉದ್ಧತಳಾಗಿ ವರ್ತಿಸುವಳೆಂದು ವಿಜಯರಾಯನಿಗೆ ಕಂಡುಬಂದಿತ್ತು. ಆದರೂ ಹೆಂಡತಿಯನ್ನು ಅವಳ ತಾಯಿಯ ಸಮಕ್ಷದಲ್ಲಿ ದಂಡಿಸುವದು ಸರಿಯಲ್ಲವೆಂದು ತಿಳಿದು ಅವನು ಸುಮ್ಮನಿರುತ್ತಿದ್ದನು. ಹೆಂಡತಿಯೊಡನೆ ಏಕಾಂತದಲ್ಲಿರುವಾಗ ಅವನಿಗೆ ಈ ಮಾತಿನ ಸ್ಮರಣವೇ ಆಗುತ್ತಿದ್ದಿಲ್ಲ. ಮೆಲ್ಲಮೆಲ್ಲನೆ ಸುಭದ್ರೆಯ ಔದ್ಧತ್ಯವು ದಿನಕ್ಕೊಂದು ಚಂದವಾಗಿ ಬೆಳೆಯಿತು.

ಅಳಿಯನ ಮನೆಯಲ್ಲಿದ್ದು ಕೆಲಕಾಲವಾದ ಬಳಿಕ ಮೈಯುಂಡಂತಾಗಿ ರುಖಮಾಬಾಯಿಯು ಮೈಚಳಿ ಬಿಟ್ಟು ಮನಸ್ಸಿಗೆ ಬಂದದ್ದು ಮಾಡಲೂ ಮನಸ್ಸಿಗೆ ಬಂದಂತೆ ಮಾತಾಡಲೂ ಆರಂಭಿಸಿದಳು. ಮನೆಗೆ ಮುಖ್ಯಳಾದ ಯಮುನಾಬಾಯಿಯ ಕಡೆಯಿಂದ ತನಗೆ ಅಪಮಾನವಾಯಿತೆಂದು ನಿಷ್ಕಾರಣವಾಗಿ ಹೇಳಿ ಉಪವಾಸ ಬೀಳುವ ಅಂಜಿಕೆಯನ್ನು ಒಮ್ಮೆ ತೋರಿಸುವಳು. ಕೆಲಸವನ್ನು ಬಿಡಿಸಿ ಮಗಳನ್ನು ಮುಂದೆ ಕೂಡಿಸಿಕೊಂಡು ನಿಂದೆಯ ಹರಟೆಯನ್ನು ಕೊಚ್ಚುವಳು. ಸೌಜನ್ಯಯುತರಾದ ಯಮುನಾಬಾಯಿಯವರು ಒಂದು ಮಾತಾಡದೆ ಬೀಗಿತ್ತಿಯ ಮನಸ್ಸು ಹಿಡಿಯುವಧರಲ್ಲಿಯೇ ನಿರತರಾಗಿದ್ದರು.

ಒಂದೇ ಕೈಯಿಂದ ಚಪ್ಪಾಳೆಯಾಗಲಿಲ್ಲವೆಂದು ತಿಳಿದು ನಿರಾಶಳಾಗಿ ರುಖಮಾಬಾಯಿಯು ಬೇಸತ್ತು ತನ್ನ ಊರಿಗೆ ಹೋಗುವ ವಿಚಾರ ಮಾಡಿದಳು. ಆದರೂ ಅವಳು ಸುಮ್ಮನೇಕೆ ಹೋದಾಳು? ಅಳಿಯನ ಕಿವಿಗೆ ಮುಟ್ಟುವಂತೆ ಯಮುನಾಬಾಯಿಯವರ ಮೇಲೆ ಇಲ್ಲದ್ದೊಂದು ಮಾತು

ಹೊರಿಸಿ ಅವಳು ಊರಿಗೆ ಹೋಗುವೆನೆಂದು ಗಂಟುಕಟ್ಟಿಕೊಂಡು ಕುಳಿತಳು. ಯಮುನಾಬಾಯಿಯವರು ಎಷ್ಟು ಪರಿಯಾಗಿ ಹೇಳಿಕೊಂಡರೂ ಇನ್ನೊಂದು ದಿವಸವಾದರೂ ನಿಲ್ಲಲು ಅವಳು ಒಪ್ಪಿಕೊಳ್ಳಲಿಲ್ಲ; ಹೋಗುವದೇ ನಿಶ್ಚಯವಾಯಿತು. ಹೋಗುವಾಗ ಮಗಳನ್ನು ಏಕಾಂತದಲ್ಲಿ ಕರಕೊಂಡು ರಖಮಾಬಾಯಿಯು ಅನೇಕವಾದ ಕಿವಿಮಾತುಗಳನ್ನು ಹೇಳಿರಬಹುದು. शुश्रूषस्व गुरून् (ಸುಶ್ರೂಷಸ್ವ ಗುರೂನ್) ಎಂದು ಹೇಳಿದಳೆ? ಎಲ್ಲಿಯ ಮಾತೆ! ಅವಳು ಹೇಳಿದ ಕಿವಿಮಂತ್ರವು ಬೇರೆಯಾಗಿತ್ತು.

ಕುಶಾಗ್ರಬುದ್ಧಿಯವಳಾದ ಸುಭದ್ರೆಯ ಮನಸ್ಸಿನಲ್ಲಿ ತಾಯಿಯ ಉಪದೇಶವು ಚನ್ನಾಗಿ ಭೇದಿಸಿತು. ಅವಳು ತನ್ನ ಜಾಣತನದ ಪ್ರಯೋಗವನ್ನು ಯಥಾವಕಾಶವಾಗಿ ಮಾಡಲಾರಂಭಿಸಿದಳು. ಒಂದು ದಿವಸ ರಂಗನು ಸಾಲೆಯಿಂದ ಬಂದವನೆ ತನಗೆ ಹಸಿವೆಯಾಗಿದೆಯೆಂದು ವಯ್ನಿಮ್ಮನ ಮುಂದೆ ಕುಣಿದಾಡ್ಡಿದನು. ಯಮುನಾಬಾಯಿಯವರು ಆಗ ಮಡಿಯಲ್ಲಿ ಇದ್ದದರಿಂದ ಹುಡುಗನಿಗೆ ಏನಾದರೂ ತಿನ್ನಲಿಕ್ಕೆ ಕೊಡೆಂದು ಸೊಸೆಗೆ ಹೇಳಿದರು. ಅವಳು ಆ ಮಾತು ಕಿವಿಮೇಲೆ ಹಾಕಿಕೊಳ್ಳದೆ ಹಾಗೆಯೇ ತಿರುಗಾಡಿದಳು. ರಂಗನು ಆ ತನ್ನ ಕಕ್ಕಿಯ ಬೆನ್ನುಹತ್ತಿ ಏನಾದರೂ ಕೊಡೆಂದು ಕಾಡಿದನು. ಆಗಲಾ ನಿಷ್ಕರುಣೆಯು ಆ ಮಗುವಿನ ಕೆನ್ನೆ ಬಾಯುವಂತೆ ಒಳಿತಾಗಿ ಒಂದು ಏಟು ಕೊಟ್ಟಳು.

ಎಂಥ ಅಪರಾಧಗಳನ್ನು ತಡಕೊಂಡರೂ, ತಮ್ಮ ಪ್ರಾಣಪುತ್ಥಳಿಯಾದ ಮೊಮ್ಮಗನಿಗೆ ಪೀಡೆಮಾಡಿದವರನ್ನು ಯಮುನಾಬಾಯಿಯವರು ಸರ್ವಥಾ ಕ್ಷಮಿಸುತ್ತಿದ್ದಿಲ್ಲ. ಎಳೆ ಮಗುವಾದ ರಂಗನ ಕೆನ್ನೆಯ ಮೇಲೆ ಕೆಂಪಗೆ ಮೂಡಿದ ಬಾಸಣಿಕೆಯನ್ನೂ, ಅವನ ಕಣ್ಣುಗಳಲ್ಲಿ ಸುರಿಯುತ್ತಿರುವ ಅಶ್ರುಧಾರೆಗಳನ್ನೂ ಕಂಡು ಅವರ ಹೊಟ್ಟೆಯಲ್ಲಿ ಸಾಸಿವೆಯನ್ನು ಅರೆದು ಹೊಯ್ದಂತಾಯಿತು. ತತ್ಕ್ಷಣವೇ ಅವರು ಮೈಲಿಗೆಯಾಗಿ ಅಳುತ್ತಿರುವ ರಂಗನನ್ನು ಎತ್ತಿಕೊಂಡು ತಾವೂ ಕಣ್ಣೀರು ಸುರಿಸುತ್ತೆ ಅವನನ್ನು ಬಹು ಪರಿಯಾಗಿ ಸಮಾಧಾನಗೊಳಿಸಿ ಸುಭದ್ರೆಗೆ ಒಳಿತಾಗಿ ಸಿಟ್ಟುಮಾಡಿದರು. ಅತ್ತೆಯವರ ಕೋಪದ ಮಟ್ಟು ಎಷ್ಟಿರುವದೆಂಬದು ಅದು ಮೊದಲು ಸುಭದ್ರೆಗೆ ತಿಳಿದಿದ್ದಿಲ್ಲ. ಅವಳು ಆ ದಿವಸ ಸಂಜೆಯವರೆಗೆ ದುಮುದುಮು

ಉರಿಯುತ್ತಲೇ ಇದ್ದಳು.

ಸಾಯಂಕಾಲವಾಗುತ್ತಲೆ ಸುಭದ್ರೆಯ ಬಣ್ಣ ತಿರುಗಿತು; ಭೋಜನವಾದ ಬಳಿಕ ಆವಳು ಸಿಂಗರದ ಉಡುಗೆತೊಡಿಗೆಗಳನ್ನು ಮಾಡಿಕೊಂಡು ಒಪ್ಪಿನಿಂದ ಅಲಂಕಾರಗಳನ್ನು ಧರಿಸಿ, ನೂಪುರಗಳ ಮಂಜುಲ ಸ್ವರವಾಗುವಂತೆ ಒನಪಿನಿಂದ ಮೆಲ್ಲಡಿಗಳನ್ನಿಕ್ಕುತ್ತ ಪತಿಯ ಶಯ್ಯಾಗೃಹಕ್ಕೆ ಬರುವವಳಾದಳು. ರೂಪವತಿಯಾದ ಆ ನವತರುಣಿಯು ಅಂಗಜನ ಜಯಸಿರಿಯಂತೆ ತನ್ನನ್ನು ಮೋಹಪಾಶದಲ್ಲಿ ಹಿಡಿಯಲು ಸಾಗಿಬರುತ್ತಿರುವದನ್ನು ಕಂಡು ವಿಜಯರಾಯನು ಪ್ರೇಮಪರವಶನಾಗಿ ಸೇಜದಿಂದ ಟಣ್ಣನೆ ಹಾರಿಬಂದು ಆ ತನ್ನ ಅರ್ಧಾಂಗಿಯನ್ನು ಭರದಿಂದಪ್ಪಿ, ಅವಳನ್ನು ಲೀಲೆಯಿಂದ ಎತ್ತಿ ತಂದು ಮಂಚದ ಮೇಲೆ ಇರಿಸಿಕೊಂಡನು.

ಹೀಗೆ ಅಯತ್ನವಾಗಿ ತನ್ನ ಕಾರ್ಯವು ಅರ್ಧಕರೆ ಸಾಧಿಸಿತೆಂದು ಕಂಡುಕೊಂಡ ಕೂಡಲೆ ಆ ಮೋಸಗಾರತಿಯು ತುಸು ಕೋಪಾವೇಶವನ್ನು ತಾಳಿ, ಪತಿಯ ಬಾಹುಪಾಶಗಳನ್ನು ಒತ್ತಾಯದಿಂದ ಬಿಡಿಸಿಕೊಂಡು ಸಿಡಿದು ಹೋಗಿ ದೂರದಲ್ಲಿ ಕುಳಿತಳು. ಆತುರನಾದ ಆ ಪತಿಯು ಆ ಕೈಕಯಾದೇವಿಯನ್ನು ಮತ್ತೆ ಬಲಾತ್ಕಾರದಿಂದೆ ತನ್ನ ಬಾಹುಪಾಶಗಳಲ್ಲಿ ಬಿಗಿದಪ್ಪಿ ಆವಳ ನುಣುಪಾದ ಗದ್ದವನ್ನು ಆದರದಿಂದ ಹಿಡಿದು, ಮುನಿಸುಗೊಟ್ಟ ಕಾರಣವನ್ನು ಬಹು ವಿನಯದಿಂದ ಕೇಳಿದನು. ಆಗಲಾ ಕೋಪನೆಯು ಅಬ್ಬರದಿಂದ ಆಕ್ರೋಶಿಸಿ ಕಂಬನಿಗಳನ್ನು ವಿಡಿದು ಆರ್ತೆಯಂತೆ ಗದ್ಗದ ಕಂಠೆಯಾಗಿ: "ಮುನಿಸುಗೊಡಲಿಕ್ಕೇನಾಗಿದೆ! ಉರುಲು ಹಾಕಿಕೊಳ್ಳುವಂಥ ಕಷ್ಟವು ನನಗೊದಗಿರಲು ಅದು ನಿಮಗೆ ಮುನಿಸಿನಂತೆಯೂ ಪ್ರಣಯ ಕಲಹದಂತೆಯೂ ಭಾಸವಾಗುವದಲ್ಲವೆ?" ಎಂದು ನುಡಿದಳು.

ವಿಜಯರಾಯನು ತನ್ನ ಸೆಲ್ಲೆಯಿಂದ ಪ್ರಿಯತಮೆಯ ಅಶ್ರುಪೂರ್ಣವಾದ ಕೆಂಗಣ್ಣುಗಳನ್ನೊರಿಸಿ ವಿಷಾದದಿಂದೆ "ಕಷ್ಟವೇತರದು ಪ್ರಿಯೆ? ಈ ಮನೆಗೆ ನೀನು ಸಾರ್ವಭೌಮಿನಿಯಾಗಿರಲು ನಿನ್ನ ಮನಸ್ಸನ್ನು ನೋಯಿಸಿದವರಾರು?" ಎಂದು ಅವಳ ಮುಖವನ್ನು ನೋಡುತ್ತ ಕೇಳಿದನು. "ಬಿಚ್ಚಿ ಹೋಳಾಗಿರುವ ನನ್ನ ಎದೆಯು ಇಂಥ ಬುಬ್ಬುಣಚಾರಪ ಮಾತುಗಳಿಂದ ವಾಸಿಯಾಗಬಲ್ಲದೆ?" ಎಂದು ಸುಭದ್ರೆಯು ಪತಿಯ ಎದೆ ಹಿಡಿದು

ಮೆಲ್ಲನೆ ನೂಕಿದಳು.

ಪ್ರೇಮವಲ್ಲರಿಯು ಆಮೋದಮಯವಾದ ಆ ನವಮಂಜರಿಯು ಪೀಡೆಗೊಳಗಾಗಿರುವದನ್ನು ಕಂಡು ವಿಜಯರಾಯನ ಎದೆಗೆ ಜಂಗ್ರಸೆ ಬರೆಕೊಟ್ಟಂತಾಯಿತು. ಅವನು ಪ್ರಿಯತಮೆಯ ಅಧರವನ್ನು ಭರದಿಂದ ಚುಂಬಿಸಿ "ಕಾರಣವು ತಿಳಿಯದಿದ್ದಲ್ಲಿ ದುಃಖ ನಿವಾರಣ ಮಾಡುವ ಬಗೆ ಏನು? ಸುಭದ್ರೆ, ಇದದ್ದಾದರೂ ಏನು ಹೇಳು!" ಎಂದು ಕೇಳಿದನು.

"ಹೇಳಿದರೆ ನಂಬಿಕೆಯಾಗದು! ಆದರೂ ದುಃಖಪರಿಮಾರ್ಜನದ ಕೆಲಸವು ನಿಮ್ಮಿಂದಾಗದು! ಹೇಳಿ ಫಲವೇನು?" ಎಂದು ನುಡಿದ ಸುಭದ್ರೆಯ ಕಣ್ಣುಗಳಿಂದ ಜಲಪ್ರವಾಹಗಳು ಸುರಿದವು.

ವಿಜಯರಾಯನು ಮಮತೆಯಿಂದ ಹೆಂಡತಿಯ ಬೆನ್ನ ಮೇಲೆ ಕೈಯಾಡಿಸಿ "ಪ್ರೇಯಸಿ, ಈ ಮನೆಗೆ ನಾನು ಸಂಪೂರ್ಣನಾದ ಸ್ವಾಮಿಯು! ನಿನ್ನ ದುಃಖವನ್ನು ಹೋಗಲಾಡಿಸಲು ನಾನು ಅಸಮರ್ಥನೆ? 'ಇಂಥ ಮಾತು ಹೀಗೆಯೇ ಆಗತಕ್ಕದ್ದು' ಎಂದು ನೀನು ಆಜ್ಞಾಪಿಸಿದ ಕ್ಷಣದಲ್ಲಿಯೇ ನಾನು ಹಾಗೆ ಮಾಡಿಯೇ ತೀರುವೆನು. ನೋಡಿಯಾದರೂ ನೋಡು!" ಎಂದು ಪತಿಯು ಬೇಡಿಕೊಂಡನು.

"ಹೇಳಲಿಯಾ? ಇಂದು ರಂಗನು ಏನೇನೋ ಬೇಡಿ ನನ್ನ ಮೈಮೈ ಅಡರುತ್ತ ಬಂದು ಹಿಡಿಸಿದಾಗ ನಾನು ಕೆಲಸದಲ್ಲಿರುವದರಿಂದ ತಿಳಿಯದೆ ಅವನ ಗಲ್ಲಕ್ಕೆ ಮೆಲ್ಲನೆ ಕೈತಾಗಿಸಿ ಬಡಿದಂತೆ ಮಾಡಿದೆನು. ಅಷ್ಟಕ್ಕೆ ಅತ್ತೆಯವರು ಮುತ್ತೈದೆಯಾದ ನನಗೆ ವಿಧಿನಿಷೇಧಗಳನ್ನು ಲೆಕ್ಕಿಸದೆ ಬಾಯಿಗೆ ಬಂದಂತೆ ಬೈದರು. ನನ್ನಿಂದ ತಪ್ಪಾಗಿದ್ದರೆ ಒಂದು ಮಾತು!"

ವಿಜಯರಾಯನು ಗಹಗಹಿಸಿ ನಕ್ಕು: "ಇಷ್ಟೆಯೋ! ಉರುಲು ಹಾಕಿಕೊಳ್ಳುವಂಥ ಪ್ರಸಂಗವೇನೋ ಎಂದು ಮಾಡಿದ್ದೆನು. ಇದಕ್ಕೆ ಶಾವಿಗೆಯ ಪಾಯಸದಿಂದ ಉರಲು ಹಾಕಿಕೊಳ್ಳ, ಬೇಡೆನ್ನುವವರಾರು?" ಎಂದು ನುಡಿದನು.

"ಹೀಗಾಗುವದೆಂದು ನನಗೆ ಈ ಮೊದಲು ತಿಳಿದೇ ಇತ್ತು!" ಎಂದು ನುಡಿದವಳೇ ಸುಭದ್ರೆಯು ಅಕ್ಕಸದಿಂದ ಮಂಚವನ್ನು ಬಿಟ್ಟಿಳಿದಳು.

ವಿಜಯರಾಯನು ಮತ್ತೆ ಅವಳನ್ನು ಮಂಚಕ್ಕೆ ಕರೆದೊಯ್ದು "ಸುಭದ್ರೆ,

ಹಿರಿಯರೊಂದು ಮಾತಾಡಿದರೆ ತಡಕೊಳ್ಳಬಾರದೇನು ? " ಎಂದು ಕೇಳಿದನು.

" ಬೈಸಿಕೊಳ್ಳುವದು ಇದೇ ಮೊದಲಾಗಿದ್ದರೆ ತಡಕೊಳ್ಳುತ್ತಲೇ ಇದ್ದೆನು. ದಿನಬೆಳಗಾದರೆ ಕಿಟಿಕಿಟಿಯು ಆರಂಭಿಸಿತೇ. ಹೇಳಬಾರದು ಹೇಳಬಾರದು ಎಂದರೆ ಎಲ್ಲಿಯು ವರೆಗೆ ? ನನ್ನಿಂದ ತಪ್ಪಾಗಿದ್ದರೆ ಸಿಟ್ಟು ಮಾಡಲಿಕ್ಕೆ ನಾನು ಬೇಡೆನ್ನುವೆನೆ ? ನನಗಂತೂ ಜೀವ ಬೇಡಾಗಿ ಹೋಗಿದೆ. ಒಮ್ಮೆಲೆ ಕೆರೆಬಾವಿ ಹಾರಿಕೊಳ್ಳುವದು ಲೇಸು. "

" ಆಗಲಿ ! ನಾಳೆ ಅವ್ವನಿಗೆ ಹೇಳಿ ನಿನ್ನ ಹೆಸರು ತೆಗೆಯದಂತೆ ಮಾಡಿದರೆ ಆಯಿತೋ ಇಲ್ಲವೊ ? "

ಸುಭದ್ರೆಯ ಮುಖದಲ್ಲಿ ಮಂದಹಾಸವು ತೋರಿತು. ಪತಿಯ ಭುಜದ ಮೇಲೆ ಒಯ್ಯಾರದಿಂದ ತನ್ನ ಮುಖವನ್ನಿಟ್ಟು ಕಥೆಗಾರನಿಗೆ ತನ್ನ ವಿಲಾಸ ಮಂದಿರವನ್ನು ಬಿಟ್ಟು ಹೊರಗೆ ಹೋಗಲು ಸೂಚಿಸಿದಳು.

ಮುಂದೆ ತಿಂಗಳೆರಡು ತಿಂಗಳಲ್ಲಿ ಒಂದೊಂದರಂತೆ ಇಂಥವೇ ಹತ್ತೆಂಟು ದೂರುಗಳು ವಿಜಯರಾಯನ ಕಿವಿಗೆ ಬಿದ್ದವು. ಅತ್ತೆ-ಸೊಸೆಂದಿರ ನಡುವೆ ದಿನಾಲು ದುಸುಮುಸು ನಡೆದೇ ಇತ್ತು. ಸುಭದ್ರೆಗೆ ಬುದ್ಧೀ ಹೇಳೆಂದು ಯಮುನಾಬಾಯಿಯವರು ಮಗನಿಗೆ ಸೂಚಿಸಿದ್ದು ನಿರರ್ಥಕವಾಯಿತು. ವಿಜಯರಾಯನ ತಂಗಿಯಾದ ವತ್ಸಲೆಯು ತವರುಮನೆ ಮಾಡಲಪೇಕ್ಷಿಸಿ ಬಂದಾಗಿನಿಂದಂತೂ ಗೃಹಕಲಹದ ಬೇಗೆಯು ಹೆಚ್ಚಾಯಿತು. ವತ್ಸಲೆಯು ದೊಡ್ಡ ದೇಸಾಯರ ಹೆಂಡತಿಯು; ಮೇಲಾಗಿ ತಾಯಿಯಿದ್ದ ತವರುಮನೆಗೆ ಬಂದವಳು. ಅವಳು ಸುಭದ್ರೆಯ ಜಂಬಕ್ಕೆ ಉಪ್ಪು ಹಾಕುವಳೆ ? ಸುಭದ್ರೆಯು ಒಳಗಿಂದೊಳಗೆಯೇ ಕುದಿಯಲಾರಂಭಿಸಿದಳು. ಹೀಗೆ ಹದಿನೈದು ಇಪ್ಪತ್ತು ದಿವಸಗಳು ಕಳೆದ ಬಳಿಕ ಕಲಹಕ್ಕೆ ಒಂದು ನೆವ ಹುಟ್ಟಿತು.

ಒಂದು ದಿವಸ ವತ್ಸಲೆಯು ಮೈ ತೊಳೆದುಕೊಂಡು ತಾಯಿಯ ಹೇಳಿಕೆಯ ಮೇರೆಗೆ ಸುಭದ್ರೆಯ ಜರತಾರಿಯ ಸೀರೆಯನ್ನು ಉಟ್ಟುಕೊಂಡಳು. ಸುಭದ್ರೆಯು ಅದನ್ನು ಕಂಡು " ಹಾ ! ಹಾ ! ನನ್ನ ಸೀರೆಯನ್ನು ಏಕೆ ಉಟ್ಟುಕೊಂಡಿರಿ? ಸದ್ಯಕ್ಕೆ ಅದನ್ನು ಕಳೆಯಿರಿ" ಎಂದು ಬೊಗಳಿ ನಿಂತರಿಕೆಯಲ್ಲಿ ಅದನ್ನು ಕಳಿಸಿಕೊಂಡಳು. ಶ್ರೀಮಂತರ ಸೊಸೆಯಾದ ವತ್ಸಲೆಯು ಇಂಥ ಅಪಮಾನವನ್ನು ಸಹಿಸುವಳೆ ? ಆರಕ್ಷಣವಾದರೂ ಈ

ಮನೆಯಲ್ಲಿ ನಾನು ನಿಲ್ಲುವದಿಲ್ಲವೆಂದು ಹಟತೊಟ್ಟು, ವತ್ಸಲೆಯು ಊಟ ಉಡಿಗೆಗಳ ವಿಚಾರವನ್ನು ಬಿಟ್ಟು ತನ್ನ ಊರಿಗೆ ಹೋಗಲು ರಥವನ್ನು ತರಿಸಿಕೆಂಡು ಸಿದ್ಧಳಾದಳು ಯಮುನಾಬಾಯಿಯವರಿಗೆ ಮಗಳಿಗಾದ ಅಪಮಾನವನ್ನು ಕಂಡು ಅತಿಶಯವಾದ ಸಂತಾಪವಾಯಿತು. ಅವರು ಸೊಸೆಯ ಸಮಾಚಾರವನ್ನು ಚನ್ನಾಗಿ ತೆಗೆದುಕೊಂಡದ್ದಲ್ಲದೆ, ಮಗನನ್ನು ಏಕಾಂತದಲ್ಲಿ ಕರೆದು ಅವನ ಕಿವಿಯನ್ನಾದರೂ ಚನ್ನಾಗಿ ಹಿಂಡಿದರು. ಆದರೆ ವಿಜಯರಾಯನು ಈಗೀಗಲಾಗಿ ಚನ್ನಾಗಿ ಹೆಂಡತಿಯ ಪಕ್ಷವನ್ನು ಹಿಡಿದವನಾಗಿದ್ದರಿಂದ, ಬಿರಿನುಡಿಗಳಿಂದ ತಾಯಿಗೆ ಎದಿರುತ್ತರವನ್ನು ಕೊಟ್ಟನೇ ಹೊರತಾಗಿ ತನಗೆ ದೇವತೆಯಾದ ಆ ತಾಯಿಯ ಅಭಿಮಾನವನ್ನು ಹಿಡಿಯಲಿಲ್ಲ. "ಅವ್ವಾ, ಇನ್ನು ಮೇಲೆ ಈ ಮನೆಯಲ್ಲಿ ನೀನಾಗಲಿ ಅವಳಾಗಲಿ (ಹೆಂಡತಿ) ಇಬ್ಬರಲ್ಲಿ ಒಬ್ಬರು ಮಾತ್ರ ಇರಬೇಕು. ನಿತ್ಯದಲ್ಲಿಯೂ ನಡೆದಿರುವ ಈ ಅನರ್ಥಗಳನ್ನು ನಾನು ನೋಡಲಾರೆನು. ಅವಳನ್ನೇ ಅಟ್ಟಿಬಿಡಬೇಕೆಂದು ನಿನ್ನ ಮನಸ್ಸಿನಲ್ಲಿ ಇದ್ದರೆ ಇಂದೆಯೇ ಅವಳನ್ನು ತವರುಮನೆಗೆ ಕಳಿಸಿಬರುತ್ತೇನೆ."

"ಏನಂದಿ ವಿಜಯಾ!" ಎಂದು ಅತ್ಯಂತವಾಗಿ ಕ್ರುದ್ಧರಾಗಿದ್ದ ಯಮುನಾಬಾಯಿಯವರು ಉದ್ಗಾರ ತೆಗೆದರು.

"ಕೇಳಿಸಲಿಲ್ಲವೇನು?"

"ಸಾಕು! ಇನ್ನೊಂದು ಮಾತಾಡಬೇಡ." ಎಂದು ಆಜ್ಞಾಪಿಸಿದ ಯಮುನಾಬಾಯಿಯವರು ತಾವು ಕೂಡ ಮತ್ತೊಂದು ಮಾತಾಡದೆ ಮಗಳಾದ ವತ್ಸಲೆಯನ್ನೂ ಮೊಮ್ಮಗನಾದ ರಂಗನನ್ನೂ ರಥದಲ್ಲಿ ಕುಳ್ಳಿರಿಸಿ ಸ್ಟೇಶನದ ಹಾದೀ ಹಿಡಿದರು.

ರಥವು ಕಣ್ಮರೆಯಾದ ಕೂಡಲೆ ವಿಜಯರಾಯನ ಮೈಯೊಳಗಿನ ಮದಜ್ವರವು ಝರ್ರನೆ ಇಳಿದು ಅವನಿಗೆ ಸ್ಮೃತಿ ಬಂದಿತು. ಅವನು ಒಳಗೆ ಹೋಗಿ ನೋಡುತ್ತಾನೆ, ಮಾಡಿದ ಅಡಿಗೆಯು ಹಾಗೆಯೇ ಮೆರೆಯುತ್ತಿತ್ತು. "ಅವರು ಉಣ್ಣದೆ ಹೋದರಲ್ಲೆ!" ಎಂದು ಉದ್ಗಾರ ತೆಗೆದ ವಿಜಯರಾಯನ ಕಣ್ಣುಗಳಲ್ಲಿ ದುಃಖಾಶ್ರುಗಳೊತ್ತಿ ಬಂದವು. ತನ್ನ ಪ್ರೀತಿಯ ತಂಗಿಯು ಅಪರೂಪವಾಗಿ ಮನೆಗೆ ಬಂದಿರಲು ಅವಳನ್ನು ನಾನು ಸಂತೋಷ

ಗೊಳಿಸಲಿಲ್ಲ. ಅವಳಿಗಾಗಿ ಉಡುಗರೆ ಉತ್ಸವಗಳನ್ನು ಮಾಡಿಸಲಿಲ್ಲ; ಇಷ್ಟೇ ಅಲ್ಲ, ಹೋಗುವಾಗ ಆ ಸೀಮಂತಿನಿಯ ಹಣೆಗೆ ಬೊಟ್ಟು ಕುಂಕುಮವನ್ನು ಕೂಡ ಯಾರೂ ಹಚ್ಚಲಿಲ್ಲ; ಎಂದು ಚಿಂತಿಸಿ ಬಹು ವ್ಯಸನಾಕುಲನಾಗಿ ಅವನು ತನ್ನ "ಬಾಸಿಕಲ್"ವನ್ನು ಹತ್ತಿಕೊಂಡು ವಾಯುವೇಗದಿಂದ ಸ್ಟೇಶನಕ್ಕೆ ಬಂದನು.

ಸ್ಟೇಶನದ ಸಮಯಪ್ರತೀಕ್ಷಾಗೃಹದಲ್ಲಿ (waiting room) ಯಮುನಾಬಾಯಿಯವರೂ ವತ್ಸಲೆಯೂ ಕುಳಿತಿದ್ದರು. ವಿಜಯರಾಯನು ಬಂದವನೇ ಗಟ್ಟಿಯಾಗಿ ತಾಯಿಯ ಕಾಲುಹಿಡಿದು ಮನೆಗೆ ಬಾರೆಂದು ಹೇಳಿಕೊಂಡನು. ಆ ಮಾತೆಯ ಕಣ್ಣುಗಳಲ್ಲಿಯೂ, ವಿಜಯರಾಯ ವತ್ಸಲೆಯರ ಕಣ್ಣುಗಳಲ್ಲಿಯೂ ನೀರು ಸುರಿಯುತ್ತಿತ್ತು. ಯಮುನಾಬಾಯಿಯವರು ಸದ್ಗದಿತಕಂಠರಾಗಿ ಅಂದದ್ದು: "ವಿಜಯರಾಯ, ನಾನು ನಿನ್ನ ಮೇಲೆ ಕೋಪಿಸಿಕೊಳ್ಳಲಿಲ್ಲ; ನಿನ್ನ ಮನೆಗೆ ಬರಬಾರದೆಂದೂ ಅನ್ನುವದಿಲ್ಲ. ಮಗನನ್ನು ಅಗಲಿಯಾವ ಮಾತೆಯೂ ಇರಲಾರಳು. ನೀನು ನನ್ನ ದ್ರೋಹವನ್ನು ಮಾಡಲೆಸಗಿದರೂ ನಾನು ಸರ್ವಥಾ ಮಾಡೆನು. ಸಮುದ್ರದ ಚಂಚಲವಾದ ತೆರೆಗಳು ಸಂಕ್ಷುಬ್ಧವಾಗಿ ದಂಡೆಯ ಮೇಲಿದ್ದ ಗುಡ್ಡಕ್ಕೆ ಒಳಿತಾಗಿ ಅಪ್ಪಳಿಸುತ್ತಿದ್ದರೂ ಪರ್ವತವು ತೆರೆಗಳನ್ನು ಬಡಿಯಲಿಕ್ಕೆ ಹೋಗುವದಿಲ್ಲವಷ್ಟೇ? ಹಾಗೆಯೇ ಪರ್ವತದಂತೆ ನಿಶ್ಚಲವಾಗಿರುವ ನನ್ನ ಮನಸ್ಸು ನಿನ್ನ ಕೂಡ ವಿರೋಧವನ್ನು ಬೆಳಿಸದು."

"ಆದಿರಲಿ ಅವ್ವಾ, ಸದ್ಯಕ್ಕೆ ಮನೆಗೆ ನಡಿ; ಇನ್ನು ಮೇಲೆ ನಾನು ಕೇವಲವಾಗಿ ನಿನ್ನ ಆಜ್ಞೆಯಲ್ಲಿಯೇ ಇರುವೆನು" ಎಂದು ವಿಜಯರಾಯನು ಹೇಳಿಕೊಂಡನು.

"ವಿಜಯಣ್ಣಾ, ನಮ್ಮಿಂದೇನು ಪ್ರಯೋಜನ ನಿನಗೆ? ನೀನೂ, ನಿನ್ನ ರಮಣೀ ಯಥೇಷ್ಟವಾಗಿ ಇರಿ. ನೀನು ಅರಸು, ಆಕೆ ಅರಸಿ. ನೀನು ನಿನ್ನ ಹಣೆಕೊಯ್ದು ಮಣೆಮಾಡಿದರೂ ನಾವು ಬರುವವರಲ್ಲ." ಎಂದು ವತ್ಸಲೆಯು ಆಕ್ರೋಸದಿಂದ ನುಡಿದಳು.

"ವತ್ಸಲೆ, ಕ್ಷಮಿಸು. ನನ್ನಿಂದ ತಪ್ಪೇ ಆಗಿರುವದು. ಸುಮ್ಮನೆ ಮನೆಗೆ ನಡೆಯಿರಿ. ಮನುಷ್ಯನು ಒಮ್ಮೆ ತಗ್ಗಿನಲ್ಲಿ ಬಿದ್ದರೆ ಮತ್ತೊಂದಾವರ್ತಿ

ಬೀಳುವನೇನು ?"

"ಅವ್ವನೇನೋ, ನೀನೇನೋ ! ನಾನಂತೂ ನಮ್ಮ ಊರಿಗೆ ಹೋಗಲೇಬೇಕು."

"ಯಾಕೆ ಅವ್ವಾ ?" ಎಂದು ವಿಜಯನು ಮತ್ತೆ ತಾಯಿಯನ್ನು ಬೆಸಗೊಂಡನು.

"ವಿಜಯರಾಯ, ಈ ಸಮಯದಲ್ಲಿ ನಾವು ಊರಿಗೆ ಹೋಗುವವರೇ! ಮನುಷ್ಯನಾದವನು ಈ ಸಂಸಾರದಲ್ಲಿ ಅನೇಕವಾದ ಮಾತುಗಳ ಅನುಭವವನ್ನು ತೆಗೆದುಕೊಳ್ಳಲೇಬೇಕು. ನೀನೂ ನಿನ್ನ ಹೆಂಡತಿಯೂ ಕೆಲವು ದಿವಸ ಇಬ್ಬರೇ ಇದ್ದು ಸಂಸಾರ ಮಾಡಿ ನೋಡಿರಿ. ಬಳಿಕ ನಮ್ಮಂಥವರ ಅವಶ್ಯಕತೆ ಎಷ್ಟರಮಟ್ಟಿಗೆ ಇರುವದೆಂಬದರ ಜ್ಞಾನವು ನಿನಗಾಗುವದು. ನಿನ್ನನ್ನು ಬಿಟ್ಟಿರಬೇಕಾದರೆ ನನಗೆ ಒಂದೊಂದು ಕ್ಷಣವು ಒಂದೊಂದು ವರುಷದಂತೆ ತೋರಿದರೂ ಕೆಲದಿವಸ ನಾನು ಹಾಗೆ ಮಾಡಲೇಬೇಕು. ಹೋಗು, ಹೆಚ್ಚಾಗಿ ಅಗ್ರಹ ಮಾಡಬೇಡ."

ವಿಜಯರಾಯನೂ ತಾಯಿಯನ್ನು ಕಳಿಸಲಿಕ್ಕೆ ಊರಿಗೆ ಹೋಗಿ ಮರಳಿ ಬಂದನು. ಪತಿಯು ತನ್ನ ತಾಯಿಯ ಅನುನಯವನ್ನು ಮಾಡಿದ್ದು ಕೇಳಿಯೂ ಅವನು ಅವಳನ್ನು ಕಳಿಸಲಿಕ್ಕೆ ಹೋದದ್ದನ್ನು ಕಂಡೂ ಸುಭದ್ರೆಗೆ ಅತಿಶಯವಾದ ಸಂತಾಪವಾಗಿತ್ತು. ಗಂಡನು ಮನೆಗೆ ಬಂದಕೂಡಲೆ "ಬಂದಿರಾ ? ಅಲ್ಲಿಯೇ ಇರಬೇಕಾಗಿತ್ತು ? ಮಾತೃದೇವತೆಯನ್ನು ಬಿಟ್ಟು ಬರಬೇಕಾದರೆ ಮನಸ್ಸಿಗೆ ಬಹಳ ವ್ಯಸನವಾಗಿದ್ದೀತು !"

"ಮಾತೃದೇವತೆಯನ್ನು ಅಗಲಿ ಬರಬೇಕಾದರೆ ಮನಸ್ಸಿಗೆ ಅಸಮಾಧಾನವಾಯಿತು ಸರಿ ; ಆದರೆ ಮನೆಯ ಲಕ್ಷ್ಮಿಯನ್ನು ಬಿಟ್ಟಿರುವದು ಅಸಾಧ್ಯವಲ್ಲೆ ?" ಎಂದು ನುಡಿದು ವಿಜಯರಾಯನು ಹೆಂಡತಿಯ ಮುಖವನ್ನು ನೋಡಿ ವಿನೋದದಿಂದ ನಕ್ಕನು.

"ಹೆಂಡತಿಯೇನು ? ಅದೊಂದು ದುಡಿಯಲಿಕ್ಕೆ [illegible] ತೊತ್ತು ! ಆದರಲ್ಲಿ ಪ್ರೇಮವೇ, ಮಮತೆಯೇ, ಏನಿರುವದು ?"

"ನನ್ನ ಪ್ರಾಣಕಾಂತೆಯ ಹೊಟ್ಟೆಯಲ್ಲಿ ಪ್ರೇಮ ಮಮತೆಗಳ ಊರ್ಮಿಯೇ ಇರುವದರಿಂದ ನಾನು ಅವಳ ಅಧೀನನಾಗಿರುವೆನಷ್ಟೇ ?"

"ಬಾಯಿತುಂಬ ಒಣ ಮಾತುಗಳನ್ನಾಡಲಿಕ್ಕೆ ಯಾರಿಗೂ ವೆಚ್ಚ ತಗಲುವದಿಲ್ಲ."

ಸ್ವತಂತ್ರವಾದ ಸಂಸಾರದ ಆರಂಭವು ಹೀಗಾಯಿತು. ಪತಿಯು ತನ್ನ ಅಧೀನದಲ್ಲಿ ಎಷ್ಟರಮಟ್ಟಿಗೆ ಇರುವನೆಂಬದನ್ನು ಅರಿತುಕೊಳ್ಳುವದಕ್ಕಾಗಿ ಸುಭದ್ರೆಯು ಅನೇಕವಾದ ಹಂಚಿಕೆಗಳನ್ನು ಮಾಡಿ ನೋಡಿದಳು. ಇಂಥದೊಂದು ಕೆಲಸ ಮಾಡೆಂದು ವಿಜಯರಾಯನು ಹೇಳಿದರೆ ಮಂದಮಾಡಿ ಹೆಂಡತಿಯು "ಈಗ ನನಗೆ ಬೇಸರ" ವೆಂದು ಹೇಳುವಳು. ಪತಿಯು ಬೇಡವೆಂದು ಹೇಳಿದ್ದನ್ನು ಸುಭದ್ರೆಯು ಹಟಕ್ಕಾಗಿ ಮಾಡಿ ತೀರುವಳು. ವಿಜಯರಾಯನು ಇದೆಲ್ಲ ವಿನೋದವೆಂದು ತಿಳಿದು ನಕ್ಕು ಸುಮ್ಮನಿರುವನು.

ಸಲಿಗೆಯು ತಲೆಗೇರಿದ್ದರಿಂದ ಪತಿಯ ಆಜ್ಞೆಯನ್ನು ಮೀರುವದೇ ಸುಭದ್ರೆಯ ಅಭೀಷ್ಟೆಯಾಯಿತು. ಅವನಿಗೇನು ಬೇಕು ಬೇಡೆಂಬದರ ಅರಿಕೆಯು ಅವಳಿಗಿರಲಿಲ್ಲ. ಮಾತು ಕೇಳುವ ಗಂಡನಿದ್ದರೆ ಹೆಂಡತಿಯು ಅವನನ್ನು ಜೀತದ ಆಳಿಗಿಂತ ಕಡೆಯಾಗಿ ಮಾಡುವದುಂಟು. ಬರಬರುತ್ತ ವಿಜಯರಾಯನು ಕೇವಲ ಪರತಂತ್ರನಾಗಿ ಹೋದನು. ಆಪ್ತರಿಷ್ಟರನ್ನಾಗಲಿ, ಸ್ನೇಹಿತರನ್ನಾಗಲಿ ಮನೆಗೆ ಕರೆತಂದು ಅವರಿಗೆ ಆದರ ಉಪಚಾರಗಳನ್ನು ಮಾಡುವೆನೆಂದರೆ ಅದು ಅವನ ಸ್ವಾಧೀನದಲ್ಲಿ ಇರಲಿಲ್ಲ.

ವಿಜಯರಾಯನ ಭಾವಮೈದುನನೂ, ಸ್ನೇಹಿತನೂ ಆದ ತಿರುಮಲರಾಯ ದೇಸಾಯಿಯು ವಿಜಯರಾಯನ ಸಮಾಚಾರಕ್ಕಾಗಿ ಒಂದು ದಿನ ಅವನ ಮನೆಗೆ ಬಂದನು. ಪ್ರತ್ಯಕ್ಷ ತನ್ನ ತಂಗಿಯಾದ ವತ್ಸಲೆಯ ಗಂಡನು ಬಂದಿರುವನೆಂದು ಕಂಡು ವಿಜಯರಾಯನು ಸಂತುಷ್ಟನಾಗಿ ಅವನಿಗಾಗಿ ಚಹಾ ಉಪಹಾರಗಳನ್ನು ಮಾಡೆಂದು ತನ್ನ ಪ್ರೀತಿಯ ಅರ್ಧಾಂಗಿಗೆ ಆಜ್ಞೆಗೈದನು.

ಮೊದಲಿಗೇ ವತ್ಸಲೆಗೂ ಸುಭದ್ರೆಗೂ ವೈಮನಸ್ಸು. ವತ್ಸಲೆಯ ಗಂಡನಿಗೆ ಅವಳು ಆದರಾತಿಥ್ಯವನ್ನು ತೋರಿಸುವಳೆ? "ಮುಂಜಾವಿನಿಂದ ಸಂಜೇವರೆಗೆ ಇದೇ ಉಸಾಬರಿಯನ್ನೇ ಮಾಡುತ್ತ ಕುಳಿತರೆ ಉಳಿದ ಕೆಲಸಗಳನ್ನಾರು ಮಾಡುವರು? ಬೀಗನಲ್ಲಿ ನಿಮಗೆ ಪ್ರೇಮವು ಹೆಚ್ಚಾಗಿದ್ದರೆ ಒಲೆಯ ಮುಂದೆ ಕುಳಿತು ಬೇಕಾದ್ದು ಮಾಡಿ ಹಾಕಿರಿ" ಎಂಬ ತಿರುಮಲ

ರಾಯನಿಗೆ ಕೇಳಿಸುವ ಹಾಗೆ ಆ ಉದ್ಧತೆಯು ನುಡಿದಳು.

ವಿಜಯರಾಯನಿಗೆ ತುಸು ಕೋಪ ಬಂದಿತು. ರುದ್ರಾವತಾರವನ್ನು ತಾಳುವ ಸಮಯವಿದಲ್ಲೆಂದು ನೆನಿಸಿ ಆವನು ಸುಮ್ಮನಿದ್ದನು. ಭಗಿನೀ ಪತಿಯೂ, ಶ್ರೀಮಂತನೂ, ತನ್ನ ಸ್ನೇಹಿತನೂ, ಸಹಾಧ್ಯಾಯಿಯೂ ಆಗಿದ್ದ ತಿರುಮಲರಾಯನಿಗಾಗಿ ಉತ್ಸವದ ಭೋಜನ ಸಮಾರಂಭವನ್ನು ಮಾಡಿಸಬೇಕೆಂದು ಅವನು ಯೋಚಿಸುತ್ತಿರುವಾಗಲೆ ಚಂಡಿಯಾಗಿದ್ದ ಅವನ ಹೆಂಡತಿಯು ತಲೆಕಟ್ಟಿಕೊಂಡು ಮಲಗಿದ್ದಳು. ಈ ವಿಚಿತ್ರವನ್ನೆಲ್ಲ ಕಂಡು ತಿರುಮಲರಾಯನಿಗೆ ನಗೆ ಬಂದಿತು. ವಿಜಯರಾಯನು ತನಗೆ ಆದರವನ್ನು ತೋರಿಸುತ್ತಿದ್ದರೂ ಮನೆಯಲ್ಲಿ ಅವನ ಆಟವು ಸಾಗದಿರುವದನ್ನು ಕಂಡು ಅವನಿಗೆ ವಿಷಾದವಾಯಿತು. ತನ್ನ ಹೆಂಡತಿಯಾದ ವತ್ಸಲೆಯ ಮುಖದಿಂದ ಅವನು ಸುಭದ್ರೆಯ ಗುಣಾನುವಾದವನ್ನು ಕೇಳಿಯೇ ಇದ್ದನು. ಹಾಗೂ ಹೀಗೂ ಭೋಜನದ ಶಿಷ್ಟಾಚಾರವು ಮುಗಿಯಿತು.

ಭೋಜನೋತ್ತರ ಮಾತಿಗೆ ಮಾತು ಬಂದಾಗ ತಿರುಮಲರಾಯನು ವಿಜಯರಾಯನ ಸಂಸಾರಸುಖದ ಸಮಾಚಾರವನ್ನು ಕೇಳಿದನು. ಅನಿವಾರ್ಯಕ್ಕಾಗಿ ವಿಜಯರಾಯನಿಗೆ ತನ್ನ ನಿಜವಾದ ಸ್ಥಿತಿಯನ್ನು ಒಪ್ಪಿಕೊಳ್ಳಬೇಕಾಯಿತು. ಹೆಂಡತಿಗೆ ಅನರ್ಥಕರವಾದ ಸಲಿಗೆಯನ್ನು ಕೊಟ್ಟು ಪರಾಧೀನನಾದ ವಿಜಯರಾಯನನ್ನು ತಿರುಮಲರಾಯನು ಬಹುಪರಿಯಾಗಿ ಜರಿದು ಅಂದದ್ದು: “ವಿಜಯರಾಯ, ನೀನು ಕಾಲೇಜದಲ್ಲಿ ತತ್ವಜ್ಞಾನದ ಪುಸ್ತಕಗಳನ್ನು ಓದಿದವನು, ಸಂಸಾರದ ಅನೇಕವಾದ ಚಿತ್ರಗಳನ್ನು ಪ್ರತ್ಯಕ್ಷ ನೋಡಿದವನು, ಇತಿಹಾಸ ಪುರಾಣ ನಾಟಕ ಕಾದಂಬರಿಗಳಲ್ಲಿ ಬರೆದ ಆ ಚಿತ್ರಗಳ ವರ್ಣನೆಯನ್ನು ಓದಿದವನು; ಇಂಥವನು ಹೀಗೆ ಕೇವಲನಾದ ಸ್ತ್ರೈಣನಾಗಿರುವದನ್ನು ಕಂಡು ನನಗೆ ಬಹಳೇ ವ್ಯಸನವಾಯಿತು. ಸ್ತ್ರೀವಶನಾದವನಲ್ಲಿ ಭಕ್ತಿ, ವಾತ್ಸಲ್ಯ, ಕರ್ತವ್ಯದಕ್ಷತೆ, ಔದಾರ್ಯಾದಿ ಗುಣಗಳ ಲೋಪವೇ ಆಗುವದು. ಕುಲದೀಪಕನೂ, ಕೀರ್ತಿವಂತನೂ, ಸುಖಿಯೂ ಆಗಬೇಕೆಂದು ನೀನು ಸಂಸಾರವನ್ನು ಹೂಡಿದಿಯಲ್ಲ. ಸ್ತ್ರೀವಶನಾದ ನಿನಗೆ ಈ ಮೂರು ಉದ್ದೇಶಗಳಲ್ಲಿ ಯಾವದು ಸಾಧಿಸಿತು? ಅವಿಚಾರಿಯೇ, ನನ್ನಂಥ ಸ್ನೇಹಿತನಿಗೆ ತಾಲಿ ನೀರು ಕೂಡ ಕೊಡಲು ಅಸಮರ್ಥನಾದ ನಿನ್ನ

ಜನ್ಮವು ಸುಟ್ಟಿತು. ಯಮುನಾಬಾಯಿಯವರಂಥ ಮಹಾಸಾಧ್ವಿಯಾದ ತಾಯಿಯ ಪಾದಸೇವೆಯನ್ನು ಕಳಕೊಂಡಿರುವವನಾದ ನೀನು ಪಾಪಿಯಲ್ಲದೆ ಮತ್ತಾರು? ವಿಜಯರಾಯ, ನಿಷ್ಠುರವಾಡಿದ್ದಕ್ಕೆ ಕ್ಷಮಿಸು. ಸ್ನೇಹಿತನ ಅಧಿಕಾರದಿಂದ ನಿನ್ನ ಉಚ್ಛ್ರೇಯವನ್ನು ಬಯಸಿ ಹೀಗೆ ಆಡಿದೆನು."

"ತಿಮ್ಮಾ, ನೀನಾಡಿದ್ದೆಲ್ಲ ಸತ್ಯವೆ. ನಾನು ನಿಂದ್ಯನಾದ ಸ್ತ್ರೈಣನಾಗಿರುವೆನು. ಸುಧಾರಣಾವಾದಿಗಳ ಮಾತು ಕೇಳಿ ಹೆಂಡತಿಯು ನನ್ನ ಸಮಾನಸ್ಕಂಧಳೆಂದು ತಿಳಿದು ನಾನವಳನ್ನು ಅತ್ಯಾದರದಿಂದ ನಡಿಸಿಕೊಂಡೆನು. ಪಾಶ್ಚಿಮಾತ್ಯ ಸ್ತ್ರೀಯರಲ್ಲಿ ಏನು ಗುಣವಿರುವದೋ, ಅವರನ್ನು ಅವರ ಗಂಡಂದಿರು ತಮ್ಮ ಸಮಾನರೆಂದು ತಿಳಿದರೂ ಅವರು ಪತಿಗಳ ತಲೆಯ ಮೇಲೆ ಏರಿ ಕೂಡುತ್ತಿರಲಿಕ್ಕಿಲ್ಲ. ಮೂಢನಾದ ನಾನು ಹೆಂಡತಿಗೆ ಸಲಿಗೆಯನ್ನು ಕೊಟ್ಟು ಅಸುಖಿಯಾಗಿರುವೆನು. ಹೆಂಡತಿಗೆ ನಾನೆಷ್ಟು ಪರಿಯಾಗಿ ಬೋಧಿಸಿದರೂ ಅವಳಿಗೆ ತಿಳುವಳಿಕೆ ಬಾರದು. ಏನು ಮಾಡಲಿ? ಯತ್ನ ಮೀರಿದ ಮಾತಾಗಿದೆ." ಎಂದು ವಿಜಯರಾಯನು ಬಹು ವಿಷಾದದಿಂದ ಮಾತಾಡಿದನು.

"ಹುಚ್ಚನ ಹಾಗೆ ಮಾತಾಡಬೇಡ. ಪ್ರತಾಪರಾಯನು ತ್ರಾಟಿಕೆಯನ್ನು ಮಣಿಸಿದ ಮಂತ್ರವನ್ನು ಕೈಕೊಂಡು ನೋಡು. ಮೀರಿದ ಪಕ್ಷದಲ್ಲಿ "ಮರ್ದನಂ ಗುಣವರ್ಧನಂ" ಎಂಬ ಅಂತಿಮವಾದ ಉಪಾಯವಿದ್ದೇ ಇರುವದು. ತುಸು ಗಂಡಸಿನಂತೆ ವರ್ತಿಸಿ ನೋಡು."

ತಿರುಮಲರಾಯನು ಊರಿಗೆ ಹೋದ ಮರುದಿವಸವೇ ವಿಜಯರಾಯನು ನಿಶ್ಚಯದಿಂದಲೂ ಜಾಣ್ಮೆಯಿಂದಲೂ ಪ್ರತಾಪರಾಯನ ಉಪಾಯಗಳನ್ನು ಯೋಚಿಸಲಾರಂಭಿಸಿದನು. ರಾಮಸಿಂಗನು ಕುದುರೆಯ ನ್ಯೈತಿಕ್ಕಿಲ್ಲವೆಂದು ಹೇಳಿ ವಿಜಯರಾಯನು ಅವನನ್ನು ಬಾರಕೋಲಿನಿಂದ ಹೆಣಬೀಳ ಹೊಡೆದನು. ಸುಭದ್ರೆಯು ಕನಿಕರಪಟ್ಟು ಅವನನ್ನು ಹೊಡೆಯಬಾರದೆಂದು ಗಂಡನಿಗೆ ಹೇಳಹೋದಳು. "ಸುಮ್ಮನಿರು! ನಿನ್ನದಲ್ಲದ ಮಾತಿನಲ್ಲಿ ಬಾಯಿ ಹಾಕಿದರೆ ಒಳಿತಾಗಲಿಕ್ಕಿಲ್ಲ!" ಎಂದು ಅವನು ಒಳ್ಳೇ ಕೋಪಾಟೋಪದಿಂದ ಆಜ್ಞಾಪಿಸಿದನು. ರಾಮಸಿಂಗನಿಗೆ ಬಿದ್ದ ಹೊಡತಗಳನ್ನು ನೋಡಿಯೇ ಸುಭದ್ರೆಯು ತುಸು ಅಂಜಿದ್ದಳು. ಎಂದು ಇಲ್ಲದೆ

ಇಂದು ತನ್ನ ಮೇಲೆ ಗಂಡನು ಸಿಟ್ಟಾಗಿದ್ದು ಕಂಡು ಅವಳು ಮತ್ತಿಷ್ಟು ಅಂಜಿ: ದಳು. ಇದಾಗಿ ಕೆಲವು ಹೊತ್ತಿನ ಮೇಲೆ ಸುಭದ್ರೆಯು ಗಂಡನನ್ನು ಭೋಜ. ನಕ್ಕೆ ಎಬ್ಬಿಸಿದಳು; ಅವನು ಏಳಲಿಲ್ಲ. ತುಸುಹೊತ್ತಿನ ಮೇಲೆ ಮತ್ತೊಮ್ಮೆ ಎಬ್ಬಿಸ ಬಂದಳು, ಆದರೂ ಅವನು ಏಳಲಿಲ್ಲ. ಮೂರನೆಯ ಸಾರೆ ಅವಳು ಗಂಡನ ಬಳಿಗೆ ಬಂದು "ಏಳುವದಿಲ್ಲವೆ ? ನನಗೆ ಹಸಿವೆ ಬಹಳಾಗಿದೆ; ಬಿಟ್ಟು ಊಟಕ್ಕೆ ಕೂಡುವೆನು ನೋಡಿರಿ" ಎಂದು ಅವಳು ತನ್ನ ಪೂರ್ವ ಸ್ವರೂಪವನ್ನು ತಾಳಿ ಕೇಳಿದಳು.

"ತಿನ್ನು ಹೋಗು !"ಎಂದು ವಿಜಯರಾಯನು ಗದ್ದರಿಸಿ ನುಡಿದನು.

ಇಂದಿನ ಮುಹೂರ್ತವು ಚನ್ನಾಗಿ ಇಲ್ಲವೆಂದು ತಿಳಿದು ಸುಭದ್ರೆಯು ಹುದುಗಿಕೊಂಡು ಸುಮ್ಮನೆ ಒಳಮನೆಗೆ ಹೋದಳು. ಇಳಿಹೊತ್ತಾದರೂ ವಿಜಯರಾಯನು ಊಟಕ್ಕೆ ಏಳದಿದ್ದದ್ದು ಕಂಡು ಸುಭದ್ರೆಯು ಹಿಟ್ಟು ಅವ ಲಕ್ಕಿಗಳನ್ನು ತಿಂದು ಕುಳಿತಳು. ಮತ್ತೊಮ್ಮೆ ಗಂಡನನ್ನು ಊಟಕ್ಕೆ ಕರೆ ಯಲು ಅವಳಿಗೆ ಧೈರ್ಯ ಸಾಲಲಿಲ್ಲ. ವಿಜಯರಾಯನಾದರೂ ಪೇಟೆಯಿಂದ ಹಣ್ಣುಹಂಪಲಗಳನ್ನು ತರಿಸಿಕೊಂಡು ತಿಂದನು. ಮಾಡಿದ ಅಡಿಗೆಯು ಹಾಗೆಯೇ ಉಳಿಯಿತು. "ಸಂಜೆಯ ಅಡಿಗೆಯನ್ನಾದರೂ ಮಾಡತಕ್ಕದ್ದೋ ಇಲ್ಲವೊ ?" ಎಂದು ಸುಭದ್ರೆಯು ತುಸು ವಿನೀತೆಯಂತೆ ಕೇಳಿದಳು.

"ನನಗೆ ಗೊತ್ತಿಲ್ಲ !"

ಆ ದಿವಸ ಗಂಡಹೆಂಡರ ನಡುವೆ ಇದಕ್ಕೂ ಹೆಚ್ಚಿಗೆ ಮಾತುಗಳಾಗ ಲಿಲ್ಲ. ವಿಜಯರಾಯನು ಆ ರಾತ್ರಿ ತನ್ನ ಶಾಲು ಹೊದ್ದುಕೊಂಡು ಪಡ ಶಾಲೆಯಲ್ಲಿಯೇ ಮಲಗಿಕೊಂಡನು. ಮರುದಿವಸ ಬೆಳಗಿನಲ್ಲಿ ಎದ್ದು ಅವನು ಅಡಿಗೆಯವಳಿಗೂ, ಒಕ್ಕಲಗಿತ್ತಿಗೂ, ಕೈಯಾಳಿಗೂ ಅವರವರಿಗೆ ಸಲ್ಲತಕ್ಕ ಸಂಬಳಗಳನ್ನು ಕೊಟ್ಟು ಮನೆಬಿಟ್ಟು ಹೊರಗೆ ಹಾಕಿದನು. ರಾಮಸಿಂಗ ನಂತೂ ಬಡಿಸಿಕೊಂಡವನು ಮನೆಗೆ ಬರಲೇ ಇಲ್ಲ.

ಈ ಅನಾಹೂತದ ಅರ್ಥವೇನೆಂಬದು ಸುಭದ್ರೆಗೆ ತಿಳಿಯದಾಯಿತು. ಗಂಡನ ಮೋರೆ ನೋಡಲು ಅದು ಉಗ್ರವಾಗಿ ಕಾಣುತ್ತಿತ್ತು. ಅವನನ್ನು ಮಾತಾಡಿಸಲು ಅವಳಿಗೆ ಧೈರ್ಯ ಸಾಲಲಿಲ್ಲ. ಕೈಯಲ್ಲಿ ಜೀವ ಹಿಡುಕೊಂಡು ಅವಳು ಮೆಲ್ಲನೆ "ಅಡಿಗೆಯವಳನ್ನು ಹೊರಗೆ ಹಾಕಿದ್ದೇಕೆ ? ಮನೆಯಲ್ಲಿ

ಕೆಲಸ ಹೇಗೆ ಸಾಗಬೇಕು ? ” ಎಂದು ಕೇಳಿದಳು. ಉತ್ತರವೇ ಇಲ್ಲ. ನಾಲ್ಕೂ ಮನೆಯ ಕಸ ತೆಗಿಯಬೇಕಾದರೆ ಅವಳಿಗೆ ದಮ್ಮಯ್ಯ ದಪ್ಪಯ್ಯ ಆಗಿಹೋಯಿತು. ನೀರು ಹೊತ್ತು ಅಡಿಗೆ ಮಾಡಬೇಕಾದರೆ ಸುಭದ್ರೆಯ ಕಣ್ಣೀರು ಕೆನ್ನೆಗೆ ಬಂದಿತ್ತು. ವಿಜಯರಾಯನು ಬೇಕುಬೇಡನ್ನದೆ ಮೌನ ದಿಂದ ಉಣ್ಣುತ್ತಿರುವದನ್ನು ಕಂಡು “ ಮಾತಾಡುವದಿಲ್ಲವೇಕೆ ? ನನ್ನಿಂದೇ ನಾದರೂ ತಪ್ಪಾಗಿರುವದೇನು ? ” ಎಂದು ಹೆಂಡತಿಯು ಕೇಳಿದಳು. ಮತ್ತಾ ದರೂ ಉತ್ತರವಿಲ್ಲ. ಪ್ರೌಢೆಯಾದ ಆ ತರುಣಿಗೆ ದುಃಖವಾಗಿ ಟಟಟನೆ ಕಣ್ಣೀರು ನೆಲಕ್ಕೆ ಉದುರಿದವು.

ಆ ರಾತ್ರಿಯಾದರೂ ಬೇರೆ ಹಾಸಿಗೆ ಮಾಡಿಕೊಂಡು ಮಲಗಿದ ತನ್ನ ಪತಿಯ ಸಮೀಪಕ್ಕೆ ಹೋಗಿ ತನ್ನ ಮೇಲೆ ಇಷ್ಟು ಕೋಪವೇಕೆಂದು ಕೇಳ ಹೋದಳು. ತನ್ನನ್ನು ಮುಟ್ಟಕೂಡದೆಂದು ವಿಜಯರಾಯನು ನಿಷ್ಠುರನಾಗಿ ಹೇಳಿ ಮುಸುಕಿಟ್ಟುಕೊಂಡು ಮಲಗಿದನು. ಸುಭದ್ರೆಯು ಅವನ ಕಾಲುದೆಸೆ ಯಲ್ಲಿ ಕುಳಿತು ಮುಳುಮುಳು ಅತ್ತಳು. ಅಪರಾಧವಿಲ್ಲದೆ ತನ್ನ ಮೇಲೆ ಪತಿಯು ಇಷ್ಟೇಕೆ ಮುನಿದನೆಂಬ ಚಿಂತೆಗಾಗಿ ಅವಳ ಕಣ್ಣಿಗೆ ಕಣ್ಣು ಹತ್ತ ಲೊಲ್ಲದು. ಸರಿರಾತ್ರಿಯಾದರೂ ಅವಳು ತನ್ನ ಸ್ಥಳವನ್ನು ಬಿಟ್ಟೇಳಲಿಲ್ಲ. ಪೃಥಕ್‌ಶಯ್ಯೆಯು ನಾರಿಯರಿಗೆ ಮರಣಸಮಾನವಾದ ವ್ಯಸನವೆಂಬದು ಸುಳ್ಳಲ್ಲ.

ಹೆಂಡತಿಯು ಹೀಗೆ ಹಣ್ಣಾಗಿರುವದನ್ನು ಕಂಡು ತನ್ನ ಕಾರ್ಯವು ಸಾಧಿಸಿತೆಂದು ನಂಬಿ ವಿಜಯರಾಯನಿಗೆ ಸಂತೋಷವೂ, ಅವಳ ದುರ್ದೆಶೆ ಯನ್ನು ಕಂಡು ಕನಿಕರವೂ ಉಂಟಾಗಿ ಅವನಿಗೂ ನಿದ್ರೆ ಬರಲೇ ಇಲ್ಲ. ಅವನು ಸುಭದ್ರೆಯ ಚಲನವಲನಗಳನ್ನು ಮುಸುಗಿನೊಳಗಿಂದಲೇ ನಿರೀಕ್ಷಿಸು ತ್ತಿದ್ದನು.

“ ನಾನು ನನ್ನ ಪಾತಿವ್ರತ್ಯದ ಸನ್ಮಾರ್ಗದಿಂದ ಒಂದು ಹೆಜ್ಜೆಯನ್ನಾ ದರೂ ಅಡ್ಡತಿಡ್ಡಾಗಿ ಇಟ್ಟಿಲ್ಲ. ಹಾಗಿರಲು ಪತಿಯ ಮನಸ್ಸು ಕ್ಷುಬ್ಧವಾಗಿ ರುವ ಕಾರಣವೇನು ? ನಾನು ಅವಿನೀತೆಯಾಗಿ ವರ್ತಿಸಿದೆನೇನು ? ಸತ್ಯ ! ಅತ್ತೆಯವರ ಕೂಡ ಚನ್ನಾಗಿ ನಡಕೊಳ್ಳಲಿಲ್ಲ. ನಾದಿನಿಯಾದ ವಸ್ಸಲಾ ಬಾಯಿಯವರೊಡನೆ ನಿಷ್ಕಾರಣವಾಗಿ ವ್ಯಾಜ್ಯ ಮಾಡಿದೆನು. ಅವರಿಗೆ ಉಡು

ಗರೆಯಾಗಿ ಹತ್ತೆಂಟು ಜವಳಿಗಳನ್ನಾದರೂ ಕೊಡಬಹುದಾಗಿದ್ದರೂ ಒಪ್ಪತ್ತು ಅವರು ನನ್ನ ಸೀರೆಯನ್ನು ಟ್ಟುಕೊಂಡಿರಲು ಉನ್ಮತ್ತಳಾದ ನಾನು ಅದನ್ನು ಕಳೆಸಿಕೊಂಡೆನು. ಪತಿಯು ಪ್ರೀತಿಯ ತಂಗಿಗೆ ನಾನು ಅನಾದರವನ್ನು ತೋರಿಸಿದರೆ ಅವರು ಕ್ಷಮಿಸುವರೆ ? ಪತಿಯು ಬಾಯಿಯಿಂದ ಮಾತುಗಳು ಹೊರಡುವದಕ್ಕೆ ಮುಂಚಿತವಾಗಿ ಆ ಆಜ್ಞೆಯನ್ನು ಶಿರಸಾವಹಿಸಲಿಕ್ಕೆ ನಾನು ಸಿದ್ಧಳಾಗಿರತಕ್ಕವಳು, ಬೇಕಾಗಿ ನಾನು ನನ್ನ ಪತಿದೇವರ ಆಜ್ಞೆಗಳನ್ನು ಉಲ್ಲಂಘಿಸಿದೆನು. ಇಂಥ ಅಕ್ಷಮ್ಯವಾದ ಅನೇಕ ಅಪರಾಧಗಳನ್ನು ನಾನು ಮಾಡಿದೆನಲ್ಲೆ ? ಬೇಡಿಬೇಡಿದ ಹಾಗೆ ನಿನ್ನ ಅಭೀಷ್ಟೆಗಳನ್ನು ಪೂರೈಸುವ ಪ್ರಾಣಕಾಂತರ ಮನಸ್ಸು ಖಿನ್ನವಾಗುವಂಥ ಕೃತಿಗಳನ್ನು ಮಾಡಿ, ಸುಭದ್ರೆ, ಅಪರಾಧವೇನೆಂದು ನೀನು ಅದೇ ಪತಿರಾಯರನ್ನು ಕೇಳಿದಿಯಾ ? " ಎಂದು ಯೋಚಿಸುತ್ತ ಪಶ್ಚಾತ್ತಾಪದ ಭರದಿಂದ ನಮ್ರಳಾಗಿ ಕೆಲಹೊತ್ತು ಕುಳಿತ ಬಳಿಕ ಸುಭದ್ರೆಯು ತನ್ನ ಪ್ರಾಣಕಾಂತನ ಪಾದಗಳನ್ನು ಗಟ್ಟಿಯಾಗಿ ಹಿಡಿದು "ಈ ತೊತ್ತಿನ ಅಪರಾಧಗಳನ್ನು ಕ್ಷಮಿಸುವಿರೇನು? " ಎಂದು ಬಹು ಆರ್ತಳಾಗಿ ಕೇಳಿದಳು.

ವಿಜಯರಾಯನು ಮುಸುಗು ತೆಗೆದು " ಈಗ ನೀನು ಮಲಗಲಿಕ್ಕೆ ಹೋಗು. ಇನ್ನು ಹದಿನೈದು ದಿವಸಗಳ ವರೆಗೆ ನೀನು ವಿನೀತೆಯಾಗಿ ವರ್ತಿಸಿದ್ದು ನಾನು ಮನಮುಟ್ಟಿ ಕಂಡೆನೆಂದರೆ ಕ್ಷಮೆಯ ವಿಚಾರವನ್ನು ಮಾಡುವೆನು " ಎಂದು ಅವನು ಉದಾಸೀನನಂತೆ ನುಡಿದರೂ ಅವನ ಮನಸ್ಸು ಕರಗಿ ನೀರಾಗಿತ್ತು.

" ನನ್ನ ದೇವರೆ, ಹದಿನೈದು ದಿವಸಗಳವರೆಗೇಕೆ, ಯಾವಜ್ಜೀವ ನಾನು ಕೇವಲ ವಿನೀತೆಯಾಗಿ ವರ್ತಿಸುವೆನು. ಈ ಪಾದಗಳಿಗಿಂತಲೂ ಪವಿತ್ರವಾದ ವಸ್ತುವು ಈ ಜಗತ್ತಿನಲ್ಲಿ ನನಗೆ ಮತ್ತೊಂದಿಲ್ಲ. ಈ ಪಾದಗಳ ಸಾಕ್ಷಿಯಾಗಿ ನಾನು ಪ್ರಮಾಣ ಮಾಡಿ ಹೇಳುತ್ತೇನೆ. ನಾನು ಯಾವಾಗಲೂ ಪ್ರಾಣಕಾಂತರಿಗೆ ಪ್ರಿಯವಾದದ್ದನ್ನೇ ಮಾಡುತ್ತಲಿರುವೆನು. ಆಯಿತೆ ! ಈಗಲಾದರೂ ನನ್ನನ್ನು ಕ್ಷಮಿಸಬೇಕು " ಎಂದು ನುಡಿದ ಆ ತಪಸ್ವಿನಿಯು ಪತಿಯ ಪಾದದ ಮೇಲೆ ಹಣೆ ಇಟ್ಟಳು.

ವಿಜಯರಾಯನು ಭರದಿಂದೆದ್ದು ತನ್ನ ಪ್ರಾಣಕಾಂತೆಯನ್ನು ಎತ್ತಿ

ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಪ್ರೇಮದಿಂದ ಅವಳ ಗದ್ದವನ್ನು ಪಿಡಿದು "ಪ್ರಿಯೆ ಕ್ಷಮಿಸಿರುವೆನು ಕಂಡಿಯಾ! ನೀನಿನ್ನು ಗುರುಹಿರಿಯರನ್ನು ಪೂಜಿಸುವವಳೂ ಅತಿಥಿ ಅಭ್ಯಾಗತರನ್ನು ಆದರಿಸುವವಳೂ ಆಗಿ ನಿನ್ನ ಪತಿಯಾದ ನನ್ನ ಕೀರ್ತಿಯು ಹೆಚ್ಚಾಗುವಂತೆಯೂ ವರ್ತಿಸಿದರೆ ಗೃಹಮೇಧಿಗಳಾದ ನಾವು ಐಹಿಕಸುಖದ ಸ್ವಾರಸ್ಯವನ್ನು ಸೇವಿಸಿ ಪರಲೋಕವನ್ನು ಅಗ್ಗದಲ್ಲಿ ಕಂಡುಕೊಳ್ಳುವ" ಎಂದು ಹೇಳಿದನು.

ಆ ಕಾಲದಲ್ಲಿ ಸುಭದ್ರೆಯು ಅನುಭವಿಸಿದ ಸುಖಕ್ಕೆ ಪರಿಮಿತಿ ಇರಲಿಲ್ಲ. ಸುಭದ್ರೆಯು ನಿದ್ದೆಗೈದು ಕೃತಾರ್ಥಳಾಗಿಯೇ ಎದ್ದಳು. ಸೂರ್ಯೋದಯದೊಂದಿಗೆ ಸುಭದ್ರೆಯ ಉದಯಕಾಲವಾದರೂ ಪ್ರಾಪ್ತವಾಯಿತು. ನಿರುಪಮಳಾದ ಸತಿಯೆಂದರೆ ಸುಭದ್ರೆಯೇ, ಅತ್ತೆಯ ಆಜ್ಞಾನುವರ್ತಿನಿಯೆಂದರೆ ಅವಳೇ, ಅಷ್ಟರಿಷ್ಟರ ಸುಖಸಮಾಚಾರಗಳನ್ನು ನೋಡುವವಳೆಂದರೆ ಅವಳೇ, ಎಂದು ಲೋಕವೆಲ್ಲ ಹೊಗಳಲಾರಂಭಿಸಿತು.

# ತೊಳೆದ ಮುತ್ತು

ಕರ್ನಾಟಕದಲ್ಲಿ ನಮ್ಮ ಮನೆತನವು ಪ್ರತಿಷ್ಠಿತವಾದದ್ದು. ವರ್ಷಾ ನಮಗೆ ಇನಾಮು ಭೂಮಿಗಳಿಂದ ಎರಡು-ಮೂರು ಸಾವಿರ ರೂಪಾಯಿಗಳ ಉತ್ಪನ್ನ. ನಮ್ಮ ತಂದೆಯವರಾದ ರಾವಬಹಾದ್ದೂರ ಅನಂತರಾಯರು ಡೆಪುಟಿ ಕಲೆಕ್ಟರರಾಗಿ ಪೆನ್‌ಶನ್ನ ತೆಗೆದುಕೊಂಡಿದ್ದರಿಂದ ನಮ್ಮಲ್ಲಿ ಐವತ್ತು-ಅರವತ್ತು ಸಾವಿರ ರೂಪಾಯಿದ ಗಂಟಿರಬಹುದೆಂದು ಜನರ ತರ್ಕ. ಜನರ ತರ್ಕವಾದರೂ ತಪ್ಪಾದದ್ದಲ್ಲ.

ನಮ್ಮ ತಂದೆತಾಯಿಗಳಿಗೆ ನಾವು ಮೂರು ಮಂದಿ ಮಕ್ಕಳು. ಹಿರಿಯು ಳಾದ ಸತ್ಯಭಾಮೆಯನ್ನು (ನಾವು ಭಾಮಕ್ಕನೆನ್ನುತ್ತೇವೆ) ಶಹಾಪುರದಲ್ಲಿ ಲಕ್ಷಾಧೀಶರಾದ ತಮ್ಮಣ್ಣನಾಯಕರ ಮಕ್ಕಳಾದ ಶೇಷಗಿರಿನಾಯಕರಿಗೆ ಕೊಟ್ಟಿದೆ. ನಡುವಿನವನು ನಾನು. ದೊಡ್ಡವರ ಮಗನಾದ ನನ್ನ ಮದು ವೆಯು ಬೇಗನೆ ಆಯಿತು. “ವೆಂಕಟರಾಯರ ಬುದ್ಧಿ ಬಹಳ ಚುರುಕು; ಈ ಸಾರೆ ಅವರು ಮ್ಯಾಟ್ರಿಕ್ಯೂಲೇಶನ್ನದಲ್ಲಿ ಹೇಗೆ ‘ನಾಪಾಸ’ ಆದರೋ ತಿಳಿಯಲಿಲ್ಲ.” ಎಂದು ನನ್ನ ತಂದೆಯವರ ಸ್ತುತಿಪಾಠಕರು ಹಳಹಳಿಸಿದರು. ಈ ಮೊದಲೆಯೇ ನಾನು ಎರಡು ಸಾರೆ ‘ನಾಪಾಸ’ ಆಗಿದ್ದೆನು. “ಏನು ದೊಡ್ಡ ಮಾತು? ಪಾಸಾಗದಿದ್ದರೆ ಇಲ್ಲ. ಪರೀಕ್ಷೆ ಪಾಸಾದರೆಯೇ ವೆಂಕ ಟೇಶನ ಹೊಟ್ಟೆ ತುಂಬುತ್ತದೆ ಅಂತಲ್ಲ!” ಎಂದು ಪುತ್ರವತ್ಸಲರಾದ ನನ್ನ ತಂದೆಯವರು ಹೇಳಿದರು. ತಂದೆತಾಯಿಗಳು ನನ್ನ ಮೇಲೆ ಹೆಚ್ಚಾದ ಮಮತೆ ಮಾಡುತ್ತಿರುವದರಿಂದಲೂ ನಾನು ಗೃಹಸ್ಥಾಶ್ರಮಿಯಾಗಿ ೩-೪ ವರ್ಷಗಳಾಗಿರುವದರಿಂದಲೂ ನಾನು ಮೂರು ಸಾರೆ ಮ್ಯಾಟ್ರಿಕ್ಯುಲೇಶನ್ ದಲ್ಲಿ ನಾಪಾಸ ಆದೆನು. ಮುಂದಿನ ವರ್ಷ ನಾನೂ ನನಗಿಂತ ನಾಲ್ಕು ವರ್ಷ ಚಿಕ್ಕವನಾದ ನನ್ನ ತಮ್ಮ ಮಾಧವನೂ ಕೂಡಿಯೇ ಆ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದೆವು. ಮಾಧವನು ತೇರ್ಗಡೆ ಹೊಂದಿದವರಲ್ಲಿ ಮೊದಲನೆ ಯವನು; ಶಂಕರಸೇಟ್ ಸ್ಕಾಲರನೂ ಆದ್ದರಿಂದ ಅವನ ಪ್ರಶಂಸೆಗೆ ಅಳತೆ ಯಿರಲಿಲ್ಲ. ಆಗಲಿ! ನಿಂದಕರನ್ನು ನೋಡಿರಿ. ಅವರು ಮಾಧವನ ಸ್ತುತಿ

ಮಾಡಬೇಕಾದರೆ ನನ್ನನ್ನು ಹಳಿಯಬೇಕೆ? ನಾನಾದರೂ 'ಪಾಸ್' ಆದವರಲ್ಲಿ ಒಂಬತ್ತನೆಯವನು.

ಕಾಂತಾಸಹವಾಸದ ವ್ಯಾಮೋಹಕ್ಕಾಗಿಯೂ ಸ್ನೇಹಿತರೊಡನೆ ವಿನೋದದ ಹರಟೆ ಕೊಚ್ಚಿದ್ದಕ್ಕಾಗಿಯೂ ನನ್ನ ಆವಸ್ಥೆ ಹೀಗಾಯಿತೆಂಬ ವ್ಯಸನದಿಂದ ನಾನಾದರೂ ಮುಂಬಯಿಯಲ್ಲಿ ನಿಂತು ಒಳ್ಳೇ ಮನಸ್ಸು ಕೊಟ್ಟು ವಕೀಲೀ ಪರೀಕ್ಷೆಯ ಅಭ್ಯಾಸ ಮಾಡಿದ್ದರಿಂದ ವರುಷ ತಿರುಗುವದರೊಳಗಾಗಿಯೇ ನಾನು ವಕೀಲನಾದೆನು. ಕೇಳುವದೇನು! ಮಾಧವನು ಪೀ. ಈ. ಪರೀಕ್ಷೆಯಲ್ಲಿ ಅಗ್ರಸ್ಥಾನವನ್ನು ಹೊಂದಿದರೂ ಅವನು ವಿದ್ಯಾರ್ಥಿಯೇ! ನಾನು ತಿಂಗಳೊಂದಕ್ಕೆ ನೂರು ನೂರೈವತ್ತು ರೂಪಾಯಿ ಗಳಿಸುವ ವಕೀಲನು. ಹೀಗೆ ನಮ್ಮ ಮನೆಯಲ್ಲಿ ಸುಖವೂ ಆನಂದವೂ ನೆಲೆಗೊಂಡವು.

ನಾವು ಕರ್ನಾಟಕದ ದೇಶಸ್ಥರು; ಮನೆಯಿಂದ ನೆಟ್ಟಗಿದ್ದವರು; ಇಂಥವರ ಮನೆಯಲ್ಲಿದ್ದ ನಮ್ಮ ಮಾಧವನು ಅವಿವಾಹಿತನಾಗಿ ಉಳಿಯುವದು ಹೇಗೆ? ಇಷ್ಟು ದಿವಸ ಮಾಧವನ ಮದುವೆಯಾಗದೆ ಉಳಿದದ್ದೇ ಹೆಚ್ಚಿನ ಮಾತು. ಹೈದರಾಬಾದದಲ್ಲಿ ಕರೋಡಗಿರಿಯ ಮೋಹತಮಿಾಮರಾದ ಸುಬ್ಬರಾಯರು ನಮ್ಮ ತಂದೆಯವರ ಬಾಲ್ಯದ ಸ್ನೇಹಿತರು. ತಮ್ಮ ಮಗಳನ್ನು ಮಾಧವನಿಗಾಗಿ ಸ್ವೀಕರಿಸಬೇಕೆಂದು ಸುಬ್ಬರಾಯರು ನಾವಿದ್ದಲ್ಲಿಗೆ ಬಂದು ಬಹುಪರಿಯಾಗಿ ಹೇಳಿಕೊಂಡು ಐದು ಸಾವಿರ ರೂಪಾಯಿ ವರದಕ್ಷಿಣೆಯಾಗಿ ಕೊಡಲೊಪ್ಪಿದ್ದರಿಂದ ನಮ್ಮ ತಂದೆಯವರು ಒಪ್ಪಿಕೊಂಡರು. ನಮ್ಮ ತಾಯಿಯವರು ಇನ್ನೂ ಕೆಲವು 'ಬಾಬು'ಗಳನ್ನು ಹೆಚ್ಚಾಗಿ ಬೇಡಿದರೂ ಅವುಗಳನ್ನು ಸುಬ್ಬರಾಯರು ಕೊಡಲೊಪ್ಪಿದ್ದರಿಂದ ಮಾಧವನ ಮದುವೆಯು ನಿಶ್ಚಯವೇ ಆಗಿಹೋಯಿತು.

ಕಥೆ-ಕಾದಂಬರಿ-ನಾಟಕಾದಿಗಳನ್ನು ಓದಿದವನಾದ ಮಾಧವನು "ಇಂಗ್ಲಂಡದಲ್ಲಿ ತರುಣರು ಇಪ್ಪತ್ತೆಂಟು ಮೂವತ್ತು ವರ್ಷದ ಪ್ರಾಯದವರಾಗುವ ವರೆಗೆ ಲಗ್ನಮಾಡಿಕೊಳ್ಳುವದಿಲ್ಲ. ಅವರು ತಮ್ಮ ಇಚ್ಛೆಗೆ ಬಂದ ವಧುವನ್ನೇ ಮದುವೆ ಮಾಡಿಕೊಳ್ಳುತ್ತಾರೆ. ಹೀಗೆ ಬಂಧಿಸಿ ನನ್ನ ಮದುವೆ ಮಾಡುವದು ಸರ್ವಥಾ ಅನ್ಯಾಯವಾದದ್ದು" ಎಂದು ನನಗೂ ತಂದೆಯವರಿಗೂ ಕೂಡಿಯೇ ಬರಕೊಂಡನು. ನಮ್ಮ ತಂದೆಯವರು ತಾವು ಮಾಡಿದ ನಿಶ್ಚಯ

ವನ್ನು ಮುರಿಯುವರೆ? ಕನ್ನೆಯು ಶ್ರೇಷ್ಠಳಾಗಿರುವಳೆಂದೂ ಸುಬ್ಬರಾಯರಂಥ ಮನೆತನಸ್ಥರೊಡನೆ ಸಂಬಂಧ ಮಾಡುವದು ಶ್ಲಾಘ್ಯವಾದದ್ದೆಂದೂ ಬರೆದದ್ದಲ್ಲದೆ ತಮ್ಮ ಆಜ್ಞೆಯನ್ನು ಉಲ್ಲಂಘಿಸಿದ್ದಾದರೆ ಕಾಲೇಜ ಬಿಟ್ಟು ಮನೆಗೆ ಬರಬೇಕಾದೀತೆಂದು ತಂದೆಯವರು ಮಾಧವನಿಗೆ ನಿಷ್ಠುರವಾಗಿ ಬರೆದದ್ದರಿಂದ ಅವನು ಅನಿರ್ವಾಹಕ್ಕಾಗಿ ಸುಮ್ಮನಾದನು.

ಮನೆಯಲ್ಲಿ ಮಾಧವನ ಮದುವೆಯ ಸಮಾರಂಭವು ಅಟ್ಟಹಾಸದಿಂದ ನಡೆದಿತ್ತು. ಬುದ್ಧಿಶಾಲಿಯೂ, ದೃಢಾಂಗನೂ, ಸುಂದರನೂ ಆದ ವರನನ್ನು ಕಂಡು, ವಧೂಪಕ್ಷದವರಿಗೆ ಅತಿಶಯವಾದ ಸಂತೋಷವಾಗಿತ್ತು. ನಮ್ಮ ತಾಯಿಗೂ ಭಾಮಕ್ಕನಿಗೂ ದಾಸಾನುದಾಸರಾಗಿ ನಡಕೊಳ್ಳುತ್ತಿದ್ದರು. ಕಳಸಗಿತ್ತಿಯಾದ ಭಾಮಕ್ಕನ ಜಂಬವನ್ನು ಹಿಡಿಯಬೇಕಾದರೆ, ಸುಬ್ಬರಾಯರಿಗೂ ಅವರ ಪತ್ನಿಗೂ 'ಸಾಕುಬೇಕಾಗಿ ಹೋಯಿತು. ಈ ಲಗ್ನ ಸಮಾರಂಭದಲ್ಲಿ ಎಲ್ಲರ ಮನಸ್ಸಿನಲ್ಲಿಯೂ ಉಲ್ಲಾಸ, ಎಲ್ಲರಿಗೂ ಆನಂದವಾಗಿರುವಾಗ ಮಾಧವನೊಬ್ಬನೇ ಚಿಂತಾಕ್ರಾಂತನಾಗಿ ಕಂಡನು.

ಕನ್ನೆಯ ರೂಪವು ಹೇಗಿರುವದೋ ಎಂದು ನೋಡುವನೆಂದರೆ ಆ ಹುಡುಗಿಯು ಕೆಳಗೆ ಮೋರೆ ಹಾಕಿದವಳು ಅದನ್ನು ಮೇಲಕ್ಕೆ ಎತ್ತಿದ್ದಿಲ್ಲ. ಮೊದಲನೆಯ ದಿವಸ ವಧುವು ಮಾಧವನ ಮುಖವನ್ನು ನಿರೀಕ್ಷಿಸಿ ನೋಡುತ್ತಿದ್ದಳಂತೆ! ಆಗ ಊಟಕ್ಕೆ ಬಂದ ಪುರೋಹಿತಗಿತ್ತಿಯಾದ ಭಾಗಮ್ಮನು ಅದನ್ನು ಕಂಡು, "ಅಯ್ಯೊ! ಏನು ಹುಡುಗೆ ಇದು? ಈಗಲೆ ಗಂಡನ ಮೋರೆಯನ್ನು ಘುಳುಘುಳು ನೋಡುತ್ತಾಳೆ" ಎಂದು ಅಂದಳಂತೆ. ಆ ಮಾತು ಕೇಳಿದಾಗಿನಿಂದ ಮದುಮಗಳು ತಿರುಗಿ ಮೇಲಕ್ಕೆ ಮೋರೆಯನ್ನೆತ್ತಿದ್ದಿಲ್ಲ. ಸಿಕ್ಕಸಿಕ್ಕವರು ಎರೆದದ್ದರಿಂದ ಮದುಮಗಳ ತಲೆಯಲ್ಲಿ ತಪತಪ ಎಣ್ಣೆ ಬಸಿಯುತ್ತಿತ್ತು. ಮೈಯೆಲ್ಲ ಎಣ್ಣೆ ಅರಿಸಿನಗಳ ಜಿಗಿಯು. ಅಷ್ಟಪತ್ರಿಯು ಪುರೋಹಿತನಿಗೆ ಹೋಗಬೇಕಾದ್ದರಿಂದ ಒಂದೂ ಮುಕ್ಕಾಲು ರೂಪಾಯಿಯ ಬೆಲೆಯುಳ್ಳ ಅರಿಸಿನ ಬಣ್ಣದ್ದೊಂದು ವಸ್ತ್ರವನ್ನು ಆ ಕನ್ನೆಗೆ ಉಡಿಸಿದ್ದರು. ಇಷ್ಟು ಸೌಭಾಗ್ಯದ ಮೇಲೆ ವಧುವಿನ ಹೆಸರಂ ಗುಂಡಕ್ಕನು.

ಸಾರಾಂಶ, ಹೆಂಡತಿಯು ಮಾಧವನ ಮನಸ್ಸಿಗೆ ಎಳ್ಳಷ್ಟಾದರೂ ಬರಲಿಲ್ಲ. ಭಾಮಕ್ಕನು ಆಗ್ರಹದಿಂದ ಜಗ್ಗಿಕೊಂಡು ಹೋದರೆ ಮಾತ್ರ ಊಟ

ಣಿಗೆ ಹೋಗುವನು. ಗುಂಡಕ್ಕನು ತಪ್ಪು ತಡೆಯಾದ ಪುರಾಣೀ ಒಗಟು ಗಳನ್ನು ಹಾಕಿ ಗಂಧ ಹಚ್ಚಲಿಕ್ಕೆ ಬಂದರೆ ಅವನು ಕೈ ಕೊಡಲಿಲ್ಲ. "ಮಾಧವಾ, ನಿನ್ನ ಮಾವನು ಕೊಟ್ಟ ಪೀತಾಂಬರವು ಚನ್ನಾಗಿದೆ ಅಲ್ಲವೆ? ನೋಡು ಬಾ!" ಎಂದು ನಮ್ಮ ತಾಯಿಯು ಕರೆದರೆ "ರಮಾಕಕ್ಕೀ, (ನಮ್ಮ ತಾಯಿಗೆ ನಾವು ರಮಾಕಕ್ಕೀ ಎಂದೆನ್ನುತ್ತೇವೆ) ರಮಾಕಕ್ಕಿ, ಈ ಸುದ್ದಿಯನ್ನು ನನ್ನ ಮುಂದೆ ತೆಗಿಯಬೇಡ. ಪೀತಾಂಬರವನ್ನು ಮದುವೆ ಮಾಡಿಕೊಳ್ಳುವದದೇನು?" ಅಂದನು.

ಹೀಗೆ ಮಾಧವನು ಮದುವೆ ಮುಗಿಯುವ ವರೆಗೆ ದುಮುದುಮು ಉರಿಯುತ್ತಿದ್ದನು. ಅಲ್ಪರೆದು ಹೇಳಿಕೊಂಡರೂ ತಂದೆಯವರು ತನ್ನ ವಿನಂತಿಯನ್ನು ಲಕ್ಷಿಸದೆ ತನಗೆ ಇಂಥದ್ದೊಂದು "ಕರಡೆ"ಯನ್ನು ಗಂಟು ಹಾಕಿದರೆ? ಒಳ್ಳೇದು, ಇದರ ಪ್ರಾಯಶ್ಚಿತ್ತವನ್ನು ಅವರಿಗೆ ಉಣ್ಣಿಸದಿದ್ದರೆ ನನ್ನ ಹೆಸರೇ ಮಾಧವನಲ್ಲ; ಆಗ್ರಹಿಯಾದ ತಂದೆಯ ಮಗನು ಆಗ್ರಹಿ ಯಾಗದಿದ್ದರೆ ಒಪ್ಪುವದುಂಟೆ? ಎಂದು ನೆನಿಸಿ ಅವನು ಕಾಲೇಜಕ್ಕೆ ಹೊರಟುಹೋದನು.

ಮುಂದಿನ 'ಮೇ' ತಿಂಗಳಲ್ಲಿ ಮಾಧವನು ಊರಿಗೆ ಬರಲಿಲ್ಲ. ತಂದೆ ಯವರು ಆಗ್ರಹದಿಂದ ಬಾರೆಂದು ಬರೆದರೆ ಅವನು ಊರಿಗೆ ಬಂದ ಮರು ದಿವಸವೇ ಮರಳಿ ಕಾಲೇಜಕ್ಕೆ ಹೋದನು. ಮಾಧವನು ಅಳಿಯತನಕ್ಕೆ ಅತ್ತೇ ಮನೆಗೆ ಹೋಗಲಿಲ್ಲ. ಹೆಂಡತಿ ಮೈನೆರೆದರೆ ಫಲಶೋಭನಕ್ಕೆ ಊರಿಗೆ ಬರಲಿಲ್ಲ. ತಂದೆಯವರು ಬೇರೊಂದು ಮುಹೂರ್ತ ತೆಗೆದು ಮಾಧವನಿಗೆ ಸಿಟ್ಟುಮಾಡಿ ಬರಹೇಳಿಕಳಿಸಿದರೆ, "ನನಗೆ ಇನ್ನೊಂದು ಮದುವೆ ಮಾಡಿದರೆ ಮಾಡಿರಿ; ಇಲ್ಲದಿದ್ದರೆ ನೀವು ಮಾಡುವ ಮಂಗಲಕಾರ್ಯಗಳು ನನಗೆ ಬೇಕಾಗಿಲ್ಲ" ಎಂದು ಪ್ರತ್ಯುತ್ತರ ಕೊಟ್ಟನು.

ತಂದೆಯವರಿಗೆ ಕೋಪ ಬಂದಿತು; ಆದರೆ ಮಗನನ್ನು ಒಗೆಯುವರು ಹೇಗೆ? ಇತ್ತ ಸುಬ್ಬರಾಯರ ಪತ್ರಗಳು ಮೇಲಿಂದ ಮೇಲೆ ಬರುತ್ತಿದ್ದವು; ಇತ್ತ ಮಗನು ಮಾತು ಕೇಳಬೊಲ್ಲನು. ಎಸ್. ಏ. ಆಗಿ ಪ್ರಬುದ್ಧನಾಗಿ ರುವ ಮಗನನ್ನು ಹೆಚ್ಚಿಗೆ ಕೆಣಕಿ ನೋಡಿ ಫಲವೇನು? ಸುಖಿಯಾಗಿದ್ದ ನಮ್ಮ ರಾಯರಿಗೆ ವೃದ್ಧಾಪ್ಯದಲ್ಲಿ ಇದೊಂದು ದೊಡ್ಡ ಚಿಂತೆಯಾಯಿತು.

ಇದ್ದ ಸೊಸೆಯು ರೂಪವತಿಯೂ ಗುಣವತಿಯೂ ಆಗಿದ್ದಳು. ಇನ್ನೊಂದು ಮದುವೆ ಮಾಡುವದೆಂತು? ಒಬ್ಬರ ಮಗಳ ಗೋಳು ಕಟ್ಟಿಕೊಳ್ಳುವದಕ್ಕಿಂತಲೂ ಮಗನು ಹೆಂಡತಿಯಿಲ್ಲದೆ ಕುಳಿತರೂ ಚಿಂತೆಯಿಲ್ಲವೆಂದು ತಿಳಿದು ಅವರು ಮಾಧವನ ದ್ವಿತೀಯ ವಿವಾಹದ ಗೊಡವೆಗೆ ಹೋಗಲಿಲ್ಲ.

ತಂದೆಯವರ ಪ್ರಕೃತಿಯು ದಿನೇದಿನೇ ಅಸ್ವಸ್ಥವಾಗುತ್ತ ನಡೆದದ್ದರಿಂದ ನಾವು ಗ್ರಾಮಾಂತರಕ್ಕೆ ಹೋಗಿ ಇರಬೇಕೆಂದು ವೈದ್ಯರು ಹೇಳಿದರು. ಆನೇರಿಗೆ ನಾವೆಲ್ಲರೂ ಬೆಂಗಳೂರಿಗೆ ಹೋದೆವು. 'ಬಸವನಗುಡಿ' ಎಂಬ ಹೊಸಪೇಟೆಯಲ್ಲಿ ನಮ್ಮ ಪ್ರಾಂತದ ಜನರ ವಸತಿ ಬಹಳವಾಗಿರುವದರಿಂದ ನಾವು ಅಲ್ಲಿಯೇ ಒಂದು ರಮ್ಯವಾದ ಮನೆ ಹಿಡುಕೊಂಡು ಇದ್ದೆವು. ಬೆಂಗಳೂರಿನ ನೀರು ಗಾಳಿಗಳು ಒಳ್ಳೇ ಹಿತಕರವಾಗಿರುವದರಿಂದಲೂ, ಅಲ್ಲಿಯ ಶೋಭೆಯು ಒಳ್ಳೇ ರಮಣೀಯವಾಗಿರುವದರಿಂದಲೂ, ಅಲ್ಲಿರುವ ಬೇರೆ ಸುಖಸಾಧನಗಳು ಸಮೀಚೀನವಾಗಿರುವದರಿಂದಲೂ ತಿಂಗಳು ಹದಿನೈದು ದಿವಸಗಳಲ್ಲಿಯೇ ತಂದೆಯವರ ಪ್ರಕೃತಿಯು ವಾಸಿಯಾಗುತ್ತ ಬಂದಿತು.

ನಾವು ಬೆಂಗಳೂರಿಗೆ ಬಂದ ವರ್ತಮಾನವನ್ನು ಕೇಳಿ ನಮ್ಮ ಭಗಿನೀಪತಿಗಳಾದ ಶೇಷಗಿರಿನಾಯಕರಿಗೂ ಅಲ್ಲಿಗೆ ಬರುವ ಇಚ್ಛೆಯಾಯಿತು. ಶೇಷಗಿರಿನಾಯಕರು ಮೂವತ್ತೈದು ವರುಷದ ಪ್ರಾಯದವರಾದ ತರುಣರು. ಅವರು ದೃಢಾಂಗರಾಗಿದ್ದು ಮೈಬಣ್ಣ ಸಾದಗಪ್ಪಿನದಾಗಿತ್ತು. ನಾಯಕರ ಮುಖದ ಮೇಲೆ ಲಕ್ಷ್ಮಿಯ ಕಳೆಯು ಉಕ್ಕುತ್ತಿತ್ತು. ಹಿರಿಯರು ವರುಷಾ ನಿರಾತಂಕ ಏಳೆಂಟುಸಾವಿರ ರೂಪಾಯಿ ಗಳಿಸುವರು. ಹೊಟ್ಟೆಗಿಲ್ಲದವರು ವಿದ್ಯಾವ್ಯಾಸಂಗವನ್ನು ಮಾಡತಕ್ಕದ್ದೆಂದು ತಮ್ಮಣ್ಣನಾಯಕರ ಅಭಿಪ್ರಾಯವಾದದ್ದರಿಂದ ಶೇಷಗಿರಿ ನಾಯಕರನ್ನು ದೊಡ್ಡೂರ ಶಾಲೆಗೆ ಕಳಿಸಲಿಲ್ಲ. 'ಅಂಕಿ ಮೊಗ್ಗಿ ಅಕ್ಷರ ಬರಹಗಳ ಪೂರ್ತಿ ಶೇಷಗಿರಿ ನಾಯಕರ ವಿದ್ಯಾಭ್ಯಾಸವಾಗಿತ್ತು. ಕನ್ನಡ ಮರಾಠೀ ಅಕ್ಷರಗಳನ್ನು ಅವರು ಮುಕ್ತಾಫಲದಂತೆ ಬರೆಯುತ್ತಿದ್ದರು. ವ್ಯಾಪಾರದ ಲೆಕ್ಕಗಳನ್ನು ಅವರು ತಪ್ಪಿಲ್ಲದೆ ಬಹು ಜಾಗ್ರತೆಯಾಗಿ ಮಾಡುತ್ತಿದ್ದರು. ಶೇಷಗಿರಿನಾಯಕರು ಒಳ್ಳೇ ತೀಕ್ಷ್ಣವಾದ ಬುದ್ಧಿಯುಳ್ಳವರಾಗಿದ್ದ

ರಿಂದ ತಮಗೆ ಉಚ್ಚವಾದ ಶಿಕ್ಷಣವು ದೊರಕಲಿಲ್ಲವೆಂದು ಅವರು ಆಗಾಗ್ಗೆ ವಿಷಾದಪಡುತ್ತಿದ್ದರು. ಪದವೀಧರರಂತೆ ಪೋಷಾಕು ಮಾಡಿಕೊಳ್ಳುವದೂ ಆ ಜನರಂತೆ ವರ್ತಿಸುವದೂ ಅವರಿಗೆ ಸೇರುತ್ತಿತ್ತು. ಉತ್ತಮೋತ್ತಮವಾದ ಜರದ ರುಮಾಲುಗಳನ್ನು ಅವರು ಸುತ್ತಿಕೊಳ್ಳುತ್ತಿದ್ದರು. ಬೆಲೆಯುಳ್ಳ ಕೋಟು ಪಾಟಲೂನುಗಳ ಜೊತೆಗಳು ಅವರಲ್ಲಿ ಹತ್ತೆಂಟು ಇದ್ದವು. ಕಣ್ಣುಗಳು ಚನ್ನಾಗಿ ಕಾಣುತ್ತಿದ್ದರೂ ಅಲಂಕಾರಕ್ಕಾಗಿ 'ಲಾರೆನ್ಸ ಎಂಡ ಮೇಯೊ' ಕಂಪನಿಯಿಂದೆ ಐವತ್ತು ರೂಪಾಯಿದ ಉಪನೇತ್ರಗಳನ್ನು ತರಿಸಿದ್ದರು. ಅವರಿಗೆ ಗಡಿಯಾರದ ಅವಶ್ಯಕತೆ ಇಲ್ಲದಿದ್ದರೂ ಸುಶಿಕ್ಷಿತರು ಗಡಿಯಾರವಿಲ್ಲದೆ ಇರಕೂಡದಾದ್ದರಿಂದ ಅವರ ಕಿಶೆಯಲ್ಲಿ ಚಿನ್ನದ ಗಡಿಯಾರವೂ ಅದಕ್ಕೆ ರತ್ನಖಚಿತವಾದ ಬಂಗಾರದ ಅಂದವಾದ ಸರಪಣಿಯೂ ಇತ್ತು. ವಾಚ್-ಚೇನ, ಮಿಾಟಿಂಗ-ಲೆಕ್ಚರ, ಲೇಡಿಜ-ಜೆಂಟ್ಲಮೆನ್, ಗುಡ್‌ಮಾರ್ನಿಂಗ ಮುಂತಾದ ಅವಶ್ಯವಾದ ಅನೇಕ ಇಂಗ್ಲಿಷ ಶಬ್ದಗಳು ಅವರಿಗೆ ಬರುತ್ತಿದ್ದು ಅವುಗಳನ್ನು ಅವರು ಪ್ರಸಂಗಬಂದಾಗ ಉಪಯೋಗಿಸದಲೆ ಬಿಡುತ್ತಿದ್ದಿಲ್ಲ.

ಇರಲಿ. ಶೇಷಗಿರಿನಾಯಕರು ಜಾತ್ಯಾ ಚತುರರೂ, ವೆಚ್ಚಮಾಡುವದರಲ್ಲಿ ಸಡಿಲು ಕೈಯುಳ್ಳವರೂ ಆಪ್ತರಿಷ್ಟರೊಡನೆ ಪ್ರೇಮದಿಂದ ನಡಕೊಳ್ಳುವವರೂ ಆಗಿದ್ದರು. ಗಂಡಹೆಂಡರು ಪ್ರೇಮದಿಂದಿದ್ದು ಆದರದೊಂದಿಗೆ ವರ್ತಿಸುತ್ತಿದ್ದರು. ಅವರಿಗೆ ರಂಗಣ್ಣನೆಂಬ ನಾಲ್ಕೈದು ವರ್ಷದ ಬಾಲಕನಿದ್ದನು. ಹೀಗೆ ಸುಖಿಯಾಗಿದ್ದ ಶೇಷಗಿರಿನಾಯಕರು ಸಪತ್ನೀಕರಾಗಿ ಬೆಂಗಳೂರಿನಲ್ಲಿ ಕೆಲವು ದಿವಸ ಆನಂದದಲ್ಲಿ ಕಳೆಯಬೇಕೆಂದು ಬಂದಿದ್ದರು. ಅವರಾದರೂ ನಮ್ಮ ಮನೆಯ ಸಮಿಾಪದಲ್ಲಿರುವದೊಂದು ಚಿಕ್ಕ ಬಂಗಲೆ ತೆಗೆದುಕೊಂಡು ಇರಲಾರಂಭಿಸಿದರು.

ಒಂದು ದಿವಸ ಪ್ರಾತಃಕಾಲದಲ್ಲಿ ನಾನೂ ನಮ್ಮ ತಮ್ಮನಾದ ಮಾಧವರಾಯನೂ (ಮಾಧವನು ಎಂ. ಎ. ಆದಬಳಿಕ ನಾವೆಲ್ಲರೂ ಅವನಿಗೆ ಮಾಧವರಾಯನೆನ್ನುತ್ತೇವೆ.) ಕೂಡಿ ಭಾಮಕ್ಕನ ಮನೆಗೆ ಉಪಹಾರಕ್ಕೆ ಹೋದೆವು. ಅಲ್ಲಿಯ ವ್ಯವಸ್ಥೆ ನೋಡಿರಿ: ಬಂಗಲೆಯ ಪ್ರಶಸ್ತವಾದ ಒಂದು ಭಾಗದಲ್ಲಿ ಒಂದು ವರ್ತುಲಾಕಾರದ ಮೇಜು ಇಟ್ಟಿದ್ದು ಅದರ ಸುತ್ತಲೂ ನಾಲ್ಕಾರು ಅಂದವಾದ ಕುರ್ಚಿಗಳನ್ನಿಟ್ಟಿದ್ದರು. ಚಿತ್ರಮಯವಾದ ಬನಾತ

ವನ್ನು ಮೇಜಿನ ಮೇಲೆ ಹಾಸಿದ್ದು, ಮಧ್ಯದಲ್ಲಿ ಪುನಗು ಕಸ್ತೂರಿಯ ಊದಿನ ಕಡ್ಡಿಗಳುಳ್ಳ ಬೆಳ್ಳಿಯ ಗಿಡವು ಸುಗಂಧಮಯವಾದ ಹೊಗೆಯನ್ನು ತೂರುತ್ತಿತ್ತು. ಬೆಳ್ಳಿಯ ಹೂಜಿಗಳಲ್ಲಿ ವಿವಿಧವರ್ಣದ ಪುಷ್ಪಗಳನ್ನಿರಿಸಿ ಅವುಗಳನ್ನು ಊದಿನ ಕಡ್ಡಿಯ ಗಿಡದ ಸುತ್ತಲೂ ಪರಿಷ್ಕಾರವಾಗಿ ಇಟ್ಟಿದ್ದರು. ನಾಲ್ಕು ಬೆಳ್ಳಿಯ ಹರಿವಾಣಗಳಲ್ಲಿ, ಕಂಡರೆ ಬಾಯಿಗೆ ನೀರು ಬರುವಂಥ ಉಪಹಾರದ ಪಕ್ವಾನ್ನಗಳು ಒಳಿತಾಗಿ ಶೋಭಿಸುತ್ತಿದ್ದವು. ಹೆಚ್ಚಿದ ಸೇಬುಗಳ ತುಂಡುಗಳೂ, ಸುಲಿದ ಕಿತ್ತಳೆಗಳ ಪಳುಕುಗಳೂ, ದ್ರಾಕ್ಷದ ಗೊಂಚಲುಗಳೂ, ಮಾಣಿಕದ ಪ್ರಭೆಯನ್ನು ಹೀಯಾಳಿಸುವಂಥ ದಾಳಿಂಬದ ಬೀಜಗಳ ಗೋಪುರಗಳೂ ಅನೇಕ ಪ್ರಕಾರದ ಪಾತ್ರೆಗಳಲ್ಲಿ ತುಂಬಿಕೊಂಡಿದ್ದವು.

ನಾನೂ, ಮಾಧವನೂ, ನಾಯಕರೂ, ಭಾಮಕ್ಕನೂ ಹೀಗೆ ನಾಲ್ಕೂ ಜನರು ಉಪಹಾರಕ್ಕೆ ಕುಳಿತೆವು.

"ನಾಯಕರ, ನಿಮ್ಮಲ್ಲಿಯ ವ್ಯವಸ್ಥೆ ಚನ್ನಾಗಿದೆ. ಆದರೂ ನಿಮಗಿನ್ನೂ ಯುರೋಪಿಯನ್ ವ್ಯವಸ್ಥೆಯು ಚನ್ನಾಗಿ ಸಾಧಿಸಿಲ್ಲ. ಪದಾರ್ಥಗಳನ್ನೆಲ್ಲ ಹೀಗೆ ಒಮ್ಮೆಲೇ ತಂದು ಒಟ್ಟತಕ್ಕದ್ದಲ್ಲ. ಬೆಳ್ಳಿಬಂಗಾರದ ಪಾತ್ರೆಗಳಿಗಿಂತ ಚೀನಾ ಭಾಂಡಗಳು ಪ್ರಶಸ್ತವಾದವುಗಳು. ಹೀಗೆ ಇನ್ನೂ ಅನೇಕ ಸೂಚನೆಗಳನ್ನು ಮಾಡಬಹುದು" ಎಂದು ಮಾಧವರಾಯನು ಹೇಳಿದನು.

"ಸೂಚನೆ ಮಾಡಲಿಕ್ಕೆ ಅಡ್ಡಿ ಇಲ್ಲ, ಆದರೂ ಭಾಟವಡೇಕರ, ಕರಂದೀಕರ, ಆಜರೇಕರ, ಗೋಖಲೆ, ಜೋಗಳೇಕರ ಮುಂತಾದ ಪಾಶ್ಚಾತ್ಯ ಸುಧಾರಣಾಗ್ರಾಹಿಗಳ ಮನೆಯಲ್ಲಿ ಇಂಥದೇ ವ್ಯವಸ್ಥೆ ಇರುವದು" ಎಂದು ನಾಯಕರು ಹೇಳಿದರು.

"ಯಾವದೇ ಮಾತಿನಲ್ಲಿಯಾಗಲಿ, ಪ್ರಗತಿಗೆ ಪ್ರತಿಕೂಲವಾದ ಮಾತುಗಳನ್ನು ತೆಗೆದುಹಾಕುವದೂ ಅದಕ್ಕೆ ಅನುಕೂಲವಾದವುಗಳನ್ನು ಸಂಗ್ರಹಿಸುವದೂ ಸುಧಾರಣೆಯೆಂದೆನಿಸುವದಷ್ಟೇ? ಈ ನಮ್ಮ ಉಪಹಾರದ ಉಪಕರಣಗಳಲ್ಲಿ ಸೌಕರ್ಯಕ್ಕೆ ಪ್ರತಿಕೂಲವಾದವುಗಳಾವವು ಹೇಳಬಾರದೆ, ಪಂಡಿತಜೀ?" ಎಂದು ನಾನು ಮಾಧವರಾಯನನ್ನು ಕುರಿತು ಪ್ರಶ್ನಮಾಡಿದೆನು.

ಮಾಧವನು ತುಸು ಚಕಿತನಾಗಿ "ಅಣ್ಣಾ, ಸುಧಾರಣೆಯ ಮಾತುಗಳು ಬೇರೆ, ಶಿಷ್ಟಾಚಾರದ ಮಾತುಗಳು ಬೇರೆ. ಬ್ರೆಕಫಸ್ಟ (ಉಪಹಾರ),

ಟೀ (ಚಹ) ಮುಂತಾದ ಮಾತುಗಳಲ್ಲಿ ನಾವು ಯುರೋಪಿಯನ್ ಪದ್ಧತಿಯನ್ನೇ ಅನುಕರಿಸಬೇಕು. ಅವರಲ್ಲಿಯ ಕೆಲವು ಆಚಾರಗಳು ಅಪದ್ಧವಾಗಿ ಕಂಡರೂ ಶಿಷ್ಟಾಚಾರವೆಂದು ನಾವಾದರೂ ಅವರಂತೆಯೇ ಮಾಡತಕ್ಕದ್ದು" ಎಂದು ಹೇಳಿದನು.

"ಏನು ? ಯುರೋಪಿಯನ್ನರೇ ಶಿಷ್ಟರು, ಅವರು ಮಾಡುವದೇ ಶಿಷ್ಟಾಚಾರವೆ ? ನಾವೇಕೆ ಶಿಷ್ಟರಲ್ಲ ? ನಮ್ಮ ಆಚಾರಗಳೇ ಶಿಷ್ಟಾಚಾರವೆಂದು ಅವರು ಅನುಕರಿಸಲಿ ! ಮಾಧವರಾಯ, ನೀನು ಯುರೋಪಿಯನ್ನರ ಪಂಗ್ತಿಗೆ ಹೋದಾಗ ಅವರ ಆಚಾರಗಳಂತೆ ನಡಕೊಳ್ಳಬೇಕಾದರೆ" ಎಂದು ಭಾಮುಕ್ಕನು ನಗುತ್ತ ನುಡಿದಳು.

"ಯುರೋಪಿಯನ್ನರು ನಮ್ಮ ಮಾಧವರಾಯರನ್ನು ಪಂಗ್ತಿಗೆ ಕರಕೊಂಡಾಗ ಈ ಮಾತು." ಎಂದು ನಾನು ಅಂದೆನು.

"ಅದಿರಲಿ, ನಾವು ನಮ್ಮ ಚಹಾ 'ಪಾರ್ಟಿ'ಯಲ್ಲಿ ಸುಧಾರಣೆ ಮಾಡುವದು ಅವಶ್ಯವಿರುವದೇನು ಎಂಬದನ್ನು ವಿಚಾರಿಸುವಾ. ಉತ್ತಮವಾದ ಪದಾರ್ಥಗಳನ್ನು ವ್ಯವಸ್ಥಿತವಾಗಿ ಮಂಡಿಸಿ ವಿನೋದದ ಮಾತುಗಳನ್ನಾಡುತ್ತ ತಿಂದರಾಯಿತು. ಹಣ್ಣು ತಿನ್ನುವವನು ಪೂರ್ವಾಭಿಮುಖನಾಗಿ ತಿನ್ನಬೇಕೆಂದು ಯುರೋಪಿಯನ್ನನು ಹೇಳಿದನೆಂದು ತಿಳಿಯಿರಿ. ಕೇಳುವವರಾರು ?" ಎಂದು ಶೇಷಗಿರಿನಾಯಕರು ನುಡಿದರು. ಅಷ್ಟರಲ್ಲಿ ಅಪೂರ್ವಳಾದ ಸುಂದರಿಯೋರ್ವಳು ಮೆಲ್ಲನೆ ಬಾಗಿಲ ತೆರೆದು "ಅಕ್ಕಾ, ಈ ರಂಗಣ್ಣನನ್ನು ತುಸು ಕರಕೊಳ್ಳಿರಿ. ತ್ರಾಸ ಕೊಡುತ್ತಾನೆ. ಚಹ ಸೋಸಗೊಡಲೊಲ್ಲನು" ಎಂದು ರಂಗಣ್ಣನನ್ನು ಕೈಯಲ್ಲಿ ಹಿಡುಕೊಂಡು ಬಂದು ಮರಾಠೀ ಭಾಷೆಯಲ್ಲಿ ಬಲು ಮೆಲ್ಲಗೆ ಹೇಳಿದಳು.

ರಂಗನು ಸ್ಫೂರ್ತಿಯಿಂದ "ಬೇಂಡ್‌ಬಾಜೆ"ಯನ್ನೂದುತ್ತ ತನ್ನ ತಾಯಿಯ ಬಳಿಯಲ್ಲಿ ಬಂದು ನಿಂತನು. ಆ ಸುಂದರಿಯು ಮತ್ತೆ ಒಳಗೆ ಹೋದಳು.

ಏನು ಸೌಂದರ್ಯವದು ! ಇಂಥ ರೂಪವತಿಯನ್ನು ನಾನು ನೋಡಲೇ ಇಲ್ಲ. ಅವಳ ಗೌರವರ್ಣವೂ, ಪ್ರೌಢಿಮೆಯಿಂದ ಮೆರೆಯುವ ಅವಳ ಸುಂದರವಾದ ಮುಖವೂ, ಮಂಜುಲವಾದ ವಾಣಿಯೂ ಮನೋವೇಧಕವಾಗಿದ್ದವು.

ಯಿಯು "ಪರಭೂ" ಸುಂದರಿಯರಂತೆ ಅವಳು ತನ್ನ ನೀಲಾಲಕ
ಚನ್ನಾಗಿ ಬಾಚಿ ಚಮತ್ಕಾರವಾಗಿ ಕಾಣುವಂಥ 'ಬುಚಡೆ'ಯನ್ನು
ಳು. ಬದನೀ ಬಣ್ಣದ ರೇಸಿಮೆಯ ಜರತಾರೀ ಸೀರೆಯು ಅವಳ
ರಮವಾದ ಮೈಕಟ್ಟಿಗೆ ಒಳಿತಾಗಿ ಒಪ್ಪುತ್ತಿತ್ತು. ಅವಳ ಮುಂಗೈ
ಅನರ್ಘವಾದ ಹರಡ-ಕಂಕಣ ಗೋಟು ತೋಡೆಗಳಿಗೆ ಅವಳ
ಾದ ಹಸ್ತಗಳೇ ಅಲಂಕಾರವಾಗಿದ್ದವೋ ಆ ಹಸ್ತಗಳಿಗೆ ಆ ಜಡ
ಗಳೇ ಅಲಂಕಾರವೊ ಹೇಳಲಾಗದು. ನಮ್ಮ ನಿರೀಕ್ಷಣಕ್ಕೆ ಈಡಾ
ಸುಂದರಿಯು ನಿಲ್ಲದೆ ಹೊರಟು ಹೋದದ್ದರಿಂದ ನಾನಾದರೂ
ರ್ಣನೆಯನ್ನು ಹೆಚ್ಚಿಗೆ ಮಾಡಲಾರೆನು.

ಭಾಮಕ್ಕಾ ಈ ಪ್ರಾಣಿ ಯಾರು ?" ಎಂದು ಮಾಧವರಾಯನು
ು.

ಇವಳೆ ?" ಎಂದು ಉದ್ಗಾರ ತೆಗೆದು ಭಾಮಕ್ಕನು ತನ್ನ ಗಂಡನ
ಮಾಡಿ "ಇವರ ಸೋದರ ಸೊಸೆಯು" ಎಂದು ನುಡಿದು ನಕ್ಕಳು.
ನಗಲಿಕ್ಕೇನಾಯಿತು ?" ಎಂದು ನಾಯಕರು ಹೆಂಡತಿಯ ಮೇಲೆ
ಷ್ಟರಾಗಿ ಕೇಳಿದರು.

ಮಕ್ಕನು ಗಂಡನ ಕೋಪವನ್ನು ಲೆಕ್ಕಿಸದೆ "ಊರೆಲ್ಲ ನಕ್ಕರೂ
ಕೂಡದು !" ಎಂದು ನುಡಿದು ಮತ್ತೆ ನಕ್ಕಳು.

ಚಮತ್ಕಾರವನ್ನು ಅರಿತುಕೊಳ್ಳುವ ಕುತೂಹಲದಿಂದ ನಾನು
: "ಭಾಮಾ, ಇವಳು ನಿನ್ನ ಸೊಸೆಯಾದರೆ ನಮ್ಮೊಡನೆ ಚಹ
ಳ್ಳಲಿಕ್ಕೆ ಬರಲಿಲ್ಲವೇಕೆ ?"

ಹೇಗೆ ಬಂದಾಳು ವೆಂಕಣ್ಣಾ ! ದೊಡ್ಡ ಹೆಂಗಸಾಗಿದ್ದಾಳೆ. ಇನ್ನೂ
ಇಲ್ಲ. ಪಾಪ, ನಾಚಿಕೊಂಡು ಒಳಗೇ ಇರುತ್ತಾಳೆ. ಹಡೆದ ತಂದೆ
ಗೆ ಊಟ ಹೇಗೆ ಸವಿಯಾಗುವದೋ ಕಾಣೆ !" ಎಂದು ಭಾಮ
ತನನ್ನು ಓರೆಗಣ್ಣಿನಿಂದ ನೋಡಿ ನಕ್ಕಳು.

ಅವರ ತಂದೆತಾಯಿಗಳ ಪಾಪ ಪುಣ್ಯ ಅವರ ಸುತ್ತ. ಇಲ್ಲಿಯೇ
ಮ್ಮನಿದ್ದಾನೆ; ಹೆಂಡತಿಯನ್ನು ಬಿಟ್ಟುಬಿಟ್ಟಿದ್ದಾನೆ. ನಿನಗೆ ಊಟ
ುತ್ತದೇನು ?" ಎಂದು ನಾಯಕರು ಗಂಭೀರವಾದ ಮುದ್ರೆ

ನನ್ನು ತಳೆದು ಕೇಳಿದರು.

" ಬೇವಿನಕಾಯಿ ತಿಂದರೆ ಕಹಿ ಹತ್ತುತ್ತದೆ. ಸವಿಯೂಟ ಉಂಡು ನ್ನಲಿಯಾ ? " ಎಂದು ನಾಯಕರ ಪ್ರೇಯಸಿಯು ನುಡಿದು ಮತ್ತೆ ಕ್ಕಳು.

ನಾಯಕರ ಗಂಭೀರವಾದ ಮುಖಮುದ್ರೆಯು ಆಡಗಿ ಅಲ್ಲಿ ಮಂದ ಸವು ತೋರಿತು. ಅವರು ತಮ್ಮ ಚಿನ್ನದ ಗಡಿಯಾರವನ್ನು ತೆಗೆದು ಹೋ. ಏಳುವರೆಯಾಯಿತು" ಎಂದು ಯಂತ್ರದ ಗಂಟೆ ಬಡಿದು ಮೇಲೆ ಾರ್ಣಮ್ಮಾ, ಚಹ ಸಿದ್ಧವಾಗಿದೆಯೋ ಇಲ್ಲವೊ ?" ಎಂದು ಅಡಿಗೆಯವ ನ್ನು ಕೂಗಿ ಕೇಳಿದರು.

ಆಗಲಿನ ವಾಗ್ಬಾಣ ಬಡೆದು ತುಸು ಚಿಂತಾಕ್ರಾಂತನಾಗಿದ್ದ ಮಾಧವ ಯನು ನಾಯಕರ ಕಡೆಗೆ ಮೋರೆ ತಿರುವಿ "ನಾಯಕರೆ, ಯುರೋಪಿ ನ್ ಪದ್ಧತಿಯಂತೆ ನೀವು ಗಂಟೆ ಬಡಿದಿರಿ, ಸರಿಯಾಯಿತು; ಮೇಲೆ ವ್ಮನನ್ನು ಕೂಗಿದಿರೇಕೆ ? " ಎಂದು ನುಡಿದು ಖೊಳ್ಳನೆ ನಕ್ಕನು.

ಶೇಷಗಿರಿನಾಯಕರ ಮುಖದಲ್ಲಿ ಹುಚ್ಚುಕಳೆ ಇಡುಗಿತು. ಆವರಿಂದ ತುರ್ಯವೇ ಆಗಿತ್ತು. ಅವರಂದದ್ದು : " ಗಂಟೆ ಬಾರಿಸಿದ ಕೂಡಲೆ ೇಕೆಂದು ನಾವು ನಾರ್ಣಮ್ಮನಿಗೆ ಕಲಿಸದಿದ್ದರೆ ಬಾರಿಸಿದ ಕೂಡಲೆ ಳು ಬರುವದು ಹೇಗೆ ? ನಾನು ನಿನ್ನೆಯೇ ಈ ಗಂಟೆಯನ್ನು ಈ ಊರಲ್ಲಿ ಡೆನು. ಇದು ಹೊಸ ವಸ್ತುವಾದ್ದರಿಂದ ಹೇಗೆ ನುಡಿಯುತ್ತದೆಯೋ ಡಿದೆನು. "

ಅಷ್ಟರಲ್ಲಿ ಚಹ ಬಂದಿತು. ಎಲ್ಲರು 'ಸಾಸರ'ಗಳಲ್ಲಿ ಚಹ ಹಾಕಿ ಆರಿಸಿ ಕುಡಿಯಲಾರಂಭಿಸಿದರು. ಮಾಧವರಾಯನು ಚಹವನ್ನು ಸಾ " ಚಹ ಮಾತ್ರ ಸರ್ವೋತ್ಕೃಷ್ಟವಾಗಿದೆ" ಎಂದು ಗಟ್ಟಿಯಾಗಿ ನನು. ಭಾಮಕ್ಕನು ಅವನನ್ನು ದಿಟ್ಟಿಸಿ ನೋಡಿದಳು.

೩

ಮರುದಿವಸ ಶೇಷಗಿರಿನಾಯಕರು ನಮ್ಮ ಮನೆಗೆ ಬಂದಾಗ ನಾನು ೋದರಸೊಸೆಯೆಂದರೆ ಯಾರ ಮಗಳು ? ಇಷ್ಟು ದಿವಸ ಅವಳು

ಅವಿವಾಹಿತಳಾಗಿ ಉಳಿದದ್ದು ಹೇಗೆ? ಅವಳ ವಿದ್ಯಾವ್ಯಾಸಂಗಗಳೇನು? ಮುಂತಾದ ಪ್ರಶ್ನೆಗಳನ್ನು ಮಾಡಿದೆನು. ನಾಯಕರು ಇದ್ದ ಸಂಗತಿಯನ್ನೆಲ್ಲ ಸ್ವಲ್ಪದರಲ್ಲಿ ಹೇಳಿದರು. ಮಾಧವರಾಯನು ಅದನ್ನೆಲ್ಲ ಲಕ್ಷ್ಯಕೊಟ್ಟು ಕೇಳುತ್ತಿದ್ದನು.

ಶೇಷಗಿರಿನಾಯಕರ ತಾಯಿಯು ಬೋಳಂಬೆಯ ಜಗೋಪಂತ ಘಾಟೆಯವರ ಮಗಳು. ದೇಶಸ್ಥರಲ್ಲಿ ನಡೆಯುವ ರೂಢಿಗನುಸರಿಸಿ ತಮ್ಮಣ್ಣ ನಾಯಕರು ತಮ್ಮ ಮಗಳನ್ನು ಮತ್ತೆ ಜಗೋಪಂತರ ಮಗನಾದ ಮನೋಹರಪಂತನಿಗೆ ಕೊಟ್ಟಿದ್ದರು. ಆ ಮನೋಹರಪಂತರ ಮಗಳೇ ನಾವು ಮೇಲೆ ವಿವರಿಸಿದ ಅವಿವಾಹಿತಳಾದ ಸುಂದರಿಯು. ಅವಳ ಹೆಸರು ಚಂದ್ರಭಾಗಾ. ಜಗೋಪಂತರು ತೀರಿಕೊಂಡ ಬಳಿಕ ಮನೋಹರಪಂತನು ಪುಣೆಯಲ್ಲಿ ಮನೆ ಮಾಡಿಕೊಂಡಿದ್ದನು. ಅಲ್ಲಿ ಅವನು ಮಾಧವರಾವ ರಾನಡೆ, ವಿಷ್ಣು ಮೋರೇಶ್ವರ, ಅಗಸ್ತೀ ಮುಂತಾದ ಸುಧಾರಕಾಗ್ರಣಿಗಳ ಪಟ್ಟದ ಶಿಷ್ಯನಾಗಿದ್ದು, ಆ ಮಹಾತ್ಮರ ಪಶ್ಚಾತ್ ಮನೋಹರಪಂತನೇ ಪುಣೆಯಲ್ಲಿಯ ಸುಧಾರಕರ ಅಗ್ರಗಣಿಯೆಂದು ಎಲ್ಲರೂ ಮಾತಾಡುತ್ತಿದ್ದರು. ಮನೋಹರಪಂತನು ತನ್ನ ಮಗಳನ್ನು ಪುಣೆಯಲ್ಲಿಯ ಫೀಮೇಲ ಹಾಯಸ್ಕೂಲಿನಲ್ಲಿ ಅಭ್ಯಾಸಕ್ಕೆ ಇಟ್ಟಿದ್ದನು. ಅಲ್ಲಿ ಚಂದ್ರಭಾಗೆಯು ಇಂಗ್ಲಿಷ ಕಲಿತದ್ದಲ್ಲದೆ ಗಾನ, ಚಿತ್ರಕಲೆ, ಕಸೀದೆ ತೆಗೆಯುವದು ಮುಂತಾದ ಅಭಿನವ ಕಲೆಗಳಲ್ಲಿಯಾದರೂ ನಿಷ್ಣಾತಳಾಗಿದ್ದಳು. ತನ್ನ ಮಗಳು ಹದಿನೆಂಟು ವರ್ಷದ ಪ್ರಾಯದವಳಾಗುವವರೆಗೆ ಅವಳ ವಿವಾಹವನ್ನು ಮಾಡುವದಿಲ್ಲೆಂದೂ ಅವಳ ಇಚ್ಛೆಗೆ ಬಂದ ವರನಿಗೆ ಮಾತ್ರ ಅವಳನ್ನು ಕೊಡುವೆನೆಂದೂ ಮನೋಹರಪಂತನು ನಿಶ್ಚಯಿಸಿದ್ದನು. ಅವನ ನಿಶ್ಚಯವೇ ಕೊನೆಗಾಣುವ ಹೊತ್ತು ಬಂದಿತು. ಯಾಕೆಂದರೆ ರಜಸ್ವಲೆಯಾದ ಚಂದ್ರಭಾಗೆಯನ್ನು ಹಳೆ ಸಾಂಪ್ರದಾಯದವರಂತೂ ಮಾಡಿಕೊಳ್ಳುವ ಮಾತೇ ದೂರಾಗಿ ಹೋಗಿತ್ತು. ಇನ್ನು ಸುಧಾರಕರ ಚಿಕ್ಕ ಮೇಳಿಯಲ್ಲಿ ಚಂದ್ರಭಾಗೆಗೆ ಅನುರೂಪನಾದ ಪತಿಯು ದೊರಕುವನೋ ಇಲ್ಲವೋ ಎಂಬ ಶಂಕೆಯಿತ್ತು.

ಅಕ್ಕನ ಮೇಲೆ ಭಕ್ತಿ ಹೆಚ್ಚಾಗಿ ಮಾಧವನು ದಿನಾಲು ಶೇಷಗಿರಿನಾಯಕರ ಮನೆಗೆ ಎಡತಾಕಲಾರಂಭಿಸಿದನು. "ಹಸಿವೆಯಾಗಿದೆ, ಅಕ್ಕಾ ಏನಾದರೂ

ತಿನ್ನಲಿಕ್ಕೆ" ಕೊಡು ಎಂದು ನೆನವಮಾಡಿಕೊಂಡು ಒಮ್ಮೆ ಹೋಗುವನು. ಮರೆತು ಬಂದ ಬಡಿಗೆಯನ್ನು ತರಲಿಕ್ಕೆ ಮತ್ತೊಮ್ಮೆ ಹೋಗುವನು. ಲಾಲ ಬಾಗಕ್ಕೆ ಬರುವಿರೇನೆಂದು ಶೇಷಗಿರಿನಾಯಕರನ್ನು ಕರೆಯಲಿಕ್ಕೆ ಒಂದಾವರ್ತಿ ಹೋಗುವನು. ಹೀಗೆ ಸಕಾರಣ ನಿಷ್ಕಾರಣವಾಗಿ ಮಾಧವನು ನಾಯಕರ ಮನೆಗೆ ನಿತ್ಯದಲ್ಲಿಯೂ ಹೋಗಿಬರುತ್ತಿದ್ದನು.

ಭಾಮಕ್ಕನ ಮನೆಯಲ್ಲಿಯು ರುಚಿಕರವಾದ ಮಾವಿನಹಣ್ಣಿನ ಒಡೆ ಗಳನ್ನು ಯಾರು ಮಾಡಿದರೆಂದು ಮಾಧವನು ಕೇಳಿದರೆ ಅವುಗಳನ್ನು ಚಂದ್ರಭಾಗೆಯೇ ಮಾಡಿದಳೆಂಬ ಉತ್ತರ ಬಂದಿತು. ರಂಗಣ್ಣನ ತಲೆಯ ಮೇಲಿನ ಅಂದವಾದ ಟೊಪ್ಪಿಗೆಯನ್ನು ಹೆಣೆದವಳು ಚಂದಭಾಗೆಯೇ. ಆ ಹುಡುಗನಿಗೆ ಮನೆಯಲ್ಲಿ ಕಲಿಸುವವಳು. ಅವಳೇ. ಒಳಗಿನ ಮನೆಯಲ್ಲಿ ಕುಳಿತು ಮೆಲ್ಲಗೆ ಬಹು ಮಂಜುಲವಾಗಿ ಚಂದ್ರಭಾಗೆಯು ಹಾಡುತ್ತಿದ್ದರೆ ಅವಳು ತಾಲಪಟ್ಟುಗಳನ್ನು ಬಿಟ್ಟಿರಲಿಲ್ಲ. ಪುಣೆಯಲ್ಲಿ ಇಂಗ್ಲಿಷ ಕಲಿತವಳಾಗಿದ್ದರೂ ಅವಳು ಅವಿನೀತೆಯಾಗಿ ಇದ್ದಿಲ್ಲ. ಒಂದು ದಿನ ಸತ್ಯಭಾಮೆಯು ಮೈ ತೊಳೆದುಕೊಳ್ಳಲಿಕ್ಕೆ ಬಚ್ಚಲಕ್ಕೆ ಹೋದದ್ದು ಮಾಧವನಿಗೆ ಗೊತ್ತಿದ್ದರೂ ಅವನು ಮೆಲ್ಲನೆ ಚಂದ್ರಭಾಗೆಯ ಸಮೀಪಕ್ಕೆ ಬಂದು "ಭಾಮಕ್ಕನೆಲ್ಲಿ?" ಎಂದು ಕೇಳಿದಾಗ ಆ ಲಲನೆಯು ಪರಿವೃತ್ತಾರ್ಧಮುಖಿಯಾಗಿ ಎಳೆನಗೆ ತೋರುತ್ತ "ಮೈತೊಳೆಯುತ್ತಿರುವರು" ಎಂದು ಬಹು ಮಂಜುಲವಾಗಿ ಹೇಳಿದಳು. "ನಾನು ವರನು ನೀನು ಕನ್ಯೆ ಏನು ಅನಹಿತಾ?" ಎಂದು ಮನಸ್ಸಿನಲ್ಲಿಯೇ ಯೋಚಿಸುತ್ತ ಅವನು ಹೊರಟುಹೋದನು.

ಮಾಧವನಿಗೆ ಚಂದ್ರಭಾಗೆಯ ಹುಚ್ಚೇ ಹಿಡಿಯಿತು. ಕನಸುಮನಸಿ ನಲ್ಲಿ ಕೂಡಿಯೇ ಚಂದ್ರಭಾಗೆಯ ಹೊರತಾಗಿ ಇನ್ನೊಂದು ವಿಷಯವೇ ಇಲ್ಲ. ಕಡೆಗವನು ಒಂದು ದಿನ ಗಟ್ಟಿ ಧೈರ್ಯಮಾಡಿ ಅಕ್ಕನ ಬಳಿಗೆ ಬಂದು "ಅಕ್ಕಾ, ನಿನ್ನೊಡನೆ ಒಂದು ಆಲೋಚನೆ ಮಾಡಬೇಕಾಗಿದೆ" ಎಂದಂದನು.

"ಏನದು?" ಎಂದು ಸತ್ಯಭಾಮೆಯು ಮುಗುಳುನಗೆ ನಗುತ್ತ ಕೇಳಿದಳು. ಅವಳಿಗೆ ಮಾಧವನ ಮನಸ್ಸಿನೊಳಗಿನ ಮಾತು ತಿಳಿದೇ ಹೋಗಿತ್ತು.

"ಹೇಳೆಂದರೆ ಹೇಳುತ್ತೇನೆ" ಎಂದು ಮಾಧವನು ಲಜ್ಜಾಗ್ರಸ್ತನಾಗಿ ನುಡಿದನು.

"ಹೇಳು. ನನ್ನ ಮುಂದೆ ಯಾತರ ಸಂಕೋಚ ?"

"ನಾನು ಎರಡನೆಯ ಲಗ್ನ ಮಾಡಿಕೊಳ್ಳುವದಂತೂ ನಿಶ್ಚಯುವೇ ಈ ಚಂದ್ರಭಾಗೆಯನ್ನು ನನಗೇಕೆ ಕೊಡಿಸಬಾರದು ?"

ಈ ಮಾತು ಕೇಳಿ ಸತ್ಯಭಾಮೆಯು ಚಕಿತಳಾಗಿ "ಹುಚ್ಚನೇನು ನೀನ ಮಾಧವರಾಯಾ ? ಆ ಹುಡುಗೆ ಮೈನೆರೆದು ಮೂರು ವರ್ಷಗಳಾಗಿವೆ ಅಂತೆ. ಹಿರಿಯರು ಕೇಳಿದರೆ ನನ್ನ ನಿನ್ನ ಕೂಡಿಯೇ ಬಡಿದಾರು !" ಎಂದು ಅಧಿಕ್ಷೇಪಿಸಿ ನುಡಿದಳು.

"ಹೀಗೆಯೇ ನಾನು ಸನ್ಯಾಸಿಯಂತೆ ಇರಬೇಕೆಂಬದು ನಿನ್ನ ಮನಸ್ಸೆ ?"

"ಯಾಕೆ ? ನಿನ್ನ ಹೆಂಡತಿಯನ್ನು ಕರಸಿಕೋ; ಸುಖದಿಂದ ಇರು. ಅವಳೇನು ಕುಗುಡೆಯೇ ? ಕುಂಟಿಯೇ ? ಏನಾಗಿದೆ ? ಕಲಿತು ಪಂಡಿತ ನಾಗಿರುವೆನೆಂದು ಹೇಳುತ್ತೀ."

"ಭಾಮಕ್ಕಾ, ನಿನಗಿಂತ ನನಗೆ ಚನ್ನಾಗಿ ತಿಳಿಯುತ್ತದೆ. ನಾನು ನಿನ್ನ ಉಪದೇಶ ಕೇಳಲಿಲ್ಲ. ಚಂದ್ರೆಯನ್ನು ಕೊಡಿಸುವಿಯೋ ಇಲ್ಲವೋ ನನಗೆ ಹೇಳಿಬಿಡು."

"ಕೊಡಿಸುವದು ದೊಡ್ಡ ಮಾತಲ್ಲ ಮಾಧವಾ, ನಿನ್ನಂಥವನಿಗೆ ಮಾಲೆ ಹಾಕದೆ ಅವಳು ಮತ್ತಿನ್ನಾರಿಗೆ ಹಾಕುವಳು? ಆದರೆ ಮೈನೆರೆದ ಹುಡುಗೆಯನ್ನು ನೀನು ಮದುವೆಯಾದರೆ ಜನರು ನಮ್ಮನ್ನು ಎತ್ತಿ ಇಟ್ಟಾರು; ಕಾಣದೆ?"

"ಏನು ಹೇಳುತ್ತಿ ಬಿಡು. ದುಷ್ಯಂತ, ನಳರಾಜ, ಪರಾಶರ, ಅರ್ಜುನ ಮುಂತಾದ ಮಹಾತ್ಮರು ಮೈನೆರೆದವರನ್ನೇ ಮದುವೆಯಾಗಲಿಲ್ಲೆ ?"

"ವ್ಯಾಖ್ಯಾನ ಕೊಡುವಿರೇನು ಎಮ್. ಎ. ಪಂಡಿತರೆ ? ಕೊಡುವ ದಾದರೆ ಚನ್ನಾಗಿ ಎದ್ದು ನಿಂತು 'ಮಹಿಳೆಯರೆ, ಸಭ್ಯಗೃಹಸ್ಥರೆ,' ಎಂದು ಉಪಕ್ರಮಿಸಿ ಗಳಿಗೆ ಎರಡುಗಳಿಗೆ ವ್ಯಾಖ್ಯಾನ ಕೊಡು, ನಿನ್ನ ಪರೀಕ್ಷೆಯಾಗಿ ಹೋಗಲಿ."

"ಅಂತಃಕರಣದ ಅಕ್ಕನೆಂದು ನಿನ್ನ ಮುಂದೆ ಹೊಟ್ಟೆ ತೋಡಿಕೊಂಡರೆ ಭಾಮಕ್ಕಾ, ನೀನು ನಗೆಯಾಡುವಿಯಾ ?" ಎಂದು ಮಾಧವನು ಹೀನಸತ್ವ ನಾಗಿ ನುಡಿದನು.

" ಅಪ್ಪಾ, ಈ ಮಾತಿನಲ್ಲಿ ನನಗೇನೂ ತಿಳಿಯದು. ಅವ
(ಅವರೆಂದರೆ ಗಂಡ), ಬೇಕಾದಂಥ ಕರ್ತಾಪುರುಷನಾದ ನಿಮ್ಮಣ್ಣನಿ
ಸೀನಾದರೂ ದೊಡ್ಡ ಪರೀಕ್ಷೆಕೊಟ್ಟವನು. ಮೂರೂವಂದಿ ಕಲೆತು ಬೇಕ
ಮಾಡಿರಿ. ಕೊಡಿಸೆಂದರೆ ಕನ್ಯಾ ಕೊಡಿಸಲಿಕ್ಕೆ ನಾನು ಸಿದ್ಧಳು. "

ಸಾಯಂಕಾಲಕ್ಕೆ ನಾನೂ ಮಾಧವರಾಯನೂ ಶೇಷಗಿರಿನಾಯ
ಕಲೆತು ಬಹಳೊತ್ತು ವಿಚಾರಮಾಡಿದೆವು. ಮಾಧವರಾಯನೆಷ್ಟುಮಾಡಿ
ತನ್ನ ಹಟ ಬಿಡಲಿಲ್ಲ. ಆಗ ನಾಯಕರು ಅಂದದ್ದು : " ನೋಡಿರಿ ಮ
ರಾಯರೆ, ನಿಮ್ಮ ಹಿರಿಯರನ್ನು ಹೇಗಾದರೂ ಮಾಡಿ ಒಡಂಬಡಿಸು
ಆದರೆ ಚಂದ್ರಭಾಗೆಯನ್ನು ನೀವು ಚನ್ನಾಗಿ ಇಟ್ಟುಕೊಂಡು ಸಂ
ಮಾಡುವದು ನಿಶ್ಚಯವೇ? ಏನು ಮೂರನೆಯದೊಂದು ಹೆಣ್ಣು ಗಂಟು
ರೆಂದು ಹೇಳುವಿರೋ ? "

"ನಾನು ಕೇವಲ ಮೂರ್ಖನೆಂದು ನೀವು ತಿಳಿದು ಹೀಗೆ ಮಾತಾ
ರೇನು ನಾಯಕರೇ ? "

" ಕನ್ಯಾ ಮನಸ್ಸಿಗೆ ಬಂದಿರುವದೇನು ? "

" ಚಂದ್ರಭಾಗೆಯಂಥ ಸುಂದರಿಯು ಮನಸ್ಸಿಗೆ ಬಂದಳೇನೆಂದು ಕ
ಬೇಕೆ ? ಅವಳಲ್ಲಿ ತೆಗೆಯುವಂಥದೇನೂ ಇಲ್ಲ, ತೊಳೆದ ಮುತ್ತು ! " ಎ
ಮಾಧವನು ಮೋರೆ ಹಿಗ್ಗಿಸಿ ಹೇಳಿದನು.

" ಇದಕ್ಕೂ ಇನ್ನೇನು ಹೇಳಬೇಕು ನಾಯಕರೆ ? ನಿಮಗೆ ಸ
ಧಾನವಾಯಿತಷ್ಟೆ ? " ಎಂದು ನಾನು ಕೇಳಿದೆನು.

" ವೆಂಕಟರಾಯರೆ, ನೀವು ಕನ್ನೆಯನ್ನು ಚನ್ನಾಗಿ ನೋಡಿರ
ರಷ್ಟೆ ? " ಎಂದು ನಾಯಕರು ನನ್ನನ್ನು ಕೇಳಿದರು.

" ನೋಡಿದಂತಾಗಿದೆ. ಮುಖ್ಯ ಮಾಧವನ ಮನಸ್ಸಿಗೆ ಬಂದಮೇ
ಆಗಿಹೋಯಿತು. ಆದರೂ ಕರಿಸಿರಿ, ಇನ್ನೊಮ್ಮೆ ನೋಡೋಣ. "

" ಯಾರು ! ಗುಂಡಕ್ಕನನ್ನು ಹೀಗೆ ಕರೆದುಕೊಂಡು ಬರಬಾರದೆ !
ಎಂದು ನಾಯಕರು ತಮ್ಮ ಹೆಂಡತಿಗೆ ಹೇಳಿದರು.

ಗುಂಡಕ್ಕನೆಂಬ ಹೆಸರು ಕೇಳಿದಾಕ್ಷಣವೇ ನಾನು ಚಕಿತನಾದೆನ
ಮಾಧವನ ಮೋರೆಯಂತೂ ಹುಚ್ಚಿಟ್ಟಿತು. " ಗುಂಡಕ್ಕನಾರು ? " ಎಂದ

ನಾನು ಕೇಳಿದೆನು.

“ಮತ್ತಾವ ಗುಂಡಕ್ಕ? ನಿಮ್ಮ ಅನುಜರ ಪ್ರೀತಿಯ ಹೆಂಡತಿಯೇ ಅವಳು. ಈಗ ವಿನೋದಕ್ಕಾಗಿ ಚಂದ್ರಭಾಗಾ ಎಂಬ ಹೆಸರಿಟ್ಟುಕೊಂಡಿದ್ದಾಳೆ.” ಎಂದು ನಾಯಕರು ಗಹಗಹಿಸಿ ನಗುತ್ತ ನುಡಿದರು.

ಭಾಮಕ್ಕನು ಗುಂಡಕ್ಕನನ್ನು (ನಮ್ಮ ಮನೆಯ ಹೆಸರು ಲಲಿತಾ) ಕರಕೊಂಡು ಬಂದು ನಮ್ಮೆಲ್ಲರಿಗೂ ನಮಸ್ಕಾರ ಮಾಡಹೇಳಿದಳು.

ಆ ದಿವಸ ನಮಗೆಲ್ಲರಿಗೂ ಮಿತಿಮೀರಿದ ಆನಂದವಾಯಿತು. ಹಿರಿಯರ ಎದೆಯ ಮೇಲಿದ್ದ ದೊಡ್ಡ ಕಲ್ಲು ಇಳಿದಂತಾಗಿ ಅವರು ಸಮಾಧಾನದ ಉಸುರ್ಗರೆದರು. ಬೆಂಗಳೂರಲ್ಲಿಯೇ ಫಲಶೋಭನದ ಪ್ರಸ್ತ ಸಾಗತಕ್ಕದ್ದು. ಸುಬ್ಬರಾಯರಿಗೆ ತಾರು ಕಳಿಸಿದ್ದೇವೆ. ಮುಹೂರ್ತವು ಅನಾಯಾಸವಾಗಿ ನಾಳಿನ ಇಂಗ್ರಜೀ ‘ನ್ಯೂ ಇಯರ್ಸ ಡೇ’ದ ದಿವಸ ಹೊರಟಿದೆ. ಸಂಪಾದಕರೆ, ಈ ಮಹೋತ್ಸವದ ದಿವಸವೇ ಹೇಗಾದರೂ ನಿಮ್ಮ ಡಿಸೆಂಬರದ ಸಂಚಿಕೆಯನ್ನು ಹೊರಡಿಸಿದರೆ ಬಹಳೇ ಒಳ್ಳೇದಾಗುವದು.

# ಬೆಳ್ಳೀ ಚಿಕ್ಕೆ

( ಪತ್ತೇದಾರಿ ಕಥೆಗಳು )

## ಅಪರಾಧಿಗಳ ಸಂಶೋಧಕನು ಮರಣೋನ್ಮುಖನಾದದ್ದು

ಸರಲಾಕ್ಷ ಹುಲಿವಿಾಸೆಯು ಮನೆಯಲ್ಲಿ ಬಂದಿರಲಾರಂಭಿಸಿದಂದಿನಿಂದ ತಾನು ತೊಂದರೆಗೊಂಡು ಬೇಸತ್ತು ಹೋಗಿರುವೆನೆಂದು ವಸತಿಗೃಹದ ಸ್ವಾಮಿನಿಯಾದ ಲೀಲಾಬಾಯಿಯು ದೂರಿಕೊಳ್ಳುತ್ತಿದ್ದಳು. "ಕೆಟ್ಟ ಮೋರೆಯವರೂ ಅಸಭ್ಯರೂ ಸುಟ್ಟಮನೆಯವರೂ ಸುಡದ ಮನೆಯವರೂ ತೆರಪಿಲ್ಲದೆ ನನ್ನ ಮನೆಗೆ ಬರುತ್ತಿರುವದು ಎಂದು ತಪ್ಪುವದು ದೇವರೆ?" ಎಂದು ಅವಳು ಉದ್ಗಾರ ತೆಗೆಯುವಳು. ಸರಲಾಕ್ಷನಾದರೇನು, ಹೊತ್ತಿಲ್ಲದ ಹೊತ್ತಿನಲ್ಲಿ ಕಂಡಕಂಡದ್ದು ಬೇಡುವನು. ಮನಸ್ಸಿಗೆ ತಿಳಿದದ್ದು ಮಾಡುವನು. ನಡುರಾತ್ರಿಯಲ್ಲಿ ಅವನಿಗೆ ರಾಗಗಳೇಳುತ್ತಿದ್ದವು. ಊಟದ ಹೊತ್ತಿನಲ್ಲಿ ಗುರುಗುರು ನಿದ್ದೆ. ಅಡಿಗೆಯ ಮನೆಯಲ್ಲಿ ನಿಂತು ಅವನು ತುಬಾಕಿಯನ್ನು ಹಾರಿಸಿ ಗುರಿಹೊಡೆಯುವ ಸಾಧಕವನ್ನು ಮಾಡುವನು. ಒಮ್ಮೊಮ್ಮೆ ಮನೆ ತುಂಬ ಇಡುಗುವಂಥ ದುರ್ಗಂಧಮಯವಾದ ರಸಾಯನ ಕ್ರಿಯೆಗಳನ್ನು ನಡಿಸುವನು. ಮನೆಬಿಟ್ಟು ಬೇರೊಂದು ಮನೆ ನೋಡಿಕೊಳ್ಳೆಂದು ಹೇಳುವಳೇ? ಸರಲಾಕ್ಷನಂಥ ಕೊಡಗಯ್ಯನನ್ನು ಕಾಣುವದು ದುರ್ಲಭ. ವರ್ಷದ ರೊಕ್ಕವನ್ನು ತಿಂಗಳೊಂದಕ್ಕೆ ಕೊಡುವನು. ರಾಯರೆ, ನಿಮ್ಮ ಗಡಿಯಾರ ಚನ್ನಾಗಿದೆ ಎಂದು ಅವಳು ಹೇಳುವಷ್ಟರಲ್ಲಿಯೇ ಅವನು ಅವಳಿಗೆ ಆ ಗಡಿಯಾರದ ದಾನ ಮಾಡಿದನೇ!

ಸರಲಾಕ್ಷನ ಔದಾರ್ಯಕ್ಕೆ ಮೆಚ್ಚಿಯೂ ಅವನ ಮಿತಭಾಷಣಕ್ಕೆ ಹೆದರಿಯೂ ಆ ವಸತಿಗೃಹದ ಸ್ವಾಮಿನಿಯು ಅವನ ಹೆಸರೇ ತೆಗೆಯುತ್ತಿದ್ದಿಲ್ಲ. ಅವನು ಏನನ್ನಾದರೂ ಕೆಡಿಸಿದರೂ ಚಿಂತೆಯಿಲ್ಲ, ಚಲ್ಲಿ ಉಗ್ಗಿದರೂ ಚಿಂತೆಯಿಲ್ಲ, ಅವಳು ಬಾಯಿಬಿಚ್ಚಿ ಮಾತಾಡುತ್ತಿದ್ದಿಲ್ಲ. ಆದರೂ ಅವಳಿಗೆ ಅವನಲ್ಲಿ ಭಕ್ತಿ ಮಮತೆಗಳು ಹೆಚ್ಚು. ಮಿತಭಾಷಿಯಾಗಿದ್ದರೂ ಅವನು ಮೃದುಭಾಷಿಯು. ಉಪ್ಪು ಸಪ್ಪಗೆಂದು ಅವನು ಅಡಿಗೆಗೆ ಒಮ್ಮೆಯಾದರೂ ಹೆಸರಿಟ್ಟವನಲ್ಲ. ಅಂಥವನಿಂದ ತನಗೆ ತೊಂದರೆಯಾಯಿತೆಂಬ

ಹೇಳಲು ಲೀಲಾಬಾಯಿಗೆ ಧೈರ್ಯವಾದರೂ ಬರುವದು ಹೇಗೆ?

ಒಂದು ದಿವಸ ಅವಳು ನನ್ನ ಮನೆಗೆ ಬಂದು ಅಂದದ್ದು : "
ವಾತಾತ್ಮಜರೆ, ಎಂಥ ಗಿರಾಕಿಯನ್ನು ತಂದು ಹಾಕಿದಿರಿ ನನ್ನ ಮನೆ
ಸರಲಾಕ್ಷನೊಡನೆ ನಿತ್ಯ ತಲೆಯೊಡಕೊಂಡು ಗೋಳಾಡಿಹೋದೆನು."

"ಏನಾಯಿತಮ್ಮ ಪೀಡೆ ನಿನಗೆ ?"

"ನನಗೆ ಏನೂ ಆಗಿಲ್ಲ. ಅವನಂಥ ದಾನಶೂರನು ಎಷ್ಟು
ಮಾಡಿದರೂ ಸಹಿಸಬಹುದು. ಆದರೆ ಈಗ ಮೂರು ದಿವಸ ಅವನು ಹಾ
ಹಿಡಿದು ಮಲಗಿಕೊಂಡವನು ತುತ್ತು ಕೂಳು ತಿಂದಿಲ್ಲ. ಬಾಯಿಯಲ್ಲಿ ನೀ
ಹಾಕಿಲ್ಲ. ಈ ದಿನ ಮುಂಜಾವಿನಿಂದಂತೂ ಅವನ ಲಕ್ಷಣವೇ ಚನ
ತೋರುವದಿಲ್ಲ. ಈಗ ಸಾಯುವನೋ, ಈ ಗಳಿಗೆಗೆ ಸಾಯುವನೋ ರ
ಲಾಗದು ಮಾತಿಗೊಮ್ಮೆ ತೇಕುತ್ತಾನೆ. ಮೋರೆ ಎಣ್ಣೆಣ್ಣೆ ಬಸಿಯುತ್ತ
ಬಿರಿಗಣ್ಣಿನಿಂದ ನೋಡಿದನೆಂದರೆ ಅಂಜಿಕೆ ಸಾವು ಬರುತ್ತದೆ."

"ಲೀಲಾಬಾಯಿ, ನೀವಾದರೂ ವೈದ್ಯರನ್ನು ಕರಿಸಿ ತೋರಿಸಬ
ದಿತ್ತೆ?" ಎಂದು ವ್ಯಥಿತನಾಗಿ ನಾನು ಅಂಗಿರುಮಾಲುಗಳನ್ನು ಲಗು
ಯಿಂದ ಹಾಕಿಕೊಳ್ಳುತ್ತ ಕೇಳಿದೆನು.

"ಹಟಮಾರಿಯುವನು. ವೈದ್ಯರನ್ನು ಕರೆಯುವೆನೆಂದರೆ ಅವನು ತ
ಚ್ಛನ್ನ ಬೇಡವೆಂದು ಹೇಳುವನು. ಅವನ ಮಾತು ಮೀರಿ ವೈದ್ಯರನ್ನು ಕ
ಯುಲು ನನಗೆ ಧೈರ್ಯವಾಗಿದ್ದಿಲ್ಲ. ಇಂದಿನ ಅವ್ಯವಸ್ಥೆಯನ್ನು ನೋ
ನಾನು ವೈದ್ಯನನ್ನು ಕರೆದೇ ಬಿಡುವೆನು; ನಿನ್ನ ಮಾತು ಕೇಳುವದಿಲ್ಲವೆಂ
ನಿಷ್ಠುರವಾಗಿ ನಾನು ಅವನಿಗೆ ಹೇಳಿದಾಗ ಅವನು ನಿಮ್ಮನ್ನು ವಾತಾತ್ಮ
ರನ್ನು) ಕರೆಯೆಂದು ಹೇಳಿದನು" ಎಂದು ಲೀಲಾಬಾಯಿಯು ಚಿಂತಾಕು
ಳಾಗಿ ಹೇಳಿದಳು.

"ಏನು ಬೇನೆ ? ನಿಮಗೆ ತಿಳಿದಿರುವದೋ ?"

"ಏನು ಮಣ್ಣೋ ! ಅಪರಾಧಿಯೋರ್ವನ ಶೋಧಕ್ಕಾಗಿ ಬಳಿಗಾ
ಪೇಟೆಯಲ್ಲಿರುವ ಕೆಟ್ಟದೊಂದು ಓಣಿಯಲ್ಲಿ ಅಡ್ಡಾಡಿ ಬಂದ ನೆವಕ್ಕಾಗಿ ಅವ
ಗಿಂಥ ಕೆಟ್ಟ ಬೇನೆಯು ಅಡರಿತೆಂದು ನಾನು ನಂಬುತ್ತೇನೆ. ಬುಧವಾ
ಮಲಗಿದ್ದಾನೆ. ಬುಧವಾರ, ಗುರುವಾರ, ಶುಕ್ರವಾರ ಇಂದಿಗೆ ಮೂರು ದಿವಸ

ಗಳಾದವು, ಅನ್ನೋದಕದ ಸ್ಪರ್ಶವಿಲ್ಲ.”

“ಮುಂದೆ ಗತಿಯೇನಮ್ಮಾ?”

“ದೇವರೇ ಗತಿ! ಇಂದಿನ ದಿನವನ್ನು ಅವನು ಕಳೆಯುವನೋ ಇಲ್ಲವೋ ಅನ್ನುವಂತಾಗಿದೆ. ವೈದ್ಯರೇ ಇದ್ದೀರಲ್ಲ. ನೋಡಬನ್ನಿರಿ.”

ಲಗುಬಗೆಯಿಂದ ನಾನು ಲೀಲಾಬಾಯಿಯ ಮನೆಗೆ ಹೋದೆನು. ಸರಲಾಕ್ಷನು ಮಲಗಿರುವ ಕೋಣೆಯನ್ನು ಅವಳು ತೆಗೆದ ಕೂಡಲೆ ಅವನ ಶೋಚನೀಯವಾದ ಸ್ಥಿತಿಯನ್ನು ಕಂಡು ನಾನು ಅತಿಶಯವಾಗಿ ವ್ಯಥಿತನಾದೆನು. ಅವನ ಮೋರೆಯು ಒಣಗಿ ಸಂಡಿಗೆಯಾಗಿತ್ತು. ಕಣ್ಣು ಒಳನಟ್ಟುಹೋಗಿದ್ದವು. ತುಟಿಗೆಲ್ಲ ಮುಸರಿ ಬಡಿದಂತಾಗಿತ್ತು. ಧ್ವನಿಯು ಬೇನೆಯ ಬೆಕ್ಕಿಗಿಂತಲೂ ಕ್ಷೀಣವಾಗಿತ್ತು. ಅಂಗಾತವಾಗಿ ಮಲಗಿದವನು ಆಹುದೋ ಅಲ್ಲವೋ ಎಂಬಷ್ಟು ಮೋರೆ ತಿರಿವಿ ಸರಲಾಕ್ಷನು ನನ್ನನ್ನು ಬಿಂಗಣ್ಣಿನಿಂದ ನೋಡಿದನು.

“ಸರಲಾಕ್ಷರಾಯರೆ, ಏನು ನಿಮ್ಮವಸ್ಥೆ?” ಎಂದು ನಾನು ದುಃಖಿತನಾಗಿ ಕೇಳಿದನು.

“ವಾತಾತ್ಮಜ ವೈದ್ಯರೇನು? ದರ್ಶನವು ಅಪರೂಪವಾಯಿತು!” ಎಂದು ಅವನು ತಳಮನೆಯಲ್ಲಿ ಬಿದ್ದವನ ಧ್ವನಿಯಿಂದ ಬಹು ಪ್ರಯಾಸದೊಂದಿಗೆ ನುಡಿದನು.

“ಏನಾಗಿದೆ ನಿಮಗೆ?” ಎಂದು ಕೇಳಕೇಳುತ್ತ ನಾನು ಸರಲಾಕ್ಷನ ಕೈಹಿಡಿದು ನೋಡಬೇಕೆಂದು ಅವನ ಹಾಸಿಗೆಯ ಬಳಿಗೆ ನಡೆದೆನು.

“ಹಾಂ! ತಡೆಯಿರಿ ವೈದ್ಯರೆ, ಒಂದು ಹೆಜ್ಜೆಯನ್ನು ನೀವು ಮುಂದಕ್ಕೆ ಇಟ್ಟರೆ ಸರಿ ಬೀಳಲಿಕ್ಕಿಲ್ಲ!” ಎಂದು ಅವನು ಬೇನೆಯ ಬೆಕ್ಕಿನಂತೆ ಚೀರಿ ಒಸಕ್ಕನೆ ಹೆರುಕೊಳ್ಳಲಿಕ್ಕೆ ಬಂದಂತೆ ಮಾಡಿ ನುಡಿದನು.

“ಹೀಗೇಕೆ, ಹೀಗೇಕೆ ರಾಯರೆ? ನನ್ನ ಗುರುತವಾದರೂ ಹತ್ತಿತೋ ಇಲ್ಲವೋ?” ಎಂದು ನಾನು ಚಕಿತನಾಗಿ ಕೇಳಿದೆನು.

“ಏಕೆ! ನನ್ನ ಇಚ್ಛೆ; ಜೋಕೆ!”

“ಹಾಗಂದರೇನು? ನಿಮ್ಮ ಪ್ರಕೃತಿಯನ್ನು ನೋಡಬೇಡವೆ?”

“ವಾತಾತ್ಮಜ, ನನ್ನ ಮಾತು ಕೇಳಿ ನೀವು ಹಾಗೆ ದೂರ ನಿಂತು

ಕೊಂಡರೆ ನನ್ನ ಮೇಲೆ ನೀವು ದೊಡ್ಡ ಕೃಪೆ ಮಾಡಿದಿರೆಂದು ತಿಳಿಯುವೆನು."

"ನಾಡಿಯನ್ನಾದರೂ ಹಿಡಿದು ನೋಡೋಣ."

"ಸುಮ್ಮನೆ ಇರಿರಿ ವೈದ್ಯರೆ. ಸಾಯಬೇಕೆನ್ನುವಿರೇನು?" ಎಂದು ಸರಲಾಕ್ಷನು ನರಳುತ್ತಲೂ ಉಸುರು ಬಿಡುಕೊಳ್ಳುತ್ತಲೂ ಬಲು ಕಷ್ಟದಿಂದ ನುಡಿದನು.

"ಯಾಕೆ? ನನಗೇನಾಗಬೇಕಾಗಿದೆ?" ಎಂದು ನಾನು ಕೇಳಿದೆನು.

"ವಾತಾತ್ಮಜ, ನನಗೆ 'ಕೂಲಿಯ ರೋಗ' ಎಂಬ ಪ್ರಾಣಘಾತಕವಾದ ಜ್ವರ ಬಂದಿದೆ. ಬಲು ಕೆಟ್ಟ ಬೇನೆ! ನನ್ನ ಮೈ ಮುಟ್ಟಿದ ಕೂಡಲೆ ಈ ಜ್ವರವು ನಿಮಗೆ ಅಂಟಿಕೊಳ್ಳದೆ ಬಿಡದು. ಜ್ವರ ಬಂದ ಮೇಲೆ ಮನುಷ್ಯನು ಮೂರು ದಿವಸ ಕೂಡ ಬದುಕಲಾರನು."

"ಸರಲಾಕ್ಷರಾಯರೆ, ಇಂಥ ಮಾತುಗಳನ್ನು ನೀವು ನನಗೆ ಕಲಿಸಬರುವಿರೇನು? ನಾನೂ ವೈದ್ಯನಿದ್ದೇನೆ."

"ನನ್ನೊಡನೆ ಮಾತಾಡಬೇಕಾಗಿದ್ದರೆ ನೀವು ಹಾಗೆ ದೂರ ನಿಂತೆಯೇ ಮಾತಾಡಿರಿ. ಒಲ್ಲದಿದ್ದರೆ ನಿಮ್ಮ ಮನೆಯ ಹಾದಿಯನ್ನು ಹಿಡಿಯಿರಿ." ಎಂದು ಸರಲಾಕ್ಷನು ಕೈಕಾಲುಗಳನ್ನು ಚಲ್ಲುತ್ತಲೂ ತಲೆಯನ್ನು ಗಾದಿಗೆ ಹೊಸೆಯುತ್ತಲೂ ಶ್ರಮದಿಂದ ನುಡಿದನು.

"ರಾಯರೆ, ನಾನು ವೈದ್ಯನು, ನೀವು ರೋಗಿಗಳು. ರೋಗಿಯು ವೈದ್ಯನ ಮಾತನ್ನು ರಾಜಾಜ್ಞೆಯಂತೆ ಮನ್ನಿಸತಕ್ಕದ್ದು."

ಸರಲಾಕ್ಷನು ನನ್ನನ್ನು ಕೆಟ್ಟಗಣ್ಣಿಲೆ ನೋಡಿ ತಿರಸ್ಕಾರದಿಂದ "ಘನವೈದ್ಯರು ನೀವು! ನಿಮ್ಮ ಆಜ್ಞೆಯನ್ನು ಮನ್ನಿಸದವರಾರು? ವಾತಾತ್ಮಜ-ಕುಂಟಗಾಲ ವೈದ್ಯರೆ, ಶುಂಠಿ-ಬೆಲ್ಲವೇ ನಿಮ್ಮ ಔಷಧ. ಯಾವ ದೊಡ್ಡ ಹೆಸರಾದ ವೈದ್ಯರು ನೀವು?" ಎಂದು ಅವನು ಸನ್ನಿಪಾತದ ಆವೇಶದಿಂದ ನುಡಿದನು.

"ಎಂಥ ಸೌಜನ್ಯರಹಿತವಾದ ಮಾತುಗಳನ್ನಾಡಿದಿರಿ! ಸ್ನೇಹಕ್ಕಾಗಿ ನಾನು ಕರಳು ಹರಕೊಳ್ಳುತ್ತಿರುವಾಗ ನೀವು ಕಟುವಚನಗಳನ್ನಾಡುಬಿರುವಿರಿ. ಆದರೂ ನೀವು ಸಂತಾಪ-ಸನ್ನಿಪಾತಗಳಿಗೀಡಾಗಿ ಹೀಗೆ ಮಾತಾಡುವಿರೆಂದು ಮನಗಂಡು ನಾನು ಸುಮ್ಮನಿದ್ದೇನೆ. ನನ್ನ ಜಾಣತನವು ಹಾಗಿರಲಿ,

ರ ದೇಶಮುಖ, ಡಾಕ್ಟರ ರಾವ, ಡಾಕ್ಟರ ನಾಡಗೀರ ಈ ಮೂವರಲ್ಲಿ
ನ್ನು ಕರಿಸಲಿ ? ನಾಡಗೀರ ಯಶವಂತರಾಯರನ್ನು ಕರಿಸಲೆ ? ಇಂಥ
ಕರವಾದ ಅಂಟುಬೇನೆಗಳ ಉಗಮಗಳನ್ನು ಅವರು ಬಹು ಚನ್ನಾಗಿ
ಸಿದ್ದಾರೆ."

ಸರಲಾಕ್ಷನು ಮಾತನಾಡದೆ ಸುಮ್ಮನೆ ನನ್ನನ್ನು ಪಿಳಿಪಿಳಿ ನೋಡುತ್ತಿ
ಕರೆದನು.

'ಒಡನುಡಿಯಿರಿ., ಯಾರನ್ನು ಕರಿಸಲಿ ಹೇಳಬಾರದೆ ? ಏನು
ಎಂತು ಮಾಡಲಿ ಎನ್ನುವದರೊಳಗಾಗಿ ಪ್ರಾಣವನ್ನು ಬಿಟ್ಟಿ
. ನೀವು ಹೇಳದಿದ್ದರೆ ನಾನೇ ನನ್ನ ಮನಸ್ಸಿಗೆ ಬಂದವರನ್ನು ಕರೆ
ಸು" ಎಂದು ನಾನು ಹೇಳಿದೆನು.

'ಯಾರನ್ನು ಕರೆಯಬೇಕೆಂಬ ಜ್ಞಾನವು ನಿಮಗಿಲ್ಲ. ಸುಮ್ಮನೆ
ಒಟಗುಡುವಿರಿ ? ನನ್ನ ಜ್ವರದ ಮೂಲವನ್ನು ಈ ಊರಲ್ಲಿ ಯಾರು
ಬಲ್ಲರು ?"

ಸರಿ, ನೀವು ನಿಮ್ಮ ಪ್ರಕೃತಿಯನ್ನು ತೋರಿಸುವದೇ ಇಲ್ಲ. ಮೂಲ
ಡಿಯುವದು ಹೇಗೆ ?"

ಸುಜ್ಞರಂತೆ ಮಾತಾಡಿದಿರಿ. ಒಳ್ಳೇದು ನಿಮ್ಮ ಬಳಿಯಲ್ಲಿ ಬೆಳ್ಳಿಯ
ಣ್ಯಗಳಿರುವವೋ ?" ಎಂದವನು ನೆರಳುತ್ತ ಕೂಗಿ ಕೇಳಿದನು.

ಇವೆ. ಎಷ್ಟು ಬೇಕು ?" ಎಂದು ನಾನು ಕೇಳಿದೆನು.

ಅರ್ಧ ರೂಪಾಯಿಗಳೆಷ್ಟು ಇವೆ. ನಾಲ್ಕಾಣೆಯ ನಾಣ್ಯಗಳೆಷ್ಟು ?"
ನಾನು ನನ್ನ ಚೀಲವನ್ನು ತೆಗೆದು ತೋರಿಸಿದೆನು. ಅದರಲ್ಲಿ ಇಪ್ಪತ್ತು
ಪಾಯಿಗಳಿದ್ದವು. ಮೂವತ್ತೈದು ನಾಲ್ಕಾಣೆಯ ನಾಣ್ಯಗಳಿದ್ದವು.
ವಾತಾತ್ಮಜ," ಎಂದವನು ಮಗ್ಗಲಾಗಿ ನನ್ನನ್ನು ದಿಟ್ಟಿಸಿ
"ವಾತಾತ್ಮಜ, ಇಷ್ಟೇಯೋ ? ನಿಮ್ಮಂಥ ಸಂಪನ್ನರಲ್ಲಿ
ದು ಬಗೆಯ ನೂರು ನೂರು ನಾಣ್ಯಗಳಿರಬೇಕು. ಆಗಲಿ,
ಪಾಯಿಗಳನ್ನೆಲ್ಲ ಈಚೆಯ ಜೇಬಿನಲ್ಲಿ ಹಾಕಿರಿ; ಉಳಿದವುಗಳನ್ನು
ಜೇಬಿನಲ್ಲಿರಿಸಿರಿ. ಅಂದರೆ ಸಮತೋಲವಾಗಿ ನೀವು ಸಹಜವೇ
ಹಾರುವಿರಿ !"

ಉರಿಯು ಹೆಚ್ಚಾಗಿ ಸರಲಾಕ್ಷನು ಬಡಬಡಿಸಲಾರಂಭಿಸಿದನೆಂದು ನಾನು ಕಂಡು “ ಸರಲಾಕ್ಷ, ಜ್ವರದ ತೀವ್ರತೆ ಹೆಚ್ಚಾಗುತ್ತಲಿದೆ, ನಾನೀಗಲೆ ವೈದ್ಯನನ್ನು ಕರತರಲು ಹೋಗುತ್ತೇನೆ ” ಎಂದು ನುಡಿದು ನಾನು ನನ್ನ ರುಮಾಲವನ್ನು ಸುತ್ತಿಕೊಳ್ಳಲಾರಂಭಿಸಿದೆನು.

ಅಷ್ಟರಲ್ಲಿ ಅಕೋ ಸರಲಾಕ್ಷನು ತನ್ನ ಹಾಸಿಗೆಯನ್ನು ಬಿಟ್ಟು ಟಣ್ಣನೆ ಹಾರಿ ಕೋಣೆಯ ಒಳಚಿಲಕವನ್ನಿಕ್ಕಿ ಬೀಗವನ್ನು ಜಡಿದು ಕೈಯನ್ನು ತನ್ನ ಜೇಬಿನಲ್ಲಿಟ್ಟುಕೊಂಡವನೇ ತತ್ತರಿಸುತ್ತಲೂ ಉಸರು ಬಡಕೊಳ್ಳುತ್ತಲೂ ನರಳುತ್ತಲೂ ತನ್ನ ಹಾಸಿಗೆಗೆ ಬಂದು ಬಿದ್ದುಕೊಂಡನು.

“ ಇದೇನು ಸರಲಾಕ್ಷ, ನಾನು ನಿಮ್ಮ ಮೈಹಿಡಿದು ಜ್ವರವನ್ನಾದರೂ ನೋಡುವೆನು ” ಎಂದು ನಾನು ಅವನ ಸಮೀಪಕ್ಕೆ ಹೋಗುವಷ್ಟರಲ್ಲಿ ಅವನು ಸಾಯುವವನ ಹಾಗೆ ಕೂಗಿಕೊಂಡು “ ನನ್ನ ಮೈಮುಟ್ಟಬಂದರೆ ಇಲ್ಲಿಯೇ ಕುತ್ತಿಗೆಯನ್ನು ಹಿಚಿಕಿಕೊಳ್ಳುವೆನು! ” ಎಂದು ನುಡಿದು ಲಟಪಟನೆ ಕಾಲು ಜಾಡಿಸಲಾರಂಭಿಸಿದನು.

“ ಹಾಗಾದರೆ ಬಾಗಿಲಕ್ಕೆ ಬೀಗವನ್ನೇಕೆ ಹಾಕಿದಿರಿ ? ”

“ ಇನ್ನೆರಡು ತಾಸಿನ ಮೇಲೆ ಯಾವ ವೈದ್ಯನನ್ನು ಕರಿಸಬೇಕೆಂಬದನ್ನು ಹೇಳುವೆನು. ಅಲ್ಲಿಯ ವರೆಗೆ ನೀವು ಮೇಜಿನ ಮೇಲಿದ್ದ ಪುಸ್ತಕ ವರ್ತಮಾನಪತ್ರಗಳನ್ನೋದುತ್ತ ಕಾಲಕಳೆಯಿರಿ, ” ಎಂದು ಹೇಳಿ ಸರಲಾಕ್ಷನು ಮುಸುಗಿಟ್ಟುಕೊಂಡು ಮಲಗಿದನು.

ನಾನು ವಿಚಾರಗ್ರಸ್ತನಾಗಿಯೂ ಚಿಂತಾಕುಲನಾಗಿಯೂ ಕೋಣೆಯಲ್ಲಿ ಎಡೆಯಾಡುತ್ತಿದ್ದೆನು. ಆಗ ಮಾಡದಲ್ಲಿ ಒಂದು ಜಂತದ ಕರಡಿಗೆಯನ್ನು ಕಂಡು ಅದನ್ನು ಮೆಲ್ಲನೆ ಕೈಯಲ್ಲಿ ತೆಗೆದುಕೊಂಡೆನು.

ಸರ್ಪದಂತೆ ತೀಕ್ಷ್ಣವಾದ ಶ್ರವಣೇಂದ್ರಿಯವುಳ್ಳವನಾದ ಹುಲಿಮೀಸೆಯನು ಭರದಿಂದ ತನ್ನ ಮುಸುಗನ್ನು ಹಿರಿದೊಗೆದು “ ವಾತಾತ್ಮಜ, ಆ ಕರಡಿಗೆಯನ್ನು ಸುಮ್ಮನೆ ಇದ್ದಲ್ಲಿರಿಸಿರಿ. ಮಂದಿಯ ಒಡವೆಗಳಿಗೆ ಕೈಯಿಕ್ಕುವದು ದುರ್ನಡತೆಯು. ಇರಿಸಿ ಎರಡನೆಯ ಕೆಲಸ ಮಾಡಿರಿ. ಏನು ಹೇಳುತ್ತೇನೆ ! ” ಎಂದು ಸರಲಾಕ್ಷನು ಉಚ್ಚ ಉಚ್ಚತರವಾದ ಧ್ವನಿಗಳನ್ನು ತೆಗೆದು ಅಧಿಕ್ಷೇಪಿಸಿ ನುಡಿದನು.

ನನಗೆ ಅಪ್ರತಿಷ್ಠೆಯಾದಂತಾಗಿ ನಾನು ಒಳಿತಾಗಿ ನೊಂದುಕೊಂಡೆನು. ಮಾಡಲಿನ್ನೇನು ? ಕರಡಿಗೆಯನ್ನು ಮೆಲ್ಲನೆ ಇದ್ದಲ್ಲಿ ಇರಿಸಿ ತಲೆ ಚಿಟ್ಟೆಂಸಿ ಕೊಂಡು ಕೆಳಕ್ಕೆ ನೋಡುತ್ತಾ ಕುಳಿತೆನು.

ಎರಡು ತಾಸಿನ ಅವಧಿ ಮುಗಿದಿತು. ಸರಲಾಕ್ಷನು ಗಡಿಯಾರವನ್ನು ನೋಡಿ "ವೈದ್ಯರೆ, ಏಳಿರಿನ್ನು. ನೋಡಿದಿರಾ, ಆಯಾಸದಿಂದಲೂ, ಮನಸ್ತಾಪದಿಂದಲೂ ಜ್ವರದ ಭರಕ್ಕಾಗಿಯೂ ನನ್ನ ಹೊಟ್ಟೆಯಲ್ಲಿ ಬೆಂಕಿ ಬಿದ್ದಂತಾಗಿದೆ. ಬೇಗನೆ ಕಾಮಾಟಿಪುರಕ್ಕೆ ಹೋಗಿ ಅಲ್ಲಿ ಪರೋಡೆಯವರ ಬಂಗಲೆಯ ಎದುರಿಗೆ ಇರುವ ಮನೆಯಲ್ಲಿ ಕಲ್ಯಾಣಸುಂದರಂ ಮುದಲಿಯರ್ ಎಂಬ ಗೃಹಸ್ಥನಿದ್ದಾನೆ. ಅವನಿಗೆ ಈ ರೋಗದ ನಿದಾನ ಚಿಕಿತ್ಸೆಗಳ ಜ್ಞಾನ ಚನ್ನಾಗಿದೆ. ತಡಮಾಡಬೇಡಿರಿ. ಹೊತ್ತುಗಳೆಯುವಂತಿಲ್ಲ" ಎಂದು ಹೇಳಬೇಕಾದರೆ ಕ್ಷೀಣನಾದ ಸರಲಾಕ್ಷನಿಗೆ ಸಾಕುಬೇಕಾಗಿ ಹೋಯಿತು.

"ಎಲ್ಲವೂ ವಿಪರೀತವೇ. ಎಲ್ಲಿಯ ಕಲ್ಯಾಣಸುಂದರನವನು ? ಹೆಸರನ್ನು ಕೂಡಾ ನಾನು ಕೇಳಿಲ್ಲ. ವೈದ್ಯಕವಿದ್ಯೆಯಲ್ಲಿ ಅವನು ಪದವೀಧರನಾಗಿ ತೋರುವದಿಲ್ಲ. ಅಂಥವನ ಕಡೆಯಿಂದ ನೀವು ಔಷಧ ತೆಗೆದುಕೊಳ್ಳುವರೆ? ಚನ್ನಾಗಿದೆ."

"ಚೀನ, ಜಪಾನ, ಸುಮಾತ್ರಾ, ಕೋರಿಯಾ ಮುಂತಾದ ದೇಶಗಳಲ್ಲಿ ಉದ್ಭವಿಸುವ ಚಮ-ಚಮತ್ಕಾರವಾದ ಜ್ವರಗಳ ನಿದಾನವನ್ನು ನಮ್ಮ ವೈದ್ಯ ಶಾಸ್ತ್ರಿಗಳು ಅರಿತವರಲ್ಲ. ಆಯಾ ದೇಶಗಳಲ್ಲಿ ಸಂಚರಿಸಿ ಆಸ್ಥೆಯಿಂದ ಆಯಾ ರೋಗಗಳ ಮೂಲವನ್ನು ಕಂಡುಹಿಡಿದ ಜಾಣನೇ ನನ್ನ ಜ್ವರದ ಪರಿಹಾರ ಮಾಡಬಲ್ಲನು. ಕಲ್ಯಾಣಸುಂದರನು ಲಾರ್ಡ ಕಾವರ್ಡ ದೊರೆಗಳ ಸೈನ್ಯದ ಪಡೆಯೊಂದಿಗೆ ಚೀನ ಕೋರಿಯಾ ಸುಮಾತ್ರಾ ಮುಂತಾದ ದೇಶಗಳಲ್ಲಿ ಸಂಚಾರಮಾಡಿ ಅಲ್ಲಲ್ಲಿಯ ಅಂಟುಬೇನೆಗಳ ಕ್ರಿಮಿಗಳನ್ನು ಹಿಡಿದು ನಿರೀಕ್ಷಿಸಿ ಅವುಗಳಲ್ಲಿರುವ ವಿಷವನ್ನೂ ಆ ವಿಷಕ್ಕೆ ಪ್ರತೀಕಾರವನ್ನೂ ಪರಿಶ್ರಮ ಮಾಡಿ ಕಂಡುಕೊಂಡಿದ್ದಾನೆ. ಹೋಗು, ಕಲ್ಯಾಣಸುಂದರನಿಗೆ ನನಗಾದ ಅವಸ್ಥೆಯನ್ನು ಸವಿಸ್ತರವಾಗಿ ನಿವೇದಿಸಿ ತಕ್ಕದಾದ ಔಷಧವನ್ನು ತರಹೇಳು."

"ಆಗಲಿ. ಈಗಲೆ ಅವನನ್ನು ಕರತರುವೆನು. ಇಲ್ಲಿಂದಲೇ ಒಂದು

ಮೋಟರಗಾಡಿಯನ್ನು ತೆಗೆದುಕೊಂಡು ಹೋಗಿ ಅವನನ್ನು ಅದರಲ್ಲಿಯೇ ಕುಳ್ಳಿರಿಸಿಕೊಂಡು ಬರುವೆನು."

"ಅಷ್ಟುಮಾತ್ರ ಮಾಡಬೇಡ. ನೀನು ಕಲ್ಯಾಣನ ಬಳಿಗೆ ಹೋಗಿ ನಾನು ಅತ್ಯವಸ್ಥನಾಗಿರುವೆನೆಂದು ಹೇಳಿ ಅವನನ್ನು ಇತ್ತ ಕಳಿಸಿಕೊಡು. ಅವನೂ ನಾನೂ ಕೂಡಿ ಮಾತಾಡುವಾಗ ಹೊರಗಿನವರಿದ್ದರೆ ಅವನಿಗೆ ಸಹಿಸದು. ಕಲ್ಯಾಣಸುಂದರನಿಗೆ ಸುದ್ದಿಯನ್ನು ಹೇಳಿದವನೇ ನೀನು ನಿನ್ನ ಮೋಟರದಲ್ಲಿ ಕುಳಿತು ಬಾ. ಅವನು ತನ್ನ ರಥದಲ್ಲಿ ಕುಳಿತು ಯಥಾವಕಾಶವಾಗಿ ಬರುವನು" ಎಂದು ಸರಲಾಕ್ಷನು ಹೇಳಿದನು.

"ಆಗಲಿ. ನೀವು ಹೇಳಿದಂತೆಯೇ ಮಾಡುವೆನು" ಎಂದು ಹೇಳಿ ನಾನು ಹೊರಡಲು ಸಿದ್ಧನಾದೆನು.

"ವಾತಾತ್ಮಜರೆ, ವೈದ್ಯರೆ, ನನಗಾದ ಅವಸ್ಥೆಯನ್ನು ಅವನಿಗೆ ಚನ್ನಾಗಿ ವಿವರಿಸಿ ಹೇಳಿರಿ. ನಾನು ಬಹುಪರಿಯಾಗಿ ಹೇಳಿಕೊಂಡಿರುವೆನೆಂದೂ ಅವನು ಬರದಿದ್ದರೆ ಇಂದೆಯೇ ನಾನು ನಿಶ್ಚಯವಾಗಿ ಸತ್ತುಹೋಗುವೆನೆಂದೂ ಹೇಳಿ ಅವನ ಹೊಟ್ಟೆಯಲ್ಲಿ ಅಂತಃಕರಣ ಬರುವಂತೆ ಮಾಡಿರಿ ಕಂಡಿರೋ?"

"ಚಿಂತೇಬಿಡಿರಿ. ಹೇಗಾದರೂ ಮಾಡಿ ಅವನ ಕೈಕಾಲು ಹಿಡಿದುಕೊಂಡು ಹೇಳಿಕೊಳ್ಳುವೆನು ನಿಮ್ಮ ಜೀವ ಉಳಿದರೆ ಸಾಕು." ಎಂದು ಹೇಳಿ ನಾನು ಹೊರಟೆನು.

"ತಡೆಯಿರಿ. ವೈದ್ಯರೆ, ಆ ಗ್ಯಾಸ್ ಲ್ಯಾಂಪಕ್ಕೆ ದೀಪವನ್ನು ಅಂಟಿಸಿರಿ. ಕಣ್ಣು ಕುಕ್ಕುವಷ್ಟು ಬೆಳಕು ಮಾಡಬೇಡಿರಿ. ಅರೆವಾಸಿಯಾಗಿರಲಿ" ಎಂದು ಸರಲಾಕ್ಷನು ಹೇಳಿಕೊಂಡ ಮೇರೆಗೆ ನಾನು ದೀಪವನ್ನು ಅಂಟಿಸಿ ಹೊರಟುಹೋದೆನು.

ಕಲ್ಯಾಣಸುಂದರನ ಮನೆಯು ದೊಡ್ಡದಾಗಿಯೂ ಅಂದವಾಗಿಯೂ ಇದ್ದಿತು. ನಾನು ಅವನ ಮನೆಯ ಬಾಗಿಲಕ್ಕೆ ಹೋದಕೂಡಲೆ ಅಲ್ಲಿಯ ಜವಾನನು ನನಗೆ ಕೈಮುಗಿದು "ಬುದ್ಧೀ, ಯಾರು ದಯಮಾಡಿರುವರೆಂದು ಯಜಮಾನರಿಗೆ ತಿಳಿಸಲಿ?" ಎಂದು ಕೇಳಿದನು. ನಾನು ನನ್ನ ಹೆಸರು ಉದ್ಯೋಗಗಳನ್ನು ಅವನಿಗೆ ತಿಳಿಸಿದೆನು. ಜವಾನನು ಒಳಗೆ

ಹೋದಕೂಡಲಿ ಕಲ್ಯಾಣಸುಂದರನು ಅವನನ್ನು ಕುರಿತು "ಯಾಕೆ ಕಂಡ ಕಂಡವರನ್ನು ಹೀಗೆ ಮನೆಗೆ ಬರಗೊಡುತ್ತೀರೋ, ಅವನನ್ನು ಆವಾರದಲ್ಲಿಯೇ ಬಿಡಬಾರದಾಗಿತ್ತು" ಎಂದು ನುಡಿದನು.

"ದೇವರೂ, ಯಾರೋ ಜ್ವರಪೀಡಿತರಾಗಿರುವರಂತೆ. ಜೀವಕ್ಕೆಯೇ ಗಂಡಾಂತರವಿರುವ ಮೂಲಕ ಆತುರರಾಗಿ ತಮ್ಮ ಕಡೆಗೆ ಬಂದಿದ್ದಾರೆ. ಅವರಿಗೆ ನಾಲ್ಕು ಸಮಾಧಾನದ ಮಾತು ಹೇಳುವದೇ ಪಿಹಿತವಾಗಿ ತೋರುತ್ತದೆ." ಎಂದು ಸೇವಕನಂದನು.

"ನಡೆ, ದಿನಾಲು ಸಾವಿರಾರು ಜನರು ಸಾಯುತ್ತಾರೆ. ಅವರೆಲ್ಲರ ಮನೆಗೆ ಹೋಗಬೇಕಾದರೆ ನಮ್ಮದೇ ಇತಿಶ್ರೀಯಾದೀತು. ನಾನು ಮನೆಯಲ್ಲಿಲ್ಲವೆಂದು ಹೇಳು."

ಈ ಸಮಾಚಾರವನ್ನೆಲ್ಲ ನಾನು ಹೊರಗಿನಿಂದಲೇ ಕೇಳಿ ಇನ್ನು ಉಪೇಕ್ಷೆ ಮಾಡುವದು ಸರಿಯಲ್ಲವೆಂದು ನೆನೆದು ನಾನು ನೆಟ್ಟನೆ ಮನೆಯ ಯಜಮಾನನಿದ್ದ ಕೋಣೆಗೆ ಹೋದೆನು.

ಕಲ್ಯಾಣಸುದರಂ ಮುದಲಿಯಾರನು ಸುಮಾರು ಐವತ್ತೈದು ವರ್ಷದ ಪ್ರಾಯದವನಾದ ಮನುಷ್ಯನು. ಅವನ ಮೋರೆಯ ಮೇಲಿನ ಬಿಳಿ ಮೀಸೆಗಳು ಸಾಲಿಗ್ರಾಮದಂತೆ ಕಪ್ಪಾಗಿರುವ ಅವನ ಮೈಬಣ್ಣಕ್ಕಾಗಿ ಎದ್ದು ಕಾಣುತ್ತಿದ್ದವು. ತಲೆಯ ಕೂದಲು ಉಚ್ಚಿ ಹೋಗಿದ್ದರಿಂದ ಅವನ ನೆತ್ತಿಯು ಮಿರಿಮಿರಿಯಾಗಿ ಮಿಂಚುತ್ತಿತ್ತು. ಅವನ ಡೊಣ್ಣೆ ಮೂಗು ಗುಳ್ಳೆಗಣ್ಣುಗಳನ್ನು ನೋಡಿದರೆ ಅಂಜಿಕೆ ಬರುವಂತೆ ಇತ್ತು. ಚಂಗಾಳಿಯ ಪಂಜೆಯನ್ನುಟ್ಟು ಇಸ್ತ್ರಿಯ ಶರ್ಟನ್ನು ಹಾಕಿಕೊಂಡು ಅವನೊಂದು ಆರಾಮ ಖುರ್ಚಿಯಲ್ಲಿ ಸೆಟೆಯಿಂದ ಕುಳಿತುಕೊಂಡಿದ್ದನು. ನನ್ನನ್ನು ಕಾಣುತ್ತಲೆ ಅವನು ಕ್ರುದ್ಧನಾದಂತೆ ನಟಿಸಿ, "ಯಾರು ನೀವು, ಹೀಗೇಕೆ ಹೇಳದೆ ಕೇಳದೆ ಬಂದಿರಿ? ಏನು ಕೆಲಸ ನಿಮ್ಮದು, ಹೊರಗೆ ನಡಿಯಿರಿ!" ಎಂದು ಹೆಬ್ಬೆಟ್ಟೆ ನಗಲವಾದಂಥ ಬಂಗಾರದ ಪಾಟಲಿಯುಳ್ಳ ತನ್ನ ಕೃಷ್ಣವರ್ಣದ ಹಸ್ತವನ್ನು ಚಾಚಿ ನನಗೆ ಹೊರಗೆ ಹೋಗಲು ಆಜ್ಞಾಪಿಸಿದನು.

"ಮುದಲಿಯಾರರೆ, ಪ್ರಖ್ಯಾತನಾದ ಗೃಹಸ್ಥನೋರ್ವನು ಗಂಡಾಂತರದಲ್ಲಿದ್ದಾನೆ. ಅವನ ಪ್ರಾಣವನ್ನು ಉಳಿಸುವದು ನಿಮ್ಮ ಕೈಯಲ್ಲಿ ಇದೆ

ಎಂದು ನಂಬಿ ನಾನು ಬಂದೆನು. ಒಣ ಉಪಚಾರದ ಮಾತುಗಳಲ್ಲಿ ಸಮಯು ವನ್ನು ಕಳೆಯಲು ಅವಕಾಶವಿಲ್ಲಾದ್ದರಿಂದ ನಾನು ಆತುರನಾಗಿ ತಮ್ಮ ಬಳಿಗೆ ಬಂದಿರುವೆನು. ದಯುಮಾಡಿ ನನ್ನ ಪ್ರಾರ್ಥನೆಯನ್ನು ಮನ್ನಿಸಬೇಕು. ”

“ ಯಾರು ಗಂಡಾಂತರದಲ್ಲಿ ಇರುವರು ? ” ಎಂದು ಮುದಲಿ ಯಾರನು ಆಢ್ಯತೆಯಿಂದ ಕೇಳಿದನು.

“ ಹುಲಿಮೀಸೆ ಸರಲಾಕ್ಷರಾಯರು ” ಎಂದು ನಾನು ನಿವೇದಿಸಿದೆನು.

“ ಸರಲಾಕ್ಷ ಹುಲಿಮೀಸೆ ! ” ಎಂದು ಕಲ್ಯಾಣಸುಂದರನು ಚಕಿತ ನಾಗಿ ಉದ್ಗಾರ ತೆಗೆದನು.

“ ಅಹುದು. ಅವರೇ ಸುಮಾತ್ರಾದಲ್ಲಿಯ ‘ ಕೂಲೀ ’ ಜ್ವರದಿಂದ ಪೀಡಿತರಾಗಿರುವರು. ಬದುಕುವರೋ ಇಲ್ಲವೋ ಎಂಬ ಶಂಕೆಯುಂಟಾಗಿದೆ. ತಾವು ದಯುಮಾಡಿ ಈಗಲೆ ಬಂದರೆ ಒಳಿತಾಗುವದು. ”

“ ಇಂಥ ಅತ್ಯವಸ್ಥೆಯೇ ? ಪಾಪ ! ಸರಲಾಕ್ಷರಾಯರು ಅಪರಾಧಿ ಗಳ ತುಬ್ಬು ಹಚ್ಚುವದರಲ್ಲಿ ಒಳ್ಳೇ ನಿಪುಣರೂ ದಕ್ಷರೂ ಆಗಿರುವರು. ನಾನಾ ದರೂ ಬೇನೆಗಳ ಮೂಲವನ್ನು ಶೋಧಿಸಿ ತೆಗೆಯುವದರಲ್ಲಿ ಅರ್ಧ ಆಯುಷ್ಯ ವನ್ನೇ ಕಳೆದಿರುವೆನು. ಸರಲಾಕ್ಷರ ಪ್ರತ್ಯಕ್ಷವಾದ ಪರಿಚಯುವು ನನಗಿಲ್ಲ ದಿದ್ದರೂ ಕೆಲಕೆಲವು ಪ್ರಕರಣಗಳ ಸಂಬಂಧವಾಗಿ ನಾನೂ ಅವರೂ ಅನೇಕಾ ವರ್ತಿ ಕೂಡಿದ್ದೆವು. ತಾವು ವೈದ್ಯ ವಾತಾತ್ಮಜರೆಂದು ನಮ್ಮ ಮನುಷ್ಯನು ಹೇಳಿದನು. ಕುಳಿತುಕೊಳ್ಳಿರಿ. ”

“ ಬೇಗನೆ ಏಳಿರಿ ” ಎಂದು ಹೇಳಿ ನಾನು ಕುರ್ಚಿಯು ಮೇಲೆ ಕುಳಿತೆನು.

ಕಲ್ಯಾಣಸುಂದರನು ಒಂದು ಕಪಾಟವನ್ನು ತೆರೆದು ಅದರಲ್ಲಿರುವ ಅನೇಕವಾದ ಕುಪ್ಪೆಗಳಲ್ಲಿಯುದೊಂದು ಕುಪ್ಪೆಯನ್ನು ತೆಗೆದು, “ ಇದು ನೋಡಿರಿ, ‘ ಕೂಲೀ ’ ಜ್ವರದ ಕ್ರಿಮಿಗಳ ಸಂಚಯುವನ್ನು ಮಾಡಿಟ್ಟಿದ್ದೇನೆ. ಈ ಹುಳದ ರಸಿಕೆ ತಗಲಿದರೆ ಸಾಕು ತತ್ಕ್ಷಣವೇ ಜ್ವರ ಬರುವದು. ಹೀಗೆಯೇ ಬೇರೆ ಬೇರೆಯಾದ ಕುಪ್ಪೆಗಳಲ್ಲಿ ಬೇರೆ ಬೇರೆ ಜಾತಿಯು ವಿಷಕ್ರಿಮಿ ಗಳನ್ನು ಹಿಡಿದಿಟ್ಟಿದ್ದೇನೆ. ಇದು ನೋಡಿರಿ........”

“ ಇರಬಹುದು. ಅವುಗಳನ್ನೆಲ್ಲ ನೋಡುತ್ತ ಹೊತ್ತುಗಳೆಯುವಂತಿಲ್ಲ,

ಅಲ್ಲಿ ಸರಲಾಕ್ಷನ ಅವಸ್ಥೆ ಏನಾಗಿರುವದೋ ಕಾಣೆನು. ” ಎಂದು ನಾನು ಆತುರ್ಥನಾಗಿ ನುಡಿದೆನು.

“ ಇಷ್ಟು ಅತ್ಯವಸ್ಥೆಯೇ ? ಸರಲಾಕ್ಷನಿಗೆ ಈ ಘಾತಕವಾದ ಬೇನೆ ಬಂದು ಎಷ್ಟು ದಿವಸಗಳಾದವಂತೆ ? ”

“ ಮೂರು ದಿವಸಗಳಾದವೆಂದು ಅವರೇ ಹೇಳಿದರು. ”

“ ಭ್ರಮ ಸನ್ನಿಪಾತಾದಿಗಳೇನಾದರೂ ಆಗಿರುವವೇನು? ”

“ ಕಂಡಕಂಡಂತೆ ಚೀರುತ್ತಾರೆ. ಅರಿವೇ ಹರಿಯುತ್ತಾರೆ. ಇದಕ್ಕೂ ಹೆಚ್ಚಿನ ಸನ್ನಿಪಾತದ ಲಕ್ಷಣವೇನಿರಬೇಕು ? ”

“ ಪಾಪ ! ಸರಲಾಕ್ಷನಂಥ ಅಪರೂಪವಾದ ಜೀವನಕ್ಕೆ ಎಂಥ ಭಯಂಕರವಾದ ಗಂಡಾಂತರವು ಒಂದೊದಗಿರುವದು. ಅರಿಸಿ ಒಳ್ಳೇ ಜೀವನಕ್ಕೆಯೇ ಇಂಥ ಬೇನೆ. ” ಎಂದು ಖಿನ್ನನಾಗಿ ನುಡಿದನು.

“ ಏಳಿರಿ, ಅಂಗಿ ರುಮಾಲುಗಳನ್ನು ಹಾಕಿಕೊಳ್ಳಿರಿ. ” ಎಂದು ಕುರ್ಚಿಯಿಂದ ಎದ್ದು ನಿಂತೆನು.

“ ಏಳಿರಿ, ನನ್ನ ಮೋಟಾರವು ಸಿದ್ಧವೇ ಇದೆ. ”

“ ತಾವು ಸರಲಾಕ್ಷರ ಮನೆ ನೋಡಿರುವಿರಂತೆ. ದಯಮಾಡಬೇಕು. ನಾನು ಅವರ ಅಣ್ಣಂದಿರಾದ ಅರವಿಂದಾಕ್ಷರನ್ನು ಕರೆತರುವೆನು. ಮೃತ್ಯುಪತ್ರವನ್ನು ಮಾಡಿಸಬೇಕಾಗಿದೆ. ” ಎಂದು ನಾನು ನಿವೇದಿಸಿದೆನು.

“ ಆಗಲಿ, ನೀವು ಹೋಗಿರಿ. ನಾನು ಇನ್ನೊಂದು ಹದಿನೈದು ನಿಮಿಷಗಳಲ್ಲಿ ಸರಲಾಕ್ಷರ ಮನೆಯಲ್ಲಿಯೇ ಇರುವೆನು. ” ಎಂದು ನುಡಿದು ಕಲ್ಯಾಣಸುಂದರನು ತನ್ನ ರುಮಾಲವನ್ನು ಅಡ್ಡತಿಡ್ಡಾಗಿ ಸುತ್ತಿಕೊಳ್ಳಲು ಆರಂಭಿಸಿದನು.

ನಾನು ಲಗುಬಗೆಯಿಂದ ನನ್ನ ಮೋಟರದಲ್ಲಿ ಕುಳಿತು ಸರಲಾಕ್ಷನ ಮನೆಗೆ ಬಂದೆನು.

“ ಏನು ಮಾಡಿದಿರಿ ವಾತಾತ್ಮಜರೇ ? ” ಎಂದು ಅವನು ಬಲು ಹಗುರಾದ ಧ್ವನಿಯಿಂದ ದೀನನಾಗಿ ಕೇಳಿದನು.

“ ಓಹೋ, ಹೋಗಿದ್ದೆನು. ಕಲ್ಯಾಣಸುಂದರನಿಗೆ ನಿಮ್ಮ ದೀನವಾದ ಅವಸ್ಥೆಯನ್ನು ತಿಳಿಸಿದೆನು. ಅವನಿಗೆ ಕನಿಕರ ಬಂದು ‘ ಈಗಲೆ ಬರುವೆ’

ನೆಂದು ಹೇಳಿದ್ದಾನೆ. ಇನ್ನೊಂದು ಹದಿನೈದು ನಿಮಿಷಗಳಲ್ಲಿ ಬರುವನು."

"ಸತ್ಯವೇ? ಪುಣ್ಯಕಟ್ಟಿಕೊಂಡಿರಿ ಕಂಡಿರಾ. ಆದರೆ ಆ ಮುದಲಿ ಯಾರನು ನನ್ನೊಡನೆ ಮಾತಾಡುತ್ತಿರುವಾಗ ನೀವು ಇಲ್ಲಿ ಇರಲಾಗದು."

"ಅದೊಂದು ಮಾತು ಬಿಟ್ಟುಬಿಡಿರಿ. ಇಂಥ ಗಂಡಾಂತರದ ಸಮಯ ದಲ್ಲಿ ನಾನು ನಿಮ್ಮನ್ನು ಅಗಲಿ ಇರಲಾರೆನು. ಕುವೈದ್ಯನಾದ ಕಲ್ಯಾಣ ಸುಂದರನಿಂದ ನಿಮ್ಮ ರೋಗದ ಚಿಕಿತ್ಸೆಯಾಗದಿದ್ದರೆ ಅವನನ್ನು ಹೊರಗೆ ಹಾಕಿ ನಾನೇ ಉಪಚಾರ ಮಾಡಬೇಕಲ್ಲವೆ?" ಎಂದು ನಾನು, ಚೋಳ ರಾಜನು ತಲೆಯೊಡಕೊಂಡ ಶ್ರೀನಿವಾಸನ ಮುಂದೆ ನಿಂತು ಪ್ರಾರ್ಥಿಸಿದೆನು.

"ನಿನ್ನ ಆಗ್ರಹವಿದ್ದರೆ ನನ್ನೀ ಬೆನ್ನಿನ ಹಿಂದೆ ಇರುವ ಹಾಸಿಗೆಯ ಸುರುಳಿಯಲ್ಲಿ ಸುತ್ತಿಕೊಂಡು ಕುಳ್ಳಿರು. ತ್ವರೆಮಾಡು, ಮುದಲಿಯು ಬಂದ ನೆಂದು ಕಾಣುತ್ತದೆ; ಪಾವಟಿಗೆಯ ಮೇಲೆ ಕಾಲಸಪ್ಪಳವಾಗುತ್ತದೆ."

ನಾನು ಅಡಗಿಕೊಂಡು ಒಂದೆರಡು ನಿಮಿಷಗಳಾಗಿದ್ದಿಲ್ಲ, ಆಗಲೆ ಕಲ್ಯಾಣಸುಂದರನು ಒಳಗೆ ಬಂದನು.

"ಯಾರೂ ಇಲ್ಲವೇ?" ಎಂದು ಅವನು ಚಕಿತನಾಗಿ ಉದ್ಗಾರ ತೆಗೆದು "ಸರಲಾಕ್ಷರಾವ! ಸರಲಾಕ್ಷರಾವ!' ಎಂದು ಮೆಲ್ಲನೆ ಕೂಗಿದನು.

ಉತ್ತರ ಬರಲಿಲ್ಲ. ಕಲ್ಯಾಣಸುಂದರನು ಸರಲಾಕ್ಷನ ಭುಜವನ್ನು ಹಿಡಿದು ಅಲ್ಲಾಡಿಸಿ ಎಚ್ಚರಿಸಿದನು.

"ಯಾರಲ್ಲಿ? ನನ್ನ ಪ್ರಾಣ ಹೋಗಿದೆಯೋ ಇನ್ನೂ ಇದೆಯೋ? ಪರೀಕ್ಷಿಸಿ ಹೇಳಿರಿ." ಎಂದು ಸರಲಾಕ್ಷನು ನುಡಿದನು, ನಾನು ಅವನ ಚಮತ್ಕಾರವಾದ ನುಡಿ ಕೇಳಿ ಬೆರಗಾದೆನು.

"ಸರಲಾಕ್ಷ, ಹೀಗೆ ನನ್ನ ಮೋರೆಯನ್ನು ನೋಡಿರಿ. ಕಲ್ಯಾಣ ಸುಂದರನ ಗುರುತು ಹತ್ತಿತೆ?" ಎಂದು ಮುದಲಿಯಾರನು ಕೇಳಿದನು.

"ದಂಡಂ! ಅಯ್ಯಾ, ಹಾಗೆ ಕುರ್ಚಿಯ ಮೇಲೆ ಕುಳಿತುಕೊಳ್ಳಿರಿ. ನನ್ನ ಪ್ರಾರ್ಥನೆಯನ್ನು ಮನ್ನಿಸಿ ತಾವು ಬಂದದ್ದು ಭಗವತ್ಕೃಪಾ ಪ್ರಸಾ ದವೇ."

"ನಿಮ್ಮ ಪ್ರಕೃತಿ ಹೇಗಿದೆ?"

"ನನ್ನ ಕಥೆ ಮುಗಿದಂತಾಯಿತು ಮುದಲಿಯಾರರೆ. ನಾಮಾಂಕಿತ

ರಾದ ವೈದ್ಯರು ಕೈಬಿಟ್ಟುಬಿಟ್ಟರು. ನಿಮ್ಮ ಪುಣ್ಯದಿಂದಲೇ ನಾನು ಬದುಕಿ ಉಳಿಯತಕ್ಕವನು ಏನು ಉಪಾಯ ಮಾಡುವಿರೋ ನೋಡಿರಿ. " ಎಂದು ನುಡಿದ ಸರಲಾಕ್ಷನ ದೀನವಾಣಿಯನ್ನು ಕೇಳಿ ನನಗೆ ವ್ಯಸನವಾಯಿತು.

" ವೈದ್ಯರು ನಿಮ್ಮ ಬೇನೆಗೆ ಏನು ಹೆಸರಿಟ್ಟರು ? "

" ನಿಶ್ಚಿತಾತ್ಮಕವಾದ ನಿದಾನವಾಗಿಲ್ಲ. ನನ್ನ ಜ್ವರವು ಸುಮಾತ್ರಾದ 'ಕೂಲೀ' ಜ್ವರವಾಗಿರಬಹುದೆಂದು ಡಾಕ್ಟರ ನಾಡಗೀರರ ಅಭಿಪ್ರಾಯವು. ನಿಮ್ಮ ವಿಜಯರಂಗನಾದರೂ ಇಂಥ ಜ್ವರದಿಂದಲೇ ತೀರಿಕೊಂಡನೆಂದು ನೀವೇ ಹೇಳಿರುವಿರಿ. ನನ್ನ ಜ್ವರದ ಲಕ್ಷಣಗಳಾದರೂ ಅಂಥವೇ ಆಗಿವೆ. "

" ಅಸಾಧ್ಯವಾದ ಬೇನೆ ! ನೋಡಿರಿ, ನಮ್ಮ ಹುಡುಗನು ನನ್ನ ಕಣ್ಣಾರೆ ಸತ್ತು ಹೋಗಲಿಲ್ಲವೆ?" ಎಂದು ಮುದಲಿಯು ಗದ್ಗದಿತ ಕಂಠನಾಗಿ ನುಡಿದನು.

" ವಿಜಯರಂಗನ ದೈವವು ವಿಜಯರಂಗನ ಸುತ್ತ. ಆದರೆ ನಿಮ್ಮ ಉಪಾಯಗಳಿಂದ ನನಗೇಕೆ ವಾಸಿಯಾಗಬಾರದು ? ದಯಮಾಡಿ ನೀವು ಮನಸ್ಸಿನ ಮೇಲೆ ತೆಗೆದುಕೊಂಡು ನನಗೆ ಪ್ರಾಣದಾನ ಕೊಟ್ಟರೆ ನಿಮ್ಮ ಉಪಕಾರವನ್ನು ಏಳೇಳು ಜನ್ಮಗಳಲ್ಲಿಯೂ ಮರೆಯಲಿಕ್ಕಿಲ್ಲ. "

" ಈ ರೋಗವು ನನಗೆ ಅಸಾಧ್ಯವಾಗಿ ತೋರುತ್ತದೆ" ಎಂದು ಮುದಲಿಯಾರನಂದನು.

" ಹಾಗೆನ್ನಬೇಡಿರಿ, ಕೃಪೆಮಾಡಿರಿ. ನಾನು ಹಿಂದಕ್ಕೆ ನಿಮಗೆ ವಿರೋಧಿಯಾಗಿ ನಡೆದೆನೆಂದು ಸಿಟ್ಟುಹಿಡಿಯಬೇಡಿರಿ. ಇನ್ನುಮೇಲೆ ನಾವೂ ನೀವೂ ಸಖ್ಯದಿಂದಲೇ ಇರತಕ್ಕದ್ದೆಂದು ನಾನು ಬಯಸುತ್ತೇನೆ. ಅಯ್ಯಯ್ಯೋ! ಹೊಟ್ಟೆಯಲ್ಲಿ ಬೆಂಕಿಬಿದ್ದಂತಾಯಿತು. ಕಾಲು ಭಾರವಾಗಿದೆ; ಎಳಕೊಳ್ಳಲಿಕ್ಕೆ ಬರಲೊಲ್ಲದು ಸಾಯುತ್ತೇನೆ. ಕಲ್ಯಾಣಸುಂದರರೆ, ಹೊಟ್ಟೆಯಲ್ಲಿ ಹಾಕಿಕೊಳ್ಳಿರಿ ! " ಎಂದು ಸರಲಾಕ್ಷನು ಚೀರಿದನು.

" ಇದೋ ಸರಲಾಕ್ಷ, ಮರಣದ ಚಿಹ್ನಗಳು ತೋರಲಾರಂಭಿಸಿದವು. ನೀನು ಇನ್ನೊಂದು ತಾಸೆರಡು ತಾಸಿನ ಜೊತೆಗಾರನು. ದುರಾತ್ಮಾ, ನೀನು ನನ್ನ ಕೊರಳಿಗೆ ಉರಲು ತರಬೇಕೆಂದು ಮಾಡಿದ್ದಿಯಲ್ಲವೆ ? ಅದರ ಫಲಭೋಗವನ್ನು ಈಗ ನೀನು ಉಣ್ಣು ! "

" ಹಾಗೆ ನಿರ್ದಯರಾಗಬೇಡಿರಿ, ನನ್ನನ್ನು ಉಳಿಸಿಕೊಳ್ಳಿರಿ. "

" ನಿನ್ನನ್ನು ಉಳಿಸಿಕೊಳ್ಳುವದು ಇನ್ನು ಧನ್ವಂತರಿಗೂ ಅಸಾಧ್ಯವು ! ದುಷ್ಟನೆ, ನಿನಗೆ ವಿಜಯರಂಗನ ಮರಣದ ಶೋಧ ಬೇಕಾಗಿತ್ತಲ್ಲವೆ ? ನಾನೇ ಅವನನ್ನು ಕೊಂದೆನು. ನೀನೇನು ಮಾಡುವಿ ಇನ್ನು ? "

" ನಿಮ್ಮ ಹುಡುಗನನ್ನು ನೀವೇ ಕೊಂದಿರೆಂಬುವದು ಅಸಾಧ್ಯವು. 'ಕೂಲೀ' ಜ್ವರವನ್ನು ಮನುಷ್ಯನ ಹೊಟ್ಟೆಯಲ್ಲಿ ನೀವು ಹೇಗೆ ಹಾಕಬಲ್ಲಿರಿ ?"

" ಸರಲಾಕ್ಷ, ನೀನು ಜಾಣನೆಂದು ನಾನು ತಿಳಿದಿದ್ದೆನು. ಇಕೋ, ಈ ಮಾಡದಲ್ಲಿಯ ಜಂತದ ಕರಡಿಗೆಯನ್ನು ನೋಡು. ಇದರಲ್ಲಿ ಒಂದು ಸೂಕ್ಷ್ಮವಾದ ತಂತಿಯ ಸುರುಳಿಯಿದೆ. ಅದರ ಕೊನೆಗೆ ಆ ಜ್ವರದ ಕೀಟಕದ ರಸವನ್ನು ತಗಲಿಸಿದ್ದೆನು. ಇದೇ ಕರಡಿಗೆಯನ್ನು ಅಂಚೆಯವನು ಬುಧವಾರ ದಿವಸ ಪ್ರಾತಃಕಾಲಕ್ಕೆ ತಂದು ಕೊಟ್ಟನಷ್ಟೆ ? ಅದನ್ನು ನಾನೇ ನಿನಗೆ ಕಳಿಸಿದ್ದೆನು. "

" ಅಹುದೇನು ? ಆ ಕರಡಿಗೆಯನ್ನು ನಾನು ಕೈಯಲ್ಲಿ ತೆಗೆದುಕೊಂಡ ಕೂಡಲೆ ಒಳಗಿನ ತಂತಿಯು ನನ್ನ ಕೈಗೆ ನಟ್ಟಿತು " ಎಂದು ಸರಲಾಕ್ಷನು ನುಡಿದನು.

" ಅದೇ ತಂತಿಯ ತುದಿಗೆ ವಿಷವಿತ್ತು. ಆ ವಿಷವು ನಿನ್ನ ಕೈಯಲ್ಲಿ ಸೇರಿದಾಗಿನಿಂದ ನಿನಗೆ ಜ್ವರ ಬಂದಿತಲ್ಲವೆ ? ಈ ರೀತಿಯಾಗಿಯೇ ನಾನು ನನ್ನ ಅಣ್ಣನ ಮಗನಾದ ವಿಜಯರಂಗನನ್ನು ಕೊಂದೆನು. ನನ್ನ ವೈರಿಯಾದ ನಿನ್ನನ್ನು ಈಗ ಯಮಸದನಕ್ಕೆ ಅಟ್ಟುವೆನು. ವಿಜಯರಂಗನನ್ನು ಕೊಂದವನ ಶೋಧವು ನಿನಗೆ ಬೇಕಾಗಿತ್ತಲ್ಲವೆ ? ಈಗ ಶೋಧವಾಯಿತಲ್ಲ ! ಹೊಡೆ ಪಾಂಚಜನ್ಯವನ್ನು ! "

"ಅಯ್ಯೋ ! ನಾನಿನ್ನೇನು ಮಾಡಲಿ ? ಹೊಟ್ಟೆಯೊಳಗೆ ಸಂಕಟವು ಹೆಚ್ಚಾಯಿತು! ಕಲ್ಯಾಣ ಸುಂದರಂ, ವಿಜಯ ರಂಗನನ್ನು ನೀವು ಕೊಂದಿರಲಿ ಕೊಲ್ಲದಿರಲಿ, ಆ ಬಗ್ಗೆ ನಾನಿನ್ನು ಯತ್ಕಿಂಚಿತ್ತಾದರೂ ಮನಸ್ಸು ಹಾಕುವದಿಲ್ಲ. ನನ್ನನ್ನು ಉಳಿಸಿಕೊಳ್ಳಿರಿ. " ಅಹಾ ! ಅಹಾ ! ಎಂದು ಕೆಮ್ಮಿ " ಗಂಟಲು ಒಣಗುತ್ತದೆ, ತುಸು ನೀರು ಕೊಡಿರಿ. "

" ತೆಗೆದುಕೊಳ್ಳು, ನೀರು ಕುಡಿದು ಸಾಯಿ. ಇನ್ನು ನೀನು ಎರಡು

ಗಳಿಗೆಯಲ್ಲಿ ಪ್ರೇತನಾಗುವಿ. ”

ಸರಲಾಕ್ಷನು ನೀರು ಕುಡಿದು ಉಗುಳಿ “ ನೀರು ಗಂಟಲಿನಲ್ಲಿ ಇಳಿಯಲೊಲ್ಲದು. ಕಣ್ಣು ಕತ್ತಲೆಗುಡಿಸುತ್ತವೆ. ಕಲ್ಯಾಣಸುಂದರಂ, ದೀಪವನ್ನು ನಿಚ್ಚಳವಾಗಿ ಮಾಡಿರಿ. ”

“ ಆಗಲಿ, ಈ ಪ್ರಕಾಶವು ಕೂಡ ನಿನ್ನ ಕಣ್ಣಿಗೆ ಬೆಳಕು ಕೊಡಲಾರದು ” ಎಂದು ಹೇಳಿ ಮುದಲಿಯಾರನು ಗ್ಯಾಸದ ದೀಪವು ಚನ್ನಾಗಿ ಉರಿಯುವಂತೆ ಎತ್ತಿದನು.

ಪ್ರಕಾಶವು ಸಂಪೂರ್ಣವಾಗಿ ಬಿದ್ದ ಕೂಡಲೆ ಸರಲಾಕ್ಷನು ಟಣ್ಣನೆ ಎದ್ದು ಕುಳಿತು “ ಶಾಬಾಸ್ ಮುದಲಿಯಾರನೆ, ಚನ್ನಾಗಿ ಮಾಡಿದಿ. ಇನ್ನು ನಾಲ್ಕಾರು ಸಿಗರೆಟ್ಟುಗಳನ್ನು ಕೊಡು, ಒಳ್ಳೇ ಹುರುಪಿನಿಂದ ಸೇದುವೆನು. ” ಎಂದು ರೋಗರಹಿತನ ದನಿತೆಗೆದು ಗಂಟೆ ಹೊಡೆದಂತೆ ನುಡಿದನು.

“ ಸರಲಾಕ್ಷ, ಹೀಗೇಕೆ ಮಾಡುವಿ? ಎದ್ದು ಕೂಡಬೇಡ. ನಿನ್ನ ಜೀವಕ್ಕೆ ಈಗಲೇ ಅಪಾಯವಾದೀತು ” ಎಂದು ಮುದಲಿಯು ತನ್ನ ಕುರ್ಚಿಯಿಂದೆದ್ದು ಸರಲಾಕ್ಷನ ಹಾಸಿಗೆಯ ಸವಿಾಪಕ್ಕೆ ಬಂದನು.

“ ದೂರದಲ್ಲಿರು ನೀಚನೆ, ನನ್ನ ಮೈಮೇಲೆ ಬಂದರೆ ನಿನ್ನನ್ನು ಕಾಲಿಲೊದ್ದು ಕೆಡಹುವೆನು. ವೈದ್ಯ ವಾತಾತ್ಮಜರೆ, ಅಡಗಿಕೊಂಡ ಪೆಟ್ಟಿಬಿಟ್ಟು ಹೊರಗೆ ಬನ್ನಿರಿ ” ಎಂದು ಹುಲಿಮಾಸೆಯು ಹುರುಪಿನಿಂದ ನುಡಿದನು.

ನಾನು ಹೊರಬಿದ್ದು ಬಂದೆನು. ಅಷ್ಟರಲ್ಲಿ ಬಾಗಿಲವನ್ನು ತೆರೆದು ಗೋವಿಂದರಾವ ಪೋಲೀಸ್ ಇನ್‌ಸ್ಪೆಕ್ಟರರೂ ಬಂದರು. ಮುದಲಿಯು ಓಡಿಹೋಗಬೇಕೆಂದು ಪ್ರಯತ್ನ ಮಾಡುವಷ್ಟರಲ್ಲಿಯೇ ಪೋಲಿಸರು ಅವನನ್ನು ಹಿಡಿದು ಚತುರ್ಭುಜನನ್ನಾಗಿ ಮಾಡಿದರು.

ಕಲ್ಯಾಣಸುಂದರನು ಮನೆ ಅದರುವಂತೆ ಗದ್ದರಿಸುತ್ತ “ ಯಾರು ನೀವು? ನನಗೆ ಬೇಡಿಯನ್ನು ಹಾಕಲಿಕ್ಕೆ ನಿಮಗೇನು ಅಧಿಕಾರ? ನನ್ನ ಅಪರಾಧವೇನು ? ” ಎಂದು ಕೇಳಿದನು.

ಸರಲಾಕ್ಷನು ಹಾಸಿಗೆಯಿಂದೆದ್ದು ನಿಂತು, “ ಕಲ್ಯಾಣಸುಂದರಂ, ನಿನ್ನ ಅಪರಾಧವೇನೆಂದು ಕೇಳುವಿಯಾ? ಇನ್‌ಸ್ಪೆಕ್ಟರ ಸಾಹೇಬರಿಗೆ ಈಗಲೇ ಹೇಳುವೆನು ” ಎಂದು ನುಡಿದು ಇನ್‌ಸ್ಪೆಕ್ಟರರನ್ನು ಕುರಿತು,

"ಗೋವಿಂದರಾವಜಿ, ಈ ನರಾಧಮನ ಅಣ್ಣನಾದ ಸೋಮಸುಂದರನು ವ್ಯಾಪಾರದಲ್ಲಿ ಘನತೆಯನ್ನು ಹೊಂದಿ ಮೂರುನಾಲ್ಕು ಲಕ್ಷ ರೂಪಾಯಿಗಳನ್ನು ಸಂಪಾದಿಸಿ ಸತ್ತುಹೋದನು. ಅವನು ಸತ್ತ ಬಳಿಕ ಅವನ ಮಗನಾದ ವಿಜಯರಂಗನು ಈ ಪಾಪಿಯ ಆಶ್ರಯಕ್ಕೆ ಬಂದನು. ಈ ಕೊಲೆಗಡಕನು ಹೇಗಾದರೂ ಮಾಡಿ ಆ ಮಗುವನ್ನು ಕೊಂದು ಸೋಮಸುಂದರನ ಹಣವನ್ನೆಲ್ಲ ಅಪಹರಿಸಬೇಕೆಂಬ ದುರ್ಬುದ್ಧಿಯಿಂದ 'ಕೂಲೀ' ಜ್ವರದ ಕ್ರಿಮಿಗಳನ್ನು ತರಿಸಿ ಅವುಗಳ ರಸಿಕೆಯನ್ನು ವಿಜಯರಂಗನ ಮೈಗೆ ತಗಲಿಸಿದನು. ಪಾಪ, ಆ ಕೂಸು ಭಯಂಕರವಾದ ಆ ಜ್ವರದ ಬಾಧೆಗೆ ಈಡಾಗಿ ಮೂರೇ ದಿವಸಗಳಲ್ಲಿ ಮಡಿದುಹೋಯಿತು. ಕಲ್ಯಾಣಸುಂದರನು ತನ್ನ ಪಾಪಕೃತ್ಯವನ್ನು ಈಗಲೇ ನನ್ನ ಮುಂದೆ ಒಪ್ಪಿಕೊಂಡಿದ್ದನ್ನು ಈ ಮಾತಾತ್ಮಜ ವೈದ್ಯರು ಕೇಳಿದ್ದಾರೆ. ಇದೇ ವಿಷದ ಕರಡಿಗೆಯು" ಎಂದು ಆ ಜಂತದ ಕರಡಿಗೆಯನ್ನು ಪೋಲೀಸರ ಸ್ವಾಧೀನ ಮಾಡಿದನು. ಪೋಲೀಸರು ಆರೋಪಿಯನ್ನು ಜಗ್ಗಿಕೊಂಡು ನಡೆದರು.

ಇನ್‌ಸ್ಪೆಕ್ಟರ ಗೋವಿಂದರಾಯರೂ ನಾನೂ ಕುಳಿತುಕೊಂಡು ಇದೇನು ಚಮತ್ಕಾರವೆಂದು ಸರಲಾಕ್ಷನನ್ನು ಕೇಳಿದೆವು.

"ಇದೊಂದು ಶೋಧಕನ ಚಾತುರ್ಯದ ಚಮತ್ಕಾರವು" ಎಂದು ನುಡಿದು ಸರಲಾಕ್ಷನು ನಕ್ಕನು.

"ನಿಮ್ಮ ಬೇನೆ ಸುಳ್ಳು!" ಎಂದು ನಾನು ಚಕಿತನಾಗಿ ಕೇಳಿದೆನು.

"ಎಲ್ಲಿಯ ಬೇನೆ ಏನು ಕಥೆ. ಬೇನೆಯ ಸೋಗು ಹಾಕಿಕೊಂಡಿದ್ದೆನು. ಮೂರು ದಿವಸ ಮಾತ್ರ ವಿಷ್ಣುಪಂಚಕವನ್ನು ಮಾಡಿ ಮೈಯಲ್ಲಿ ನಿತ್ರಾಣವನ್ನು ತಂದುಕೊಂಡು ಮೋರೆಗೆ ವ್ಯಾಸಿಲಿನ್ ಎಣ್ಣೆಯನ್ನು ಸವರಿ ತುಟಿಗೆ ಮೇಣವನ್ನು ಹಚ್ಚಿಕೊಂಡು ಸಜ್ಜನಾಗಿ ಕೂತಿದ್ದೆನು. ಕಲ್ಯಾಣನಿಗೆ ಸಂಶಯ ಬರಲೇ ಇಲ್ಲ, ಹೇಗೆ ಬರುವದು?" ಎಂದು ಸರಲಾಕ್ಷನು ಹೇಳಿದನು.

ವಸತಿಗೃಹದ ಸ್ವಾಮಿನಿಯಾದ ಲೀಲಾಬಾಯಿಗೆ ಈ ವರ್ತಮಾನವು ತಿಳಿದ ಕೂಡಲೆ ಆನಂದದಿಂದ ಕುಣಿದಾಡಿದಳು. "ರಾಯರೆ, ನೀವು ಇಷ್ಟು ಕೃತ್ರಿಮರಾಗಿರುವಿರಾ?" ಎಂದು ಬಾಯ ಮೇಲೆ ಕೈ ಇಟ್ಟುಕೊಂಡಳು.

"ಹೋಗಮ್ಮಾ, ಹಸಿವೆಯಾಗಿದೆ, ವಿಲಕ್ಷಣವಾದ ಹಸಿವೆಯಾಗಿದೆ. ಸಮೀಚೀನವಾದ ಉಪಹಾರವನ್ನು ನೀನೀಗಲೆ ತರದಿದ್ದರೆ ನಿನ್ನನ್ನೇ ಮುಂದು ತಿನ್ನುವೆನು" ಎಂದು ಸರಲಾಕ್ಷನು ನಗುತ್ತ ನುಡಿದನು.

ಲೀಲಾಬಾಯಿಯು ಮೂರು ಬೆಳ್ಳಿಯ ತಾಟುಗಳಲ್ಲಿ ಘಮಘಮಿಸುವ ಪಕ್ವಾನ್ನಗಳನ್ನೂ ಹಾಲು ಕಾಫಿಗಳನ್ನೂ ಅವರೆಲ್ಲರ ಮುಂದಿರಿಸಿ ತಿನ್ನಿತಿನ್ನಿರೆಂದು ಆಗ್ರಹ ಮಾಡುತ್ತಲೂ ಸಂತೋಷದಿಂದ ನಗುತ್ತಲೂ ಅಲ್ಲಿಯೇ ನಿಂತಿದ್ದಳು.

## ವಿಸ್ಮಯಜನಕವಾದ ಹಿಂಸೆಯ ಕ್ರಮವು ೭ ೭

ವ್ಯಾಲೆಂಟಾಯಿನ್ ಡಿಗ್ಬಿಯು ಭೋಜನವನ್ನು ತೀರಿಸಿಕೊಂಡು 'ಹಾವಾನಾ ಸಿಗರ' (ತಂಬಾಕದ ಸುರುಳಿ) ಸೇದುತ್ತ ತನ್ನ ಆರಾಮ ಕುರ್ಚಿಯಲ್ಲಿ ಯಥಾಸುಖವಾಗಿ ಕುಳಿತು ಏನೇನೋ ವಿಚಾರ ಮಾಡುತ್ತಿದ್ದನು. ಸುಗಂಧಿತವಾದ ಸಿಗರದ ಹೊಗೆಯು ಕಾಮಿನಿಯ ಕೇಶಕಲಾಪದಂತೆ ಸುರುಳಿ ಸುರುಳಿಯಾಗಿ ಅಂತರಿಕ್ಷದಲ್ಲಿ ಗಾಳಿಗೆ ಹೊಯ್ದಾಡುತ್ತಿರುವದನ್ನು ಮೇಲ್ದೃಷ್ಟಿಯಿಂದ ನೋಡುತ್ತ ಕುಳಿತಿದ್ದನು. ಆಗ " Your presence makes my heart rejoice and sing ( ನಿನ್ನ ಮುಖವ ಕಂಡು ಹರುಷವಾಗಿ ಗಾನೋನ್ಮುಖಳಾಗಿರುವೆನು )" ಎಂದು ಇಂಗ್ಲಿಶದಲ್ಲಿ ಯಾರೋ ಬಹು ಮಂಜುಲವಾಗಿ ಹಾಡಿದರು. ಡಿಗ್ಬಿಯು ಚಕಿತನಾಗಿ ಎದ್ದು ಕುಳಿತು ಗಾಯಕಿಯನ್ನು ಕಂಡು "ಡಿಯಾನಾ!" ಎಂದು ಉದ್ಗಾರ ತೆಗೆದನು.

"ವ್ಯಾಲೆಂಟಾಯಿನ್, ಇಂದು ಮುಂಜಾವಿನಲ್ಲಿ ನನ್ನ ಮನೆಗೆ ಚಹ ಉಪಹಾರಕ್ಕೆ ಬರುವಿಯೆಂದು ನಂಬಿ ನಿನ್ನ ಮಾರ್ಗಪ್ರತೀಕ್ಷೆಯನ್ನು ಮಾಡಿ ಮಾಡಿ ಬೇಸತ್ತುಹೋದೆನು. ಎಲ್ಲಿ ಹೋಗಿದ್ದಿ ನೀನು?" ಎಂದು ಡಿಯಾನಾ ಸುಂದರಿಯು ತನ್ನ ಸುಲಲಿತವಾದ ಹಸ್ತವನ್ನು ಆ ತರುಣನ ಭುಜದ ಮೇಲೆ ಒಯ್ಯಾರದಿಂದಿಟ್ಟು ಮಂದಸ್ಮಿತೆಯಾಗಿ ಕೇಳಿದಳು.

ಡಿಗ್ಬಿಯು ತನ್ನ ಸುಖಾಸನದಿಂದೆದ್ದು ಡಿಯಾನೆಯ ಕೈ ಹಿಡಿದು ಅವಳನ್ನು ಹಂಸತೂಲಿಕೆಯ ಮಂಚದ ಮೇಲೆ ಕುಳ್ಳಿರಿಸಿ "ಡಿಯಾನಾ, ಇಂದು ನನ್ನಿಂದ ಅನುಚಿತವಾಯಿತು; ಕ್ಷಮಿಸು. ನಾನು ಬೇಗನೆ ಇಂಗ್ಲಂಡಕ್ಕೆ ತೆರಳುವವನಾಗಿರುವದರಿಂದ ಅನೇಕವಾದ ವ್ಯವಸ್ಥೆಗಳನ್ನು ಮಾಡಿಟ್ಟುಕೊಳ್ಳುವದರಲ್ಲಿ ತೊಡಗಿದ್ದೆನು." ಎಂದು ನುಡಿದು ಆ ಸುಂದರಿಯ ಹಸ್ತವನ್ನು ಗಟ್ಟಿಯಾಗಿ ಹಿಡಿದು ಕ್ಷಮೆ ಬೇಡಿದನು.

ಡಿಯಾನೆಯು ಆ ಸುಸಂಧಿಯನ್ನು ಸಾಧಿಸಿಕೊಂಡು ವ್ಯಾಲೆಂಟಾಯಿನನನ್ನು ಭರದಿಂದ ಜಗ್ಗಿ ತನ್ನ ಪಾರ್ಶ್ವದಲ್ಲಿ ಕುಳ್ಳಿರಿಸಿಕೊಂಡು "ಪುರುಷರಲ್ಲಿನ್ನು ವಿಶ್ವಾಸವನ್ನೇ ಇಡಬಾರದಾಯಿತು!" ಎಂದು ಅಧಿಕ್ಷೇಪಿಸುವ

ನುಡಿಯಾಡಿದರೂ ಅವಳು ಆ ತರುಣನನ್ನು ಪ್ರೇಮದಿಂದ ಬಿಗಿದಪ್ಪುವಳೋ
ಎಂಬಂತೆ ಅವನ ಹೆಗಲ ಮೇಲೆ ಕೈ ಹಾಕಿ ಮುದ್ದು ಬರುವಂತೆ ಮುಗುಳು
ನಗೆ ನಕ್ಕಳು.

ಡಿಯಾನೆಯು ಬಲು ಚಲುವೆಯಾದ ಹೆಂಗಸು. ಅವಳ ಅಂಗ
ಕಾಂತಿಯು ತೇಜಸ್ಸುಳ್ಳದ್ದಾಗಿತ್ತು. ಸಶಕ್ತಳಾದ ಪ್ರೌಢೆಯು ಮೂವತ್ತು
ಮೂವತ್ತೆರಡು ವರ್ಷದ ಪ್ರಾಯದವಳಾಗಿದ್ದರೂ ಅರಿಯದವರಿಗೆ ಅವಳು
ಇಪ್ಪತ್ತು ವರ್ಷದ ನವತರುಣಿಯಂತೆ ಕಾಣುತ್ತಿದ್ದಳು. ಅವಳ ಉಡಿಗೆ
ತೊಡಿಗೆಗಳು ಬೆಲೆಯುಳ್ಳವುಗಳೂ ಅಂದವಾಗಿ ಕಾಣುವಂತೆ ಮಾಡಿದ್ದವೂ
ಆಗಿದ್ದವು. ಚಕಚಕನೆ ಹೊಳೆಯುವ ರತ್ನಖಚಿತವಾದ ದ್ರಾಕ್ಷಬಳ್ಳಿಯು
ಅವಳ ನೀಲಾಳಕಗಳನ್ನು ಬಂಧಿಸಿತ್ತು. ವಜ್ರದ ಪದಕದಿಂದ ಥಳಥಳಿಸುವ
ಮುಕ್ತಾಹಾರವು ಅವಳ ದಿವ್ಯವಾದ ಕಂಠದಿಂದ ಇಳಿಬಿದ್ದು, ಅರ್ಧವ್ಯಕ್ತವಾಗಿ
ರುವ ಪೀನೋನ್ನತವಾದ ವಕ್ಷೋಜಗಳನ್ನು ಅಲಂಕರಿಸಿತ್ತು. ಕೆಂಡದಂತೆ
ಪ್ರಕಾಶಿಸುತ್ತಿರುವ ಮಾಣಿಕದ ಉಂಗುರವು ಆ ಸುಂದರಿಯ ಸುಲಲಿತವಾದ
ಹಸ್ತಕ್ಕೆ ವಿಲಕ್ಷಣವಾದ ಶೋಭೆಯನ್ನು ಕೊಟ್ಟಿತ್ತು. ಆ ಮೀನಾಕ್ಷಿಯ
ಕಟಾಕ್ಷಕ್ಷೇಪವು ಕಠೋರಹೃದಯರಾದ ಪುರುಷರ ಎದೆಗಳನ್ನು ಕ್ಷಣಮಾತ್ರ
ದಲ್ಲಿ ಸೀಳಿಬಿಡುವಂತೆ ಕಂಡಿತು. ಪರಿಪಕ್ವವಾದ ಬಿಂಬದಂತೆ ಕೆಂಪಾಗಿ
ತೋರುವ ಅವಳ ಅಧರದಲ್ಲಿ ಅಮೃತವೇ ಇರುವದೆಂದು ನಂಬಿ ಅಪ್ರೌಢರಾದ
ತರುಣರು ಬಟ್ಟೆಬಿಡದಲೆ ಅವಳ ಮುಖವನ್ನೇ ನೋಡುತ್ತ ನಿಲ್ಲಬಹುದು.
ಕೋಕಿಲಸ್ವರವನ್ನು ಹೀಯಾಳಿಸುವ ಅವಳ ಮಂಜುಲವಾದ ಧ್ವನಿಯನ್ನೂ,
ಅವಳ ವಿನೋದಯುತವಾದ ಸವಿನುಡಿಗಳನ್ನೂ ಕೇಳಿ ಮುದುಕರು ಕೂಡ
ಸ್ಫೂರ್ತಿಯನ್ನು ಹೊಂದಿ ಅಗ್ಗಳವಾದ ನುಡಿಗಳಿಂದ ಅವಳ ಸ್ತುತಿಮಾಡು
ವರು. ಅಂಥ ವಿಲಾಸಿನಿಯಾದ ಸುಂದರಿಯು ಮುಗುಳುನಗೆಯನ್ನು ತಾಳಿ
ಮೋಹಬರುವಂತೆ ಪ್ರಶ್ನಮಾಡಿದಾಗ ವ್ಯಾಲೆಂಟಾಯಿನನು ನಿರ್ಜಿತನಾಗಿ
"ನಾನು ಮಾಡಿದ ತಪ್ಪೇನು?" ಎಂದು ನುಡಿದು ಅವಳ ಪಾರ್ಶ್ವವನ್ನಾ
ಶ್ರಯಿಸಿಕೊಂಡು ಕುಳಿತನು.

"ಏನೆಂದರೇನು ಹೇಳಲಿ? ಕಠೋರಹೃದಯನಾದ ತರುಣನೆ,
ಕಾಮಿನಿಯರ ಹೃದಯವನ್ನು ಅಪಹರಿಸಿಕೊಂಡು ಹಾಗೆ ಮಹಾಸಾಗರದ

ಅಚೆಯ ದಂಡೆಗೆ ಹೋಗಿ ಕುಳ್ಳಿರುವ ವಿಚಾರ ಮಾಡಿದರೆ ನನ್ನ ಗತಿ ಯೇನು ? ”

ವ್ಹಾಲೆಂಟಾಯಿನನು ಆ ಸುಂದರಿಯ ಕೆಂದುಟಿಯನ್ನು ರಭಸದಿಂದ ಚುಂಬಿಸಿ ನಕ್ಕು “ ಡಿಯಾನಾ, ನಾನಿನ್ನೂ ಬಡವನು. ನಿನ್ನಂಥ ವಿಲಾಸಿನಿಯ ಪತಿಯಾಗಿ ನಿನ್ನ ಸಕಲಾಭೀಷ್ಟಗಳನ್ನು ಒದಗಿಸಿಕೊಡಬೇಕಾದರೆ ನನ್ನಲ್ಲಿ ಕುಬೇರನ ಸಂಪತ್ತು ಬೇಕು. ಮುತ್ತು ಮಾಣಿಕ ವಜ್ರವೈಡೂರ್ಯಗಳಿಂದ ನಿನ್ನ ಪ್ರತ್ಯಂಗವನ್ನು ಅಲಂಕರಿಸದಿದ್ದರೆ ನಾನು ಸ್ತ್ರೀಸೌಂದರ್ಯದ ದ್ರೋಹಿಯಾಗುವೆನು. ” ಎಂದು ಮೆಲ್ಲನೆ ನುಡಿದನು.

“ ಪ್ರಿಯನೆ, ನಮ್ಮ ಸಮಾಜದ ನಿಯಮಗಳನ್ನು ನೋಡಲಾಗಿ ಸ್ತ್ರೀಯು ತನ್ನ ಮನೋಗತವನ್ನು ಸ್ಪಷ್ಟೋಕ್ತಿಗಳಿಂದ ವ್ಯಕ್ತಪಡಿಸುವದು ಅಪರಾಧವಾಗಿದ್ದರೂ ನೀನು ನನ್ನನ್ನು ಬಿಟ್ಟು ಸಹಸ್ರಯೋಜನದಾಚೆಗೆ ಹೋಗುವ ನಿಶ್ಚಯವನ್ನು ಮಾಡಿದರೆ ನನ್ನ ಮನಸ್ಸು ನಿಲ್ಲುವದೆಂತು ? ” ಎಂದು ನುಡಿದು ಡಿಯಾನೆಯು ನೀರಿನಿಂದ ತುಂಬಿದ ತನ್ನ ಕಣ್ಣುಗಳನ್ನು ಕರವಸ್ತ್ರದಿಂದ ಒರಿಸಿಕೊಂಡಳು.

ವ್ಹಾಲೆಂಟಾಯಿನನು ಪರವಶನಾಗಿ ಹೋದನು. ತಾನು ಹಿಂದೆ ಮಾಡಿದ ಅನೇಕವಾದ ನಿಶ್ಚಯಗಳನ್ನೆಲ್ಲ ಮರೆತುಬಿಟ್ಟು ಅವನು ಡಿಯಾನೆಯನ್ನು ಭರದಿಂದ ಅಪ್ಪಿಕೊಂಡು ಅವಳ ಅಧರಾಮೃತದ ಸಂಚಯವನ್ನೆಲ್ಲ ಬರಿದಾಗಿ ಮಾಡಿದನು.

“ ಡಿಯಾನಾ, ನಿನ್ನ ಸೌಂದರ್ಯಕ್ಕೆ ನಾನು ಸರ್ವಥಾ ಮೋಹಿತನಾಗಿರುವೆನು. ಆದರೆ ನಾನಿನ್ನೂ ಬಡವನೇ ಅಲ್ಲವೆ? ದೇವರು ನನ್ನ ಸಾಹಸಕ್ಕೆ ಅನುಕೂಲನಾದರೆ ನಾಲ್ಕಾರು ತಿಂಗಳಗಳಲ್ಲಿಯೇ ನಾನು ಶ್ರೀಮಂತರಲ್ಲಿ ಶ್ರೀಮಂತನಾಗತಕ್ಕವನು. ಅಲ್ಲಿಯ ವರೆಗೆ ತಡೆ, ಹೀಗೆ ಆತುರಳಾಗಬೇಡ” ಎಂದು ವಂಚನಾರಹಿತವಾದ ನುಡಿಗಳಿಂದ ಅವನು ಆ ರಮಣಿಗೆ ಆಶ್ವಾಸನವನ್ನಿತ್ತನು.

“ ವ್ಹಾಲೆಂಟಾಯಿನ್, ನನ್ನ ಪೂರ್ವದ ಪತಿಯಾದ ಎಡ್ವರ್ಡ ಕ್ಯಾಂಬೆಲ್ಲನು ಲಗ್ನವಾದ ಎರಡೇ ತಿಂಗಳಲ್ಲಿ ಸಮುದ್ರದ ಪಾಲಾಗಿ ಸತ್ತುಹೋಗಿ ನನ್ನನ್ನು ವೈಧವ್ಯದ ದುಃಖದಲ್ಲಿ ಮುಳುಗಿಸಿ ಹೋದನು. ಆತನಿಂದ ನನಗೆ

ಪ್ರಾಪ್ತವಾದ ಧನವಾದರೂ ವಿಪುಲವಾಗಿದೆ. ನಿನ್ನ ಧನವಿರದಿದ್ದರೇನಾಯಿತು? ನಾವು ದಂಪತಿಗಳಾಗಿ ಸುಖಿಗಳಾಗಿರಬಲ್ಲೆವಷ್ಟೆ? ಅದಿರಲಿ, ಆ ನಿನ್ನ ಸಾಹಸವೆಂಥದು ? ''

" ಇದೇ ಬ್ರೇಝಿಲ್ ದೇಶದಲ್ಲಿಯ ಕೆಲವೊಂದು ಅರಣ್ಯದಲ್ಲಿ ಎಷ್ಟು ಅಗಿದರೂ ಸವೆಯದಂಥ ಬಂಗಾರದ ಖನಿಗಳಿವೆ. ನಾನು ಆ ಪ್ರದೇಶದ ನಕಾಶವನ್ನು ಮಾಡಿಟ್ಟುಕೊಂಡಿದ್ದೇನೆ. ''

" ಅಹುದೇನು ? '' ಎಂದು ಡಿಯಾನೆಯು ಆಶ್ಚರ್ಯಯುತಳಾಗಿ ಉದ್ಗಾರ ತೆಗೆದು "ವ್ಹಾಲೆಂಟಾಯಿನ್, ಈ ಸುದ್ದಿಯನ್ನು ನನಗೆ ಹೇಳಿಯೇ ಇಲ್ಲ. ಇಂಥ ವಿಚಾರದಲ್ಲಿ ನೀನಿರುವಿಯೆಂದು ನಾನು ತರ್ಕಿಸಿಯೇ ಇದ್ದೆನು. ಆ ನಕಾಶವೆಲ್ಲಿ ? " ಎಂದು ಕೇಳಿದಳು.

" ಅದನ್ನೀಗಲೇ ತೋರಿಸುವಂತೆ ಇಲ್ಲ. ಯಾರಿಗಾದರೂ ಇಂಥದೊಂದು ಸ್ಥಳದಲ್ಲಿ ಬಂಗಾರವಿದೆಯೆಂದು ತಿಳಿದರೆ, ಶೋಧ ಮಾಡಿದವನಾದ ನಾನು ಕಡೆಗುಳಿದು ವಂಚಕರೇ ಆ ಸಂಪತ್ತಿನ ಅಪಹಾರ ಮಾಡುವರು.''

" ಹೀಗೇನು? ನೀನು ಈಗ ಇಂಗ್ಲಂಡಕ್ಕೆ ಹೊರಟಿರುವದೇಕೆ ? " ಎಂದು ಡಿಯಾನೆಯು ವಿಲಾಸದಿಂದ ವ್ಹಾಲೆಂಟಾಯಿನನ ಭುಜಕ್ಕೆ ತನ್ನ ಮುಖವನ್ನಾನಿಸಿಕೊಂಡು ಕುಳಿತು ಕೇಳಿದಳು.

" ಬಂಗಾರದ ಖನಿಗಳಲ್ಲಿ ಕೆಲಸ ಮಾಡಬೇಕಾದರೆ ಯಂತ್ರಸಾಹಿತ್ಯ ರಸಾಯನಶಾಲೆ ಕೂಲಿಕುಂಬಳಿಗಳ ವ್ಯವಸ್ಥೆ ಮುಂತಾದವುಗಳಿಗಾಗಿ ಹೇರಳವಾದ ಹಣ ಬೇಕು. ಲಂಡನದ ಫ್ಲೋರ್ಬ್ಸ ಬ್ಯಾಂಕಿನಲ್ಲಿ ಮಿತಿಮೀರಿದ ಧನರಾಶಿ ಒಟ್ಟಿದೆ. ಆ ಬ್ಯಾಂಕಿನವರಿಗೆ ನನ್ನ ವಿಚಾರವನ್ನು ತಿಳಿಸಿ ಅವರಿಂದ ಧನಸಹಾಯವನ್ನು ಪಡೆದೆನೆಂದರೆ, ನಾನು ಹೇಳಿದ ಅರಣ್ಯದಲ್ಲಿ ಉದ್ಯಮಶಾಲೆಗಳಿಂದಲೂ ಕೂಲಿಕಾರ ವ್ಯಾಪಾರಸ್ಥರ ಮನೆಗಳಿಂದಲೂ ತುಂಬಿದ ದೊಡ್ಡದೊಂದು ನಗರವೇ ಆಗುವದು. ಬಳಿಕ ನಾನೇ ಅಲ್ಲಿಯ ರಾಜನು. ಧನವಂತರ ಅರಸನಾದ ವ್ಹಾಲೆಂಟಾಯಿನ್ ಡಿಗ್ಬಿಯ ಪ್ರಿಯಪತ್ನಿಯಾದ ನೀನು ಉಡುಗಣದ ಮಧ್ಯದಲ್ಲಿ ಮೆರೆಯುವ ಚಂದ್ರಮಂಡಲದಂತೆ ವಿರಾಜಿಸುವಿ. "

" ಕೃತಾರ್ಥಳಾದೆನು ಪ್ರಿಯ ವ್ಹಾಲೆಂಟಾಯಿನ್ ! ಈ ವಚನವನ್ನು

ದೇವರಾಣೆಯಾಗಿ ಕಾಪಾಡುತ್ತಲಿರು. ನೀನು ಇಂಗ್ಲಂಡಕ್ಕೆ ಹೋಗುವದೇ ಆದರೆ ಒಬ್ಬನೇ ಹೋಗಬೇಡ. ಸಂಗಡ ಪರಲೋಕವಾಸಿಯಾದ ನನ್ನ ಗಂಡನ ಆಪ್ತನಾದ ಜಾರ್ಜ ಕ್ಯಾಂಬೆಲ್ಲನನ್ನು ಕಳಿಸುವೆನು. ಅವನು ರಸಾಯನ ಶಾಸ್ತ್ರನಿಪುಣನು. ಲಂಡನದಲ್ಲಿ ಒಂದು ರಸಾಯನ ಶಾಲೆಯನ್ನು ಹಾಕಿಕೊಂಡಿರುವನಂತೆ. ಹೋಗಲಿ, ನನಗೂ ಅವನ ಕಿಟಿಕಿಟಿ ತಪ್ಪಿದಂತಾಗುವದು. ಮಾರ್ಗದಲ್ಲಿ ನಿನಗೂ ಜೋಡಾಗುವನು."

ಮುಂದೆ ಕೆಲಹೊತ್ತು ಆ ಮಾತು ಈ ಮಾತುಗಳಾದ ಬಳಿಕ ಡಿಯಾನೆಯು ಡಿಗ್ಬಿಯ ಅಪ್ಪಣೆಯನ್ನು ತೆಗೆದುಕೊಂಡು ತನ್ನ ಮನೆಗೆ ಹೊರಟು ಹೋದಳು.

ವ್ಯಾಲೆಂಟಾಯಿನ್ ಡಿಗ್ಬಿಯು ಲಂಡನಕ್ಕೆ ಬಂದು ಫ್ಲೋಬ್ಸ್ರ್ ಬ್ಯಾಂಕಿನ ಮುಖ್ಯ ವ್ಯವಸ್ಥಾಪಕನಾದ ಸರ್ ಆರಥರ ರಸೆಲ್ಲನ ಮುಂದೆ ತನ್ನ ವಿಚಾರಗಳನ್ನೆಲ್ಲ ಪ್ರಕಟಗೊಳಿಸಿ ತಾನು ತಂದಿದ್ದ ಖನಿಗಳ ನಕಾಶೆಯನ್ನೂ, ಬಂಗಾರದಿಂದ ಕೂಡಿದ ಅದುರಿನ ಮಣ್ಣನ್ನೂ ತೋರಿಸಿದನು. ಲಂಡನದ ವಿಖ್ಯಾತರಾದ ಭೂಗರ್ಭಶಾಸ್ತ್ರಜ್ಞರ ಅಭಿಪ್ರಾಯವನ್ನು ತೆಗೆದುಕೊಂಡು ರಸೆಲ್ಲನು ಡಿಗ್ಬಿಯ ವಿಚಾರಗಳಿಗೆ ಒಪ್ಪಿಕೊಂಡು ಧನಸಹಾಯವನ್ನು ಮಾಡಲು ಸಿದ್ಧನಾದನು. ಡಿಗ್ಬಿಯು ಚತುರನೂ ವಿನಯಶೀಲನೂ ಉದ್ಯಮದಕ್ಷನೂ ಆದ ತರುಣನಾಗಿದ್ದರಿಂದ ಸರ್ ಆರಥರ ರಸೆಲ್ಲನ ಪ್ರೇಮವು ಅವನ ಮೇಲೆ ಅಧಿಕವಾಯಿತು. ಹೊಸ ಕಂಪನಿಯು ರಚನೆಯಾಗಲಿಕ್ಕೂ, ಹೊಸ ಯಂತ್ರಗಳ ನಿರ್ಮಾಣವನ್ನು ಮಾಡಲಿಕ್ಕೂ ಕೆಲವು ಅವಧಿಯು ಬೇಕಾಗಿರುವದರಿಂದ ಡಿಗ್ಬಿಯು ತಿಂಗಳೆರಡುತಿಂಗಳ ವರೆಗೆ ಲಂಡನದಲ್ಲಿಯೇ ಇರುವವನಾದನು. ಲಾಭಕರವಾದ ಕಂಪನಿಯ ಉತ್ಪಾದಕನೇ ಅವನಾಗಿರುವದರಿಂದ ಲಂಡನದಲ್ಲಿ ಅವನ ಹೆಸರಾಯಿತು. ಶ್ರೀಮಂತರೂ, ಉದ್ಯಮಸಾಹಸಿಗಳೂ, ಮದುವೆಗಾದ ಹೆಣ್ಣುಮಕ್ಕಳುಳ್ಳ ತಾಯಂದಿರೂ ಡಿಗ್ಬಿಯ ಮನೆಗೆ ಎಡತಾಕಲಾರಂಭಿಸಿದರು. ಸ್ನೇಹಿತರಾದರೂ ಅವನಿಗೆ ಅನೇಕರಾಗಿದ್ದರು.

ಒಂದು ದಿನ ಡಿಗ್ಬಿಯು ತಿರುಗಾಡಲಿಕ್ಕೆ ಹೋಗಿ ಮನೆಗೆ ಬಂದಕೂಡಲೆ ಅಂಚೆಯವನು ಕೆಲವು ಪತ್ರಗಳನ್ನು ತಂದು ಅವನ ಕೈಯಲ್ಲಿ ಕೊಟ್ಟನು.

ಉಳಿದ ಪತ್ರಗಳನ್ನೆಲ್ಲ ಓದಿ ಓದಿ ಚೆಲ್ಲಿ ಅವನು ಒಂದು ಪತ್ರವನ್ನು ಮಾತ್ರ ಬಲು ಮನಸ್ಸುಗೊಟ್ಟು ಓದುತ್ತ ತಲೆ ಕೆಳಗೆ ಮಾಡಿಕೊಂಡು ಚಿಂತಾಗ್ರಸ್ತನಾಗಿ ಕುಳಿತನು. ಆಗ ಸರ್ ಆರಥರ ರಸೆಲ್ಲನು ಅವನ ಸ್ಥಿತಿಯನ್ನು ಕಂಡು "ಯಾಕೆ ಡಿಗ್ಬಿ, ಆ ಪತ್ರದಲ್ಲಿಯ ಸಮಾಚಾರವು ನಿನ್ನನ್ನು ಚಿಂತೆಗೀಡಾಗಿ ಮಾಡಿದಂತೆ ತೋರುತ್ತದೆ?" ಎಂದು ಕೇಳಿದನು. ಡಿಗ್ಬಿಯು ವಿಷಾದದಿಂದ ನಕ್ಕು ರಸೆಲ್ಲನಿಗೆ ಏನೂ ಉತ್ತರವನ್ನು ಕೊಡದೆ ತನ್ನ ಕೈಯಲ್ಲಿರುವ ಪತ್ರವನ್ನು ಅವನ ಸ್ವಾಧೀನ ಮಾಡಿದನು.

ಲಂಡನ್

ವ್ಹಾ. ಡಿಗ್ಬಿ ಸಾಹೇಬರಿಗೆ,

ಡಿಯಾನಾ ಕ್ಯಾಂಬೆಲ್ಲ ಇವಳು ತಮ್ಮ ಪರಿಚಯದವಳಾಗಿರುವದು ಬ್ರಾಝಿಲದಲ್ಲಿ ಸರ್ವಶ್ರುತವಾದ ಮಾತು. ಪರಿಚಯವು ಹಾಗಿರಲಿ, ತಮ್ಮ ಪ್ರೇಮವನ್ನು ಸೆಳಕೊಂಡು ಅವಳು ತಮ್ಮೊಡನೆ ಪುನರ್ವಿವಾಹ ಮಾಡಿಕೊಳ್ಳಲಿಕ್ಕೆ ಒಪ್ಪಿಕೊಂಡಿರುವಳೆಂದು ಸುದ್ದಿಯಿದೆ. ಡಿಯಾನೆಯು ನಿಜವಾಗಿ ನಿಮ್ಮನ್ನು ಮದುವೆ ಮಾಡಿಕೊಳ್ಳುತ್ತಿದ್ದರೆ ಈ ಪತ್ರವನ್ನು ಬರೆಯುವ ಕಾರಣವೇ ಇದ್ದಿಲ್ಲ. ಹೆಂಡತಿಗಿಂತ ಗಂಡನೇ ಹಿರಿಯನಿರಬೇಕೆಂಬ ನಿಯಮವೆಲ್ಲಿ? ಡಿಯಾನೆಯು ನಿಮಗಿಂತ ನಾಲ್ಕೈದು ವರುಷ ಹಿರಿಯಳಾಗಿದ್ದರೂ ಜಗತ್ತಿನ ಅನುಭವವುಳ್ಳ ಹೆಂಡತಿಯ ಸಹವಾಸದಲ್ಲಿ ನೀವು ಸುಖಿಗಳಾಗಿರಬಹುದಾಗಿತ್ತು. ಆದರೆ ಡಿಯಾನೆಯು ನಿಮ್ಮನ್ನು ಮದುವೆಯಾಗಲಿಚ್ಛಿಸುವದೇ ಇಲ್ಲ. ಜಾರ್ಜ ಕ್ಯಾಂಬೆಲ್ಲನಲ್ಲಿ ಅವಳ ಸರ್ವಸ್ವವಾದ ಪ್ರೇಮವು ನೆಲಿಸಿರುವದು. ಡಿಯಾನೆಯ ಪತಿಯಾದ ಎಡ್ವರ್ಡ ಕ್ಯಾಂಬೆಲ್ಲನು ಆಕಸ್ಮಾತ್ತಾಗಿ ಮರಣ ಹೊಂದಿದನು. ಡಿಯಾನೆಯೇ ಅವನಿಗೆ ವಿಷಕೊಟ್ಟಳೆಂದು ಜನರ ಗ್ರಹಿಕೆಯಾಗಿದೆ. ಜಾರ್ಜ ಕ್ಯಾಂಬೆಲ್ಲನೇ ವಿಷವನ್ನು ಸಿದ್ಧಮಾಡಿ ಡಿಯಾನೆಯ ಕೈಯಲ್ಲಿ ಕೊಟ್ಟಿದ್ದನಂತೆ. ಏನೇ ಇರಲಿ; ನೀವು ಆ ಚಂಚಲೆಯ ಮೋಸಕ್ಕೀಡಾಗದಂತೆ ಜಾಗರೂಕರಾಗಿರುವದು ವಿಹಿತವೆಂದು ನಾನು ನಂಬುತ್ತೇನೆ. ನಿಮ್ಮಲ್ಲಿ ಬಂಗಾರದ ಖನಿಗಳ ನಕಾಶವಿರುವದೇನು? ಆ ಖನಿಗಳಿಗಾಗಿ ನೀವು ಪ್ರಾಣವನ್ನು ಕೊಡುವ ಸಮಯವು ಬಂದೊದಗಿದೆ. ಏನಾದರೊಂದು ಉಪಾಯದಿಂದ ನಿಮ್ಮಲ್ಲಿರುವ ನಕಾಶವನ್ನು ಹೊತ್ತು ಹಾಕುವೆನೆಂದು ಪ್ರತಿಜ್ಞೆ

ಮಾಡಿ ಡಿಯಾನೆಯು ಅಮೇರಿಕೆಯಿಂದ ಇಲ್ಲಿಗೆ ಬಂದು ಮೂರು ದಿವಸಗಳಾದವು. ನೀವು ನಿಮ್ಮ ಎಚ್ಚರಿಕೆಯಲ್ಲಿರಿ. ವಂಚನೆಗೆ ಈಡಾಗಿ ಕೇಡು ತಂದುಕೊಳ್ಳುವಿರಿ. ಎಚ್ಚರಿಕೆ. ನಾನಾದರೂ ಮೊನ್ನೆಯೇ ಅಮೇರಿಕೆಯಿಂದ ಬಂದವಳು.

—ಎ. ಬಿ. ಸಿ.

ಸರ್ ಆರಥರನು ಪತ್ರವನ್ನೋದಿ ನಕ್ಕು "ಡಿಯಾನೆಯ ಪ್ರೇಮಪಾಶದಲ್ಲಿ ನೀವು ಸಿಕ್ಕಿರುವಿರೇನು? ಈ ಪತ್ರದಲ್ಲಿ ಬರೆದಂತೆ ಅವಳ ಕೃತಿಗಳು ಸಂಶಯಾಸ್ಪದವಾಗಿವೆ ಏನು ? " ಎಂದು ಕೇಳಿದನು.

"ಅಸಂಭವವಾದ ಮಾತು. ಡಿಯಾನಾ ಕ್ಯಾಂಬೆಲ್ಲಳು ಸುಸ್ವಭಾವದವಳಾದ ಸುಂದರಿಯು. ಮತ್ಸರಗ್ರಸ್ತಳಾದ ನಾರಿಯೋ, ನೀಚನಾದ ಪುರುಷನೋ ಈ ಪತ್ರವನ್ನು ಬರೆದಿರುವಂತೆ ತೋರುತ್ತದೆ" ಎಂದು ಡಿಗ್ಬಿಯು ನಿಶ್ಚಿಂತನಂತೆ ನುಡಿದರೂ ಅವನ ಮನಸ್ಸಿನಲ್ಲಿಯ ಭೀತಿಯು ಬಿಟ್ಟಿದ್ದಿಲ್ಲ.

"ಈ ಪತ್ರವನ್ನು ನಾನು ಅಪರಾಧಿಗಳ ಶೋಧಕರಾದ ಅಧಿಕಾರಿಗಳ ಕಡೆಗೆ ಕೊಟ್ಟು ಅಭಿಪ್ರಾಯವನ್ನು ತೆಗೆದುಕೊಳ್ಳಬಹುದಷ್ಟೆ ? " ಎಂದು ಸರ್ ಆರಥರನು ಕೇಳಿದನು.

"ಅವಶ್ಯವಿಲ್ಲ. ತನ್ನ ಆಸ್ತಿಯನ್ನೆಲ್ಲ ನನಗೆ ಕೊಟ್ಟು ನನ್ನನ್ನು ಮದುವೆ ಮಾಡಿಕೊಳ್ಳಲಿಚ್ಛಿಸುವ ಆ ಸುಚರಿತೆಯ ವಿಷಯವಾಗಿ ಸಂಶಯವನ್ನು ತೆಗೆದುಕೊಳ್ಳುವದೆಂದರೆ ಪಾಪವೇ ಸರಿ."

ಆ ಆಲೋಚನವು ಅಲ್ಲಿಯೇ ಉಳಿಯಿತು. ಡಿಯಾನಾ ಸುಂದರಿಯು ತಾನು ಬಂದಿರುವ ವರ್ತಮಾನವನ್ನು ತನ್ನ ಪ್ರಿಯನಾದ ವ್ಯಾಲೆಂಟಾಯಿನ್ ಡಿಗ್ಬಿಗೆ ತಿಳಿಸಿ ಇಂಥ ಓಣಿಯಲ್ಲಿರುವ ಇಂಥ ಮನೆಗೆ ಬಂದು ತನಗೆ ದರ್ಶನ ಕೊಡಬೇಕೆಂದು ತಿಳಿಸಿದ್ದರ ಮೇರೆಗೆ ಅವನು ಅವಳಿದ್ದಲ್ಲಿಗೆ ಧಾವಿಸಿ ನಡೆದನು. ಅವರ ಸಮಾಗಮವೆಂದರೆ ಹರ್ಷಾತಿರೇಕದ ಪ್ರದರ್ಶನವೇ ಆಗಿತ್ತು. ಡಿಯಾನೆಯು ವ್ಯಾಲೆಂಟಾಯಿನನ ವೈಗಡರಿ ಆನಂದಾಶ್ರುಗಳನ್ನು ಸುರಿಸಿದಳು; ಅವನಾದರೂ ಅವಳನ್ನು ಅಪ್ಪಿ ಚುಂಬಿಸಿ ಸಂತೋಷಗೊಳಿಸಿದನು.

"ಡಿಯಾನಾ, ಯಾವ ನೀಚರು ಈ ಪತ್ರವನ್ನು ಬರೆದಿರಬಹುದೆಂಬ

ದನ್ನು ನೀನು ಊಹಿಸಬಲ್ಲಿಯಾ ?'' ಎಂದು ನುಡಿದು ಡಿಗ್ಬಿಯು ಎ ಬಿ. ಸಿ. ಎಂಬ ಸಹಿಯುಳ್ಳ ಮೇಲ್ಕಂಡ ಪತ್ರವನ್ನು ಅವಳಿಗೆ ತೋರಿಸಿದನು.

ಡಿಯಾನೆಯು ಆ ಪತ್ರವನ್ನು ಒಮ್ಮೆ, ಎರಡಾವರ್ತಿ, ಮೂರಾವರ್ತಿ ತಿರುತಿರುವಿ ಓದಿ ಹುಬ್ಬುಗಂಟಿಕ್ಕಿ ವಿಚಾರಗ್ರಸ್ತಳು ಕಡೆಗೆ ಮೃದುಹಾಸವನ್ನು ತಳೆದು ಡಿಗ್ಬಿಯ ಮುಖವನ್ನು ನೋಡಿ, “ವ್ಯಾಲೆಂಟೈಯಿನ, ನಾನೊಂದು ಅಪರಾಧವನ್ನು ಮಾಡಿದ್ದಾದರೆ ನೀನು ಕ್ಷಮಿಸುವೆಯಷ್ಟೆ ?” ಎಂದು ಕೇಳಿದಳು.

“ಪ್ರೇಮಸುಂದರಿಯೇ, ನೀನೇನು ಅಪರಾಧವನ್ನು ಮಾಡಿದ್ದರೂ ನಾನು ವಿಚಾರಗೈಯದೆ ಕ್ಷಮಿಸಿದ್ದೇನೆ.” ಎಂದು ಡಿಗ್ಬಿಯು ಡಿಯಾನೆಯ ಹೆಗಲ ಮೇಲೆ ಕೈಹಾಕಿ ಅವಳ ಗದ್ದವನ್ನು ಬಹು ಪ್ರೇಮದಿಂದ ಹಿಡಿದು ಕುಲುಕುಲನೆ ನಗುತ್ತ ಆಶ್ವಾಸನವನ್ನಿತ್ತನು.

“ಪ್ರಿಯನೆ, ನಿನ್ನ ಮನಸ್ಸು ನೋಡಬೇಕೆಂದು ನಾನೇ ಓರ್ವ ದಾಸಿಯ ಕೈಯಿಂದ ಈ ಪತ್ರವನ್ನು ಬರೆಯಿಸಿದೆನು. ಇನ್ನು ಕ್ಷಮಿಸಲಿಕ್ಕೆ ಅಡ್ಡಿಯಿಲ್ಲವಷ್ಟೇ ?” ಎಂದು ಆ ಸಮಯಚತುರೆಯಾದ ವಿಲಾಸಿನಿಯು ನುಡಿದು ಡಿಗ್ಬಿಯ ಪ್ರತ್ಯುತ್ತರವನ್ನು ಕೇಳಲುತ್ಸುಕಳಾಗಿ ಅವನ ಮುಖವನ್ನು ದಿಟ್ಟಿಸಿ ನೋಡಲಾರಂಭಿಸಿದಳು.

ಆಲಿಂಗನ ಚುಂಬನಗಳೇ ಅವನ ಪ್ರತ್ಯುತ್ತರಗಳು. “ಪ್ರಿಯೆ, ಅನ್ಯರ ಎದೆಯನ್ನೊಡೆಸುವಂಥ ರೀತಿಯಿಂದ ನೀನು ನನ್ನ ಮನಸ್ಸು ನೋಡ ಬಂದೆಯಾ ? ಆದರೂ ನಾನು ನಿನ್ನನ್ನು ಕ್ಷಮಿಸಿದ್ದೇನೆ” ಎಂದು ನುಡಿದ ಅವನ ಅಭಿವಚನವು ಪುನರುಕ್ತಿಯೇ ಆಗಿತ್ತು.

ಜಾರ್ಜ ಕ್ಯಾಂಬೆಲ್ಲನು ಹಿಡಿದಿರುವ ವಿಸ್ತಾರವಾದ ಮನೆಯಲ್ಲಿ ಡಿಯಾನೆಯು ಬಂದು ಉಳುಕೊಂಡಿದ್ದಳು. ಕ್ಯಾಂಬೆಲ್ಲನ ರಸಾಯನ ವ್ಯಾಪಾರಗಳು ಬಹಳ ವಿಜೃಂಭಣೆಯಿಂದ ನಡೆದಿದ್ದವು. ಒತ್ತಟ್ಟಿಗೆ ಸಲ್‌ಫ್ಯೂರಿಕ್ ಆಸಿಡಿನ ಭರಣಿಗಳು, ಮತ್ತೊತ್ತಟ್ಟಿಗೆ ನಾಯಟ್ರಿಕ್ ಆಸಿಡ್, ಒಂದೆಡೆಯಲ್ಲಿ ಫ್ರೂಟ ಸ್ಟಾರ್ಚಿನ ರಾಶಿ, ಮತ್ತೊಂದೆಡೆಯಲ್ಲಿ ಸಾನಾಟೋಜನ್ನದ ನಿರ್ಮಾಣ, ಕಾಡ್ ಲಿವ್ಹರದ ರಂಜಣಿಗೆಗಳು ಒಂದು ಪಡಸಾಲೆಯಲ್ಲಿ, ಹೀಗೆ ಎಲ್ಲಿ ನೋಡಿದಲ್ಲಿ ಅನೇಕ ಪ್ರಕಾರದ ವಸ್ತುಗಳ ಸಂಗ್ರಹವು ತುಂಬಿಕೊಂಡಿತ್ತು.

ಡಿಗ್ಬಿಯು ಜಾರ್ಜ ಕ್ಯಾಂಬೆಲ್ಲನ ಸಾಹಸಕ್ಕೆ ಮೆಚ್ಚಿ ಅವನ ಉದ್ಯಮಶೀಲತೆಯನ್ನು ಕೊಂಡಾಡಿದನು.

" ಇಷ್ಟಕ್ಕೆ ತೀರಲಿಲ್ಲ. ಹವೆಯನ್ನು ಹಿಡಿದು ಭಟ್ಟಿಗೆ ಹಾಕಿ ಅದನ್ನು ನೀರಿನಂತೆ ಮಾಡಿ ಆ ರಸವನ್ನು ದೊಡ್ಡ ದೊಡ್ಡ ಭಾಂಡಗಳಲ್ಲಿ ತುಂಬಿಟ್ಟಿದ್ದೇನೆ. ಈ ವ್ಯಾಪಾರವು ಕೆಳಗೆ ನೆಲಮನೆಯಲ್ಲಿ ನಡೆದಿರುತ್ತದೆ. ಅಲ್ಲಿಯೇ ವಿದ್ಯುತ್ ಶಕ್ತಿಯಿಂದ ಚಮಚಮತ್ಕಾರವಾದ ರಸಾಯನದ್ರವ್ಯಗಳ ನಿರ್ಮಾಣವನ್ನು ಮಾಡುವ ಕೆಲಸ ನಡೆದಿರುತ್ತದೆ. " ಎಂದು ಕ್ಯಾಂಬೆಲ್ಲನು ಅಭಿಮಾನದಿಂದ ನುಡಿದನು.

" ಸಂತೋಷ ! ಡಿಯಾನಾ, ನೀನು ನನಗೆ ಚಹ ಕೊಡುವಾಕೆಯಾಗಿದ್ದಿಯಲ್ಲವೆ ? ನಡೆ " ಎಂದು ಡಿಗ್ಬಿಯು ಕೇಳಿದನು.

"ಚಹ ಸಿದ್ಧವೇ ಆಗಿದೆ. ಅಮೆಲಿಯಾ ಬಾಯಿಯು ಚಹ ಸೋಸಿಟ್ಟು ಯಾವಾಗಿನಿಂದ ನಿನ್ನ ಮಾರ್ಗಪ್ರತೀಕ್ಷೆಮಾಡುತ್ತ ಕುಳಿತಿರುವಳು. "

" ಅಮೆಲಿಯಾ ಸುಂದರಿಯೂ ಬಂದಿರುವಳೇನು ? ನಡೆ, ನಾನವಳ ದರ್ಶನೋತ್ಸುಕನಾಗಿರುವೆನು. "

" ಅಹಹಾ, ಇಷ್ಟೇಕೆ ಆತುರತೆ ? ತಾಯಿಮಕ್ಕಳನ್ನು ಕೂಡಿಯೇ ನೀನು ಮದುವೆಯಾಗಬೇಕಾಗಿಲ್ಲವಷ್ಟೆ ? " ಎಂದು ಡಿಯಾನೆಯು ಪರಿಹಾಸಗೈದು ನುಡಿದಳು.

" ಏನು ಮಾತಾಡುವಿ, ಡಿಯಾನಾ ? "

" ಅಮೆಲಿಯೆಯ ಪ್ರೇಮವನ್ನು ಅಪಹರಿಸಬೇಕೆಂದು ನೀನೊಂದು ಕಾಲ ಹವಣಿಸುತ್ತಿರುವದನ್ನು ನಾನರಿಯೆನೆ ? " ಎಂದು ಡಿಯಾನೆಯು ಚಮತ್ಕಾರವಾದ ನಗೆ ನಗುತ್ತ ನುಡಿದಳು.

" ಆದರೇನಾಯಿತು ? ಅಮೆಲಿಯೆಯ ಪ್ರಾಪ್ತಿಗಾಗಿ ನಿಮ್ಮ ಮನೆಗೆ ನಾನು ಬರುತ್ತಿದ್ದೆನೆಂದು ನಿನ್ನ ಪ್ರೇಮದ ಪ್ರಾಪ್ತಿಯು ನನಗಾಯಿತಷ್ಟೆ ? ಬಂಗಾರವನ್ನು ಹುಡುಕಲಿಕ್ಕೆ ಹೋದ ಖನಿಯಲ್ಲಿ ರತ್ನವು ಪ್ರಾಪ್ತವಾದಂತಾಯಿತು. ಹಾನಿಯೇನು ? " ಎಂದು ಡಿಗ್ಬಿಯು ಡಿಯಾನೆಯನ್ನು ಬಗಲಲ್ಲಿ ಬಿಗಿಯಾಗಿ ಹಿಡಿದು ನುಡಿದನು.

ಅಮೆಲಿಯೆಯು ತನ್ನ ಮಲತಾಯಿಗೂ ಡಿಗ್ಬಿಗೂ ಚಹ ಉಪಚಾರ

ಗಳನ್ನು ನೀಡಿ ಅವರೀರ್ವರ ಸವಿಗಾರಿಕೆಯನ್ನು ಕಂಡು ದುಃಖಿತಳಾಗಿ ನಿಂತುಕೊಂಡಿದ್ದಳು. ಡಿಯಾನೆಯು ಆ ಪರಿಯಾಗಿ ನಿಂತ ತನ್ನ ಮಲಮಗಳನ್ನು ನೋಡಿ ಹಲ್ಲುಕಡಿಯುತ್ತಿದ್ದರೂ ವ್ಯಾಲೆಂಟಾಯಿನನು ಆ ನವತರುಣಿಯನ್ನು ಪ್ರೇಮದಿಂದ ಮಾತಾಡಿಸಿ ತಾಯಿಮಕ್ಕಳೀರ್ವರ ಅಪ್ಪಣೆಯನ್ನು ಪಡಕೊಂಡು ತನ್ನ ನಿವಾಸಕ್ಕೆ ಹೊರಟು ಹೋದನು.

*        *        *        *

ಡಿಗ್ಬಿಗೆ ಇಂದಿನ ದಿವಸ ಮಿತಿಮೀರಿದ ಹರುಷವು. ಒಂದುಕ್ಷಣವಾದರೂ ಕುಳಿರುವೆನೆಂದರೆ ಅವನಿಗೆ ಅವಕಾಶವಿಲ್ಲ. ಸಿಂಪಿಗನು ಹೊಸ ಕೋಟು ಪ್ಯಾಂಟುಗಳನ್ನು ತಂದು ಅವನಿಗೆ ತೊಡಿಸಿ ನೋಡುತ್ತಿದ್ದನು. ಸೌದಾಗಾರನು ಪ್ರಕಾಶವನ್ನುಗುಳುವ ಹರಳುಂಗುರಗಳನ್ನು ತಂದು ತೋರಿಸುತ್ತಿದ್ದನು. ಹೀಗೆ ಅನೇಕರಾದ ವರ್ತಕರು ಅನೇಕವಾದ ವಸ್ತುಗಳನ್ನು ತಂದು ತಂದು ಕೊಡಲಾರಂಭಿಸಿದ್ದರು. ಇಂದು ಅವನು ಯಾರೊಡನೆಯೂ ಉಲ್ಲಾಸದಿಂದ ನಡಕೊಳ್ಳುತ್ತಿದ್ದನು. ಇಂದು ಯಾರು ಏನು ಹೇಳಿದ್ದರೂ ಅವನು ಒಪ್ಪಿಕೊಳ್ಳುತ್ತಿದ್ದನು.

"ವ್ಯಾಲೆಂಟಾಯಿನ್ ಡಿಗ್ಬಿ, ಇಂದೇಕೆ ನೀನಿಷ್ಟು ಉಲ್ಲಾಸದಲ್ಲಿರುವಿ?" ಎಂದು ಸರ ಆರಥರ ರಸೆಲ್ಲನು ನಗೆಮುಖವನ್ನು ತಾಳಿ ಕೇಳಿದನು.

" ಸೌಭಾಗ್ಯವೇ ನನ್ನ ವಶವರ್ತಿಯಾಗಿ ನಡಕೊಳ್ಳಲಾರಂಭಿಸಿರುವದಲ್ಲವೆ? ಸರ ಆರಥರ, ನೀವೇ ನನ್ನ ಸೌಭಾಗ್ಯಕ್ಕೆ ಮುಖ್ಯ ಕಾರಣರಾಗಿರಲು ನನ್ನ ಮನೋಲ್ಲಾಸದ ಮೂಲವನ್ನು ನಿಮಗೆ ತಿಳಿಸದಿರುವೆನೆ ? "

" ಯಾವಾಗ ಹೇಳುವಿ ? ಇದಕ್ಕೆ ಇಷ್ಟೇಕೆ ಪೂರ್ವಪೀಠಿಕೆಯನ್ನು ಬೆಳೆಸುವಿ ? "

" ಇಂದು ಜಾರ್ಜ-ಕ್ಯಾಂಬೆಲ್ಲನ ಪತ್ರ ಬಂದಿದೆ. ಇಂದೆಯೇ ನಮ್ಮ ಮದುವೆಯ ಬಗ್ಗೆ ಮಾತುಕಥೆಗಳನ್ನಾಡತಕ್ಕದ್ದೆಂದು ನನ್ನ ಪ್ರಿಯತಮೆಯಾದ ಡಿಯಾನೆಯು ಇಚ್ಛಿಸುವಳಂತೆ. ಅದಕ್ಕಾಗಿ ನಾನು ಆತುರನಾಗಿದ್ದೇನೆ. "

" ಸಂತೋಷ ! ದೇವರು ನಿಮ್ಮ ಅಭೀಷ್ಟಗಳನ್ನೆಲ್ಲ ಕೈಗೂಡಿಸಿಕೊಡಲಿ. " ಎಂದು ನುಡಿದು ಸರ ಆರ್ಥರನು ಡಿಗ್ಬಿಯ ಹಸ್ತವನ್ನು ಗಟ್ಟಿಯಾಗಿ ಹಿಡಿದು ಅಲ್ಲಾಡಿಸಿದನು.

ಮಧ್ಯಾಹ್ನದ ಊಟವಾಯಿತು. ಡಿಗ್ಬಿಯು ವರ್ತಮಾನಪತ್ರಗಳ ನ್ನೋದುತ್ತ ಕುಳಿತಿರುವಾಗ ಸೇವಕನೊಬ್ಬನು ಒಂದು ಪತ್ರವನ್ನು ತಂದು ಕೊಟ್ಟನು.

ಚಾರಿಂಗಕ್ರಾಸ್
ನಂಬರ ೧೫೭.

ಪ್ರಿಯ ಡಿಗ್ಬಿ,

ಅನಿವಾರ್ಯಕ್ಕಾಗಿ ಈ ಪತ್ರವನ್ನು ಬರೆದಿರುವೆನು. ನಾನು ಬರೆದದ್ದು ನಿಮಗೆ ವಿಪರೀತವಾಗಿ ತೋರುವದು. ಆದರೂ ನೀವು ವಿಚಾರವಂತರಾಗಿ ನಡಕೊಳ್ಳುವಿರೆಂದು ಆಶಿಸುತ್ತೇನೆ. ಇಂದು ಸಾಯಂಕಾಲಕ್ಕೆ ಈ ಮನೆಗೆ ಬರಲು ನಿಮಗೆ ಆಮಂತ್ರಣವಿರುವದಷ್ಟೇ? ನೀವು ಬರಬೇಡಿರಿ. ಬಂದರೆ ನೀವು ಗಂಡಾಂತರದಲ್ಲಿ ಬೀಳುವದು ನಿಶ್ಚಯ. ಜಾರ್ಜ ಕ್ಯಾಂಬೆಲ್ಲನೂ ನನ್ನ ಮಲತಾಯಿಯಾದ ಡಿಯಾನಾ ಕ್ಯಾಂಬೆಲ್ಲಳೂ ಕೂಡಿ ಸಂಚು ಮಾಡಿ ನಿಮ್ಮ ಪ್ರಾಣವನ್ನೂ ನಿಮ್ಮ ಬಳಿಯಲ್ಲಿರುವ ನಕಾಶವನ್ನೂ ಕೂಡಿಯೇ ಅಪಹರಿಸಬೇಕೆನ್ನುವರು. ನಿಮ್ಮಲ್ಲಿ ನಾನು ಒಂದಾವರ್ತಿ ಪಕ್ಷಪಾತವುಳ್ಳವಳಾಗಿದ್ದೆನೆಂದು ಒಪ್ಪಿಕೊಳ್ಳಲು ನಾನು ನಾಚಿಕೊಳ್ಳುತ್ತೇನೆ. ಮೀರಿಬಂದ ಪ್ರಸಂಗದಲ್ಲಿ ಹಾಗೆ ಮಾಡಬೇಕಾಗಿದೆ. ಆ ಪಕ್ಷಪಾತವನ್ನು ಲಕ್ಷಿಸಿ ನಾನೇ ಪತ್ರವನ್ನು ಬರೆದಿದ್ದೇನೆ. ಇಂದಿನ ರಾತ್ರಿ ನೀವು ನಿಮ್ಮ ಪ್ರಾಣವನ್ನು ಕಳಕೊಳ್ಳುವದೇ ನಿಶ್ಚಯ. ಆದಕ್ಕಾಗಿ ನಾನು ನಿಮಗೆ ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ. ಇಂದಿನ ಆಮಂತ್ರಣವನ್ನು ನಿರಾಕರಿಸಿ ನೀವು ಇಲ್ಲಿಗೆ ಬರುವ ವಿಚಾರವನ್ನು ಬಿಟ್ಟುಬಿಡಿರಿ. ಮೋಹಕ್ಕೊಳಗಾಗ ಬೇಡಿರಿ."

ತಮ್ಮ ವಿಧೇಯಳಾದ
**ಅಮೆಲಿಯಾ ಕ್ಯಾಂಬೆಲ್ಲ.**

ಡಿಗ್ಬಿಯು ಪತ್ರವನ್ನೋದಿ ದಿಂಗುಬಡಿದವನಾಗಿ ಕುಳಿತುಕೊಂಡನು. ಇದುವರೆಗೆ ಅವನ ಮನಸ್ಸಿನಲ್ಲಿ ಸುಳಿದಾಡುತ್ತಿರುವ ಸುಲಲಿತವಾದ ವಿಚಾರಗಳೆಲ್ಲ ಮಂಜಿನಲ್ಲಿ ಮುಸುಗಿದಂತಾಗಿ ಅಡಗಲಾರಂಭಿಸಿದವು.

"ಈ ಪತ್ರವನ್ನು ಕೂಡ ಡಿಯಾನೆಯೇ ಬರೆದಿರಲಿಕ್ಕಿಲ್ಲವಷ್ಟೆ? ಬರೆದಿದ್ದರೆ ಇಂಥ ಶುಭದಿವಸದಲ್ಲೇಕೆ ಬರೆದಳು? ಅಮೆಲಿಯೆಯೇ ಬರೆ

ದಿಂಬಿಡುವನು. ಇಂಬಹುದೇಕೆ, ಅವಳೇ ಬರೆದಿರುವಳೆಂಬದು ಸಹಿಯು
ಮೇಲಿಂದ ಸ್ಪಷ್ಟವಾಗಿ ಕಾಣುವದಿಲ್ಲವೆ ? ಆದರೂ ಡಿಯಾನೆಯು ಇಷ್ಟು
ಘಾತಕಳಿರುವಳೆಂದು ನಾನೆಂದಿಗೂ ನಂಬಲಾರೆನು.'' ಎಂದು ವಿಚಾರಿಸುತ್ತ
ಅವನು ಚಿಂತೆಗೀಡಾಗಿ ಮಲಗಿಕೊಂಡನು.

ಮೂರು ಸಂಜೆಯು ಹೊತ್ತು. ನೊಗವನ್ನುಚ್ಚಿ ಬಿಟ್ಟ ದನಗಳಂತೆ, ಉದ್ಯೋಗಸ್ಥರು, ಗುಮಾಸ್ತರು, ಅಧಿಕಾರಿಗಳು, ಸೇವಕರು ಮುಂತಾದವರು “ಇಂದಿನ ದಿವಸವನ್ನಂತೂ ಗೆದ್ದೆವೆ ?” ಎಂಬ ಸಂತೋಷಬಂದ ತಮ್ಮ ತಮ್ಮ ಮನೆಗಳಿಗೆ ಬಂದು ಉಪಹಾರಗಳನ್ನು ಸೇವಿಸಿ ಮೇಲಾದ ಬಟ್ಟೆಗಳನ್ನು ಧರಿಸಿ ತಂಗಾಳಿಯನ್ನು ಸೇವಿಸಲು ಒಯ್ಯಾರದಿಂದ ನಡೆದಿರುವರು. ಸರ ಅರಥರ ರಸೆಲ್ಲನು ಸಪತ್ನೀಕನಾಗಿ ದಿವ್ಯವಾದ ರಥದಲ್ಲಿ ಕುಳಿತುಕೊಂಡು ವಿಹಾರಕ್ಕಾಗಿ ಹೊರಟು ಹೋಗಿದ್ದನು. ಹೊರಗೆಲ್ಲ ಲೀಲಾವಿಲಾಸ ಆನಂದ ಒನಪು ಒಯ್ಯಾರಗಳು ನಡೆದಿರಲು ಡಿಗ್ಬಿಯೊಬ್ಬನೇ ಚಿಂತಾಕುಲನಾಗಿ ಮಂಚದ ಮೇಲೆ ಬಿದ್ದುಕೊಂಡಿದ್ದನು. ಅಷ್ಟರಲ್ಲಿ ಜಗಜಗಿಸುವ ಪೋಷಾಕವನ್ನು ಥಳಥಳಿಸುವ ಮುತ್ತುರತ್ನಗಳ ಆಭರಣಗಳನ್ನೂ ನೋಡುವವರ ಮನಸ್ಸಿನ ವಿಷಾದವನ್ನು ದೂಡಿ ಹಾಕುವಂಥ ಮಂದಹಾಸವನ್ನೂ ತಳೆದವಳಾದ ಡಿಯಾನಾ ಸುಂದರಿಯು ಮಂಜುಲವಾದ ಧ್ವನಿಯಿಂದ ವ್ಹಾಲೆಂಟಾಯಿನನನ್ನು ಕೂಗುತ್ತ ಅವನ ಮಂಚದ ಸಮೀಪಕ್ಕೆ ಬಂದಳು. ಅಲ್ಲಿ ಅವನು ಚಿಂತಾಗ್ರಸ್ತನಾಗಿ ಉರುಳಾಡುತ್ತಿರುವದನ್ನು ಕಂಡು ಆ ಮಾನಿನಿಯು ಚಕಿತಳಾಗಿ “ವ್ಹಾಲೆಂಟಾಯಿನ್ ! ಪ್ರಿಯ ವ್ಹಾಲೆಂಟಾಯಿನ್ !! ಏನು ಸಮಾಚಾರವಿದು ?” ಎಂದು ಕೇಳಿದಳು.

ಹುಲಿಯ ಕೈಗೆ ಸಿಕ್ಕವನು ಶಸ್ತ್ರಪಾಣಿಯಾದ ತಾರಕನನ್ನು ಕಂಡಾಕ್ಷಣವೇ “ಬದುಕಿಲೆ ಜೀವವೆ” ಎಂದು ಧೈರ್ಯವನ್ನು ತಳೆಯುವಂತೆ, ಡಿಯಾನೆಯನ್ನು ಕಂಡಾಕ್ಷಣಕ್ಕೆ ಡಿಗ್ಬಿಯ ಚಿಂತೆಯು ಅರ್ಧ ಹಿಮ್ಮೆಟ್ಟಿದಂತಾಗಿ ಅವನು ತತ್ಕ್ಷಣವೇ ಎದ್ದು ಕುಳಿತು “ಬಾ. ಡಿಯಾನಾ, ನೀನೊಳ್ಳೇ ಸಮಯಕ್ಕೆ ಬಂದಿ” ಎಂದು ಮಂಚದಲ್ಲಿ ತುಸು ಸರಿದು ಅವಳಿಗೆ ಸ್ಥಳ ಮಾಡಿದನು.

ವಿಮನಸ್ಕನಾದ ಬಾಲಕನನ್ನು ಮನೆಯ ಹಿರಿಯಳು ಅಕ್ಕಲತೆಯಿಂದ

ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡು ಅವನ ಮುಂದಲೆಯ ಮೇಲೆ ಕೈಯಾಡಿಸಿ ಸಮಾಧಾನಗೊಳಿಸುತ್ತಿರುವಂತೆ ಡಿಯಾನೆಯು ಡಿಗ್ಬಿಯ ಹೆಗಲಮೇಲೆ ಕೈ ಹಾಕಿ, ಮತ್ತೊಂದು ಕೈಯನ್ನು ಅವನ ಎದೆಯ ಮೇಲೆ ಪ್ರೇಮದಿಂದ ಆಡಿಸುತ್ತ "ಏನು ಸಮಾಚಾರವಿದು ನನ್ನ ಮನದಾಣ್ಮನೆ? ನೀನೊಳ್ಳೆ ಉಬ್ಬಿನಲ್ಲಿರುವಿಯೆಂದು ನಾನು ನೆನೆದು ನಿನ್ನೊಡನೆ ಯಥೇಷ್ಟವಾಗಿ ನಕ್ಕು ಕೆಲೆದು ಹೋಗಬೇಕೆಂದು ಬಂದಿದ್ದೆನು. ಏನಾಗಿದೆ ನಿನಗೆ? ನನ್ನ ಪಾಣಿಗ್ರಹಣವನ್ನು ಮಾಡಲು ನಿನ್ನ ಮನಸ್ಸು ಒಲ್ಲದೇನು?" ಎಂದು ಕೇಳಿದಳು.

"ಪ್ರಿಯೆ, ನಿನ್ನನ್ನು ಒಲ್ಲದವನಾದ ನಾನು ನನ್ನ ಪ್ರಾಣವನ್ನು ಕೂಡ ಒಲ್ಲೆನೆಂದು ಹೇಳಬೇಕಾದೀತು. ಇಂಥ ಭಯಂಕರವಾದ ಶಂಕೆಯನ್ನು ನೀನು ಏನು ನಿಮಿತ್ತವಾಗಿ ತಳೆದಿ?" ಎಂದು ವ್ಹಾಲೆಂಟಾಯಿನನು ಡಿಯಾನೆಯ ಕೊಂಕುಗುರುಳನ್ನು ತನ್ನ ಬಟ್ಟೆಗೆ ಸುತ್ತುತ್ತ ಪ್ರಶ್ನೆ ಮಾಡಿದನು.

"ತೆಗೆ, ನೀನು ಸುಳ್ಳಾಡುವಿ!" ಎಂದು ಡಿಯಾನೆಯು ಕ್ರುದ್ಧಳಾದಂತೆ ನಟಿಸಿ ಹಿಂದಕ್ಕೆ ಸರಿದು ಕುಳಿತಳು.

ನಿರ್ಜಿತನಾದ ವ್ಹಾಲೆಂಟಾಯಿನನು ಆ ಒಯ್ಯಾರಿಯನ್ನು ತನ್ನ ಬಾಹು ಪಾಶದಲ್ಲಿ ಹಿಡಿದು ಅನೇಕವಾದ ಆಣೆ ಪ್ರಮಾಣಗಳನ್ನು ಮಾಡಿ ಆ ವರನು ವಧುವಿಗೆ ವಿವಾಹದ ವಾಗ್ದಾನ ಮಾಡಿದನು. ಡಿಯಾನೆಯು ಸಂಗಡಲೇ ಎದ್ದು ಕಪಾಟಿನೊಳಗಿಂದ ಪರಿಮಳವನ್ನು ಸೂಸುವ ಮದಿರಾಸವದ ಕುಪ್ಪೆಯನ್ನು ತೆಗೆದು ಒಯ್ಯಾರದಿಂದ ತುಂಬಿ ಆಗ್ರಹದೊಂದಿಗೆ ವ್ಹಾಲೆಂಟಾಯಿನನಿಗೆ ಕುಡಿಸಿದಳು. ಒಂದು ಗ್ಲಾಸಕ್ಕೆ ಎರಡು ಕುಡಿದು ಉದ್ರಿಕ್ತನಾದ ಅವನನ್ನು ಡಿಯಾನೆಯು ರಥದಲ್ಲಿ ಕುಳ್ಳಿರಿಸಿಕೊಂಡು ಹಾಯಿಡಪಾರ್ಕವೆಂಬ ಭೂನಂದನದ ಕಡೆಗೆ ವಿಹಾರಾರ್ಥವಾಗಿ ನಡೆದಳು. ಅಲ್ಲಿ ವಿಹರಿಸುವಾಗ ಡಿಯಾನೆಯು ಡಿಗ್ಬಿಯ ಮನಸ್ಸಿನಲ್ಲಿಯ ಅನೇಕವಾದ ಶಂಕೆಗಳ ನಿವಾರಣವನ್ನು ಸಯುಕ್ತಿಕವಾಗಿ ಮಾಡಿದಳು.

ಮನೆಗೆ ಬಂದ ಕೂಡಲೆ ಡಿಗ್ಬಿಯು ಒಳ್ಳೇ ಸೊಬಗಿನ ಪೋಷಾಕು ಮಾಡಿಕೊಂಡು ಬಂಗಾರದ ಹಿಡಿಕೆಯ ಮಲಬಾರ ಬೆತ್ತವನ್ನು ಹಿಡುಕೊಂಡು ಡಿಯಾನೆಯ ಮನೆಗೆ ಹೋಗಲು ಸಿದ್ಧನಾದನು. ಸರ ಆರಥರ ರಸೆಲ್ಲನು

ಅವನನ್ನು ತಡೆದು “ ಓ ಸಾಹೇಬ, ಭೋಜನದ ಸಮಯದಲ್ಲಿ ನೀವೆಲ್ಲಿಗೆ ನಡೆದಿರಿ ? ಈ ಹೊಸ ಉಲ್ಲಾಸವು ನಿಮಗೆಲ್ಲಿಂದ ಪ್ರಾಪ್ತವಾಯಿತು ? ಮಧ್ಯಾಹ್ನದಲ್ಲಿ ನೋಡಿದರೆ ನೀವು ಚಿಂತೆಯಿಂದ ಬಿಂಡಿ ಹಿಪ್ಪೆಯಾಗಿ ತೋರುತ್ತಿದ್ದಿರಿ. ಏನಾಗಿತ್ತು ಆಗ ನಿಮಗೆ ? ” ಎಂದು ಕೇಳಿದನು.

ಈ ಮಾತಿನ ಬಗ್ಗೆ ವಿಶೇಷವಾದ ಚರ್ಚೆ ಮಾಡಲಿಕ್ಕೆ ನನಗೆ ಅವಸರವಿಲ್ಲ. ಆದರೂ ನನಗೆ ಚಿಂತೆಯನ್ನು ಹುಟ್ಟಿಸಿದ ಪತ್ರವನ್ನು ನಿಮಗೆ ತೋರಿಸುತ್ತೇನೆ ನೋಡಿರಿ. ಡಿಯಾನೆಯು ಇದರಲ್ಲಿ ಬರೆದ ಮಾತಿನ ನಿರಾಕರಣವನ್ನು ಸಮಾಧಾನಕರವಾಗಿ ಮಾಡಿರುವಳು ” ಎಂದು ಹೇಳಿ ಪತ್ರವನ್ನು ಜೇಬಿನೊಳಗಿಂದ ತೆಗೆದು ರಸೆಲ್ಲನಿಗೆ ತೋರಿಸಿದನು.

ಸರ ಆರಥರ ರಸೆಲ್ಲನು ಆ ಪತ್ರವನ್ನೋದಿ ಡಿಗ್ಬಿಯ ಕೈ ಹಿಡಿದು ಬಳಿಯಲ್ಲಿ ಕುಳ್ಳಿರಿಸಿಕೊಂಡು “ ವ್ಹಾಲೆಂಟಾಯಿನ್, ಈ ಪತ್ರದಲ್ಲಿ ಸೂಚಿಸಿದಂತೆ ನೀನು ಇಂದಿನ ರಾತ್ರಿ ಅಲ್ಲಿಗೆ ಹೋಗುವದನ್ನು ಬಿಟ್ಟರೆ ಕೆಡುವದೇನು ? ಡಿಯಾನೆಯಂತೂ ನಿನ್ನಲ್ಲಿ ಅತಿಶಯವಾದ ಆಸಕ್ತಿಯನ್ನು ತಳೆದವಳೆಂದು ಹೇಳುವಿ. ಇಂದಿಗಾಗುವ ಕೆಲಸವು ನಾಳಿಗಾದೀತು ” ಎಂದು ಸೂಚಿಸಿದನು.

“ ಸರ ಆರಥರರೆ, ನೀವಾದರೂ ಒಂದಾವರ್ತಿ ವಧುವಿನ ಪ್ರೇಮದಲ್ಲಿ ಸಿಲುಕಿದವರು. ಡಿಯಾನೆಯ ಆಶಾಭಂಗವನ್ನು ನಾನು ಹೇಗೆ ಮಾಡಲಿ ? ಮೇಲಾಗಿ ಆವಳ ಪ್ರೇಮವು ಆಕ್ಷೇಪಾರ್ಹವಾದದ್ದೆಂದು ನಂಬುವದೇ ಪಾಪವೆಂದು ನನಗೆ ತೋರುತ್ತದೆ. ಇದೊಂದು ಮಾತಿನಲ್ಲಿ ನಾನು ನಿಮ್ಮ ಆಜ್ಞೆಯನ್ನು ಮೀರಿದ್ದಕ್ಕೆ ಕ್ಷಮಿಸಿರಿ. ”

“ ನಿನ್ನಿಚ್ಛೆಯಂತಾಗಲಿ. ಆದರೂ ಅಲ್ಲಿ ಮಾದಕ ಪದಾರ್ಥಗಳನ್ನು ನೀನು ಸೇವಿಸುವದನ್ನು ಬಿಟ್ಟುಬಿಡು. ಕೆಲಸ ತೀರಿದ ಕೂಡಲೆ ನಿರರ್ಥಕವಾಗಿ ಅಲ್ಲಿ ಹೊತ್ತುಗಳೆಯದೆ ಮರಳಿ ಬಾ. ” ಎಂದು ರಸೆಲ್ಲಸಾಹೇಬರು ಸ್ನೇಹಪರವಶರಾಗಿ ಉಪದೇಶ ಮಾಡಿದರು.

ಹಾಗೆಯೇ ಆಗಲೆಂದು ಡಿಗ್ಬಿಯು ಹೊರಟು ಹೋದನು. ಇತ್ತ ಸರ ಆರಥರನು ಟೆಲಿಫೋನಿನಿಂದ ಕುಕರ್ಮಶೋಧಕನಾದ ಶರ್ಲಾಕ ಹೋಲ್ಮ್ಸನನ್ನು ಕರಿಸಿ ನಡೆದ ವರ್ತಮಾನವನ್ನೆಲ್ಲ ಅವನಿಗೆ ತಿಳಿಸಿ, ಡಿಗ್ಬಿಯು ತನಗೆ ತೋರಿಸಿರುವ ಎರಡೂ ಪತ್ರಗಳನ್ನು ಶರ್ಲಾಕನ ಸ್ವಾಧೀನ ಮಾಡಿದನು.

ಹೋಲ್ಮ್ಸನು ಕ್ಷಣಹೊತ್ತು ವಿಚಾರಗೈದು ನನ್ನಿಂದಾದಷ್ಟು ಸಾಹಸವನ್ನು ಮಾಡಿ ಡಿಗ್ಬಿಯ ಜೀವಕ್ಕೆ ಅಪಾಯವಾಗದಂತೆ ವ್ಯವಸ್ಥೆ ಮಾಡುವೆನೆಂದು ಹೇಳಿ ಲಗಬಗೆಯಿಂದ ಹೊರಟುಹೋದನು.

ರಾತ್ರಿಯ ಹತ್ತು ಗಂಟೆಗೆ ಚಾರಿಂಗ ಕ್ರಾಸಿನಲ್ಲಿ ೧೫೭ನೆಯ ನಂಬರಿನ ಮನೆಯ ಆವಾರಿನ ಸುತ್ತಲೂ ಪೋಲೀಸರ ಮುತ್ತಿಗೆ ಬಿದ್ದಿತು. ಬೆಕ್ಕಿನ ಪಿಳ್ಳೆಯನ್ನು ಅವರು ಒಳಗೆ ಹೋಗಗೊಡಲೂ ಇಲ್ಲ, ಹೊರಗೆ ಬರಲೂ ಕೊಡ ಲಿಲ್ಲ. ರಾತ್ರಿಯ ಹನ್ನೆರಡರೊಳಗಾಗಿ ಡಿಗ್ಬಿಯು ಆ ಮನೆಯನ್ನು ಬಿಟ್ಟು ಬಂದೇ ಬರುವನೆಂದು ಖಂಡಿತವಾಗಿ ಹೇಳಿದ್ದನು. ಹನ್ನೆರಡು ಬಡಿದು ಹೋದವು. ಡಿಗ್ಬಿಯು ಹೊರಗೆ ಬರಲಿಲ್ಲ.

ಘಾತವಾಯಿತೆಂದವನೇ ಶರ್ಲಾಕನು ನೆಟ್ಟಗೆ ಆ ಮನೆಯ ಕಲೆ ಬಾಗಿಲಕ್ಕೆ ಬಂದು ಬಾಗಿಲವನ್ನು ಒದೆಯಲಾರಂಭಿಸಿದನು.

"ಯಾರವರು, ಇಷ್ಟು ರಾತ್ರಿಯಲ್ಲಿ ಉದ್ದಾಮತನದಿಂದ ನಿದ್ರಾಭಂಗ ವನ್ನು ಮಾಡುತ್ತಿರುವವರು ?" ಎಂದು ಕ್ರುದ್ಧಳಾಗಿ ಕೇಳುತ್ತಿದ್ದರೂ ಆ ಕೇಳುವಾಕೆಯ ಧ್ವನಿಯು ಕೋಕಿಲದ ವಾಣಿಯಂತೆ ಮಂಜುಲವಾಗಿ ಕೇಳಿಸಿತು.

"ಇಲ್ಲಿ ವ್ಹಾಲೆಂಟಾಯಿನ್ ಡಿಗ್ಬಿ ಎಂಬ ಗೃಹಸ್ಥರು ಬಂದಿರುವರಷ್ಟೆ ?" ಎಂದು ಶಾರ್ಲಾಕನು ಕೇಳಿದನು.

"ವ್ಹಾಲೆಂಟಾಯಿನ್ ಡಿಗ್ಬಿ ! ಎಲ್ಲಿಯವರವರು ? ಇಲ್ಲಿಗೇಕೆ ಬರುವ ರವರು ? ಡಿಗ್ಬಿ ಎಂಬವರ ಪರಿಚಯವೇ ನಮಗಿಲ್ಲ" ಎಂದು ಆ ಸ್ತ್ರೀಯು ಒಳಗಿನಿಂದಲೇ ನುಡಿದಳು.

"ಅದೇಕೆ ? ಡಿಗ್ಬಿಯು ಇಲ್ಲಿ ಬಂದದ್ದನ್ನು ನಾನು ಪ್ರತ್ಯಕ್ಷವಾಗಿ ಕಂಡಿದ್ದೇನೆ. ನನ್ನ ಹೆಸರು ಶರ್ಲಾಕ್ ಹೋಲ್ಮ್ಸನು."

"ಶರ್ಲಾಕ್ ಹೋಲ್ಮ್ಸ !" ಎಂದು ಉದ್ಗಾರ ತೆಗೆದವಳೇ ಡಿಯಾನೆಯು ಬಾಗಿಲವನ್ನು ತೆರೆದು "ಏನು ನಿಮಿತ್ತ ಬಂದಿರುವಿರಿ ? ಒಳಗೆ ದಯ ಮಾಡಬೇಕು" ಎಂದು ವಿನಯದಿಂದ ನುಡಿದಳು.

ಶರ್ಲಾಕನು ಒಳಗೆ ಹೋಗಿ ಅಲ್ಲಿರುವದೊಂದು ಕುರ್ಚಿಯ ಮೇಲೆ ಕುಳಿತು "ಡಿಯಾನಾಬಾಯಿ, ಡಿಗ್ಬಿಯು ಇಲ್ಲಿ ಬರಲಿಲ್ಲವೆ ? ಅವನು ಇದೇ

ಮನೆಯೊಳಗೆ ಬಂದಂತಾಯಿತು ” ಎಂದು ನುಡಿದನು.

“ ಬಂದಿಲ್ಲ ಬಿಡಿರಿ. ಬೇಕಾದರೆ ನೀವು ನೋಡಿಕೊಳ್ಳಬಹುದು. ಮನೆತುಂಬ ಅಡ್ಡಾಡಿ ನೋಡಿರಿ. ನೀವೇಕೆ ಅವನ ವಿಷಯವಾಗಿ ವಿಚಾರ ಗೈಯುವಿರಿ ? ಅವನೇನಾದರೂ ಅಪರಾಧವನ್ನು ಮಾಡಿರುವನೋ ? ” ಎಂದು ಕೇಳಿದಳು.

ಶಲಾರ್ಕನು ಡಿಯಾನೆಯ ಧೂರ್ತತನಕ್ಕೆ ಬೆರಗಾಗಿ ನಕ್ಕು “ ಅವನ ಅಪರಾಧಗಳೇನೂ ಇಲ್ಲ. ಆದರೂ ಅವನಿಲ್ಲಿಗೆ ಬಂದನೆಂಬದನ್ನು ಅನೇಕ ಜನರು ಕಂಡಿರುವದಾಗಿ ಹೇಳುತ್ತಾರಾದ್ದರಿಂದ ನಾನು ಈ ಮನೆಯಲ್ಲೆಲ್ಲ ಶೋಧ ಮಾಡುವೆನು. ನೀವು ಪ್ರತಿಬಂಧ ಮಾಡಲಿಕ್ಕಿಲ್ಲವೆಂದು ಆಶಿಸುತ್ತೇನೆ ” ಎಂದು ಸೂಚಿಸಿದನು.

“ ಅವಶ್ಯ, ಅವಶ್ಯ ! ತಾಸೆರಡು ತಾಸು ನಿದ್ದೆಗೇಡಾಗುವೆನಲ್ಲದೆ ಮತ್ತೇನಿದೆ ? ”

ಸಂಗಡಲೆ ನಾಲ್ಕಾರು ಪೋಲೀಸ ಜನರೂ ಶಲಾರ್ಕನೂ ಡಾಕ್ಟರ ವ್ಯಾಟ್‌ಸನ್ನನೂ ಮನೆಯಲ್ಲಿ ಹೊಕ್ಕು ಎಲ್ಲ ಕಡೆಯಲ್ಲಿಯೂ ಡಿಗ್ಬಿಯ ಶೋಧ ಮಾಡಿದರು. ಕೋಠಿ, ಅಡಿಗೆಮನೆ, ಬಚ್ಚಲ, ಒತ್ತಲಮನೆಗಳಲ್ಲಿ ಅಡ್ಡಾಡಿ ನೋಡಿದರು. ಪೆಟ್ಟಿಗೆ ಕಪಾಟಗಳನ್ನು ತೆರೆದಿಟ್ಟರು. ಹಾಸಿಗೆಯ ಸುರುಳಿಗಳನ್ನು ಉರುಳಿಸಿದರು. ಎಲ್ಲಿಯೂ ಡಿಗ್ಬಿಯ ತುಬ್ಬು ಇಲ್ಲ. ನೆಲದಲ್ಲಿ ಪೊಳ್ಳಿರುವದೋ ಎಂದು ಶಂಕಿಸಿ ಅಲ್ಲಲ್ಲಿ ಕುಣಿದಾಡಿ ನೋಡಿದರು. ಬೇಸತ್ತು ಅವರು ನೆಲಮನೆಗೆ ಬಂದರು. ಅಲ್ಲಿಯಾದರೂ ಏನಿದೆ ? ಶಲಾರ್ಕನು ಬೆರಗಾಗಿ ನಿಂತನು. ದೊಡ್ಡದೊಂದು ಹಾವಾನಾ ಸಿಗರು ತೆಗೆದು ಅವನು ಅದನ್ನು ಹೊತ್ತಿಸಿ ಸೇದುತ್ತ ಮೂಢನಂತೆ ನೋಡುತ್ತ ನಿಂತನು. ಎಲ್ಲರ ಯಂತ್ರಗಳೆಲ್ಲ ನಿಂತವು. ಶಲಾರ್ಕನು ಹತ್ತೆಂಟು ಜುರಿಕೆ ಬತ್ತಿಯನ್ನು ಅವಸರವಸರದಿಂದ ಸೇದಿ ಸಾವಕಾಶವಾಗಿ ಹೆಜ್ಜೆಗಳನ್ನಿಕ್ಕುತ್ತ ಅಲ್ಲಿಟ್ಟಿರುವದೊಂದು ದೊಡ್ಡದಾದ ಹಿತ್ತಾಳೆಯ ಕಲಬತ್ತಿನ ಬಳಿಗೆ ಬಂದನು ಅದರಲ್ಲಿ ಕೈಹಾಕಿ ನೋಡಲಾಗಿ ಪೈತೂಕದಷ್ಟು ಹಿಟ್ಟಿನಂಥ ಪದಾರ್ಥವು ಇದ್ದಿತು. ಒಂದು ಚಿಮುಟಿಗೆಯನ್ನು ತೆಗೆದುಕೊಂಡು ಅವನು ಮೂಸಿನೋಡಿದನು. ಮತ್ತೊಮ್ಮೆ ಮೂಸಿನೋಡಿ ಅದನ್ನು ಅವನು ಡಾಕ್ಟರ ವ್ಯಾಟ್‌ಸನ್ನನಿಗೆ

ತೋರಿಸಿದನು. "ಪ್ರಾಣಿಜ ಪದಾರ್ಥದಂತೆ ಕಾಣಿಸುತ್ತದೆ" ಎಂದು ವ್ಯಾಟ್‌ಸನ್ನನು ಅಭಿಪ್ರಾಯಪಟ್ಟಕೂಡಲೆ ಶರ್ಲಾಕನಿಗೆ ಹುಚ್ಚು ನಗೆ ತುಂಬಿತು. ಏನು ಮಾಡಿದರೂ ಅವನ ನಗೆ ನಿಂದಿರಲೊಲ್ಲದು. "ಹೀಗೇಕೆ ಮಾಡುವಿರಿ ಪೋಲ್ಮ್ಸ್?" ಎಂದು ಡಾಕ್ಟರನು ಕೇಳಿದರೂ ಅವನ ನಗೆ ನಿಂದಿರಲಿಲ್ಲ. "ಮನುಷ್ಯನಿಗೆ ಹುಚ್ಚು ಹಿಡಿಸುವ ಪುಡಿಯು ಇದು ಬೇರೆ ಅಲ್ಲವಷ್ಟೆ?" ಎಂದು ನುಡಿದು ವ್ಯಾಟ್‌ಸನ್ನನು ಅದನ್ನು ತಾನು ಮತ್ತೆ ಮೂಸಿನೋಡಿದನು. ಆಗ ಶರ್ಲಾಕನು "ಡಾಕ್ಟರ, ಇದು ಮನುಷ್ಯನಿಗೆ ಹುಚ್ಚು ಹಿಡಿಸುವ ಪುಡಿಯಲ್ಲ. ಇದು ಯಾತರ ಪುಡಿ ಎಂಬದು ತಿಳಿದರೆ ನಿಮಗಾದರೂ ಹುಚ್ಚು ಹಿಡಿಯಬಹುದು." ಎಂದು ಹೇಳಿದನು.

ಬಳಿಕ ಷರ್ಲಾಕನು ಮತ್ತೊಂದು ಸಿಗರವನ್ನು ಹೊತ್ತಿಸಿ ಒಂದು ಕುರ್ಚಿಯನ್ನು ತೆಗೆದುಕೊಂಡು ಆರಾಮವಾಗಿ ಕುಳಿತುಕೊಂಡು ಹೇಳಲಾರಂಭಿಸಿದ್ದೇನೆಂದರೆ :

"ಡಾಕ್ಟರ, ಇಲ್ಲಿ ನೋಡಿರಿ, ನೀರಾಗಿ ಮಾಡಿದ ಹವೆಯ ರಸದಿಂದ ತುಂಬಿದ ಬುದ್ದಲಿಕೆಯಿಲ್ಲಿದೆ. ಇದರಲ್ಲಿ ಮೊಲ ಮುಂತಾದ ಪ್ರಾಣಿಗಳನ್ನು ಕೊಂದು ಚಲ್ಲಿಕೊಟ್ಟರೆ ಅವುಗಳ ಶರೀರಗಳು ರಾಳ ಕಲ್ಲುಸಕ್ಕರೆ ಮುಂತಾದ ಪದಾರ್ಥಗಳಂತೆ ಹೊಡೆದರೆ ಪಳಪಳಗೆ ಪುಡಿಯಾಗುತ್ತವೆಂಬದನ್ನು ನೀವು ಬಲ್ಲಿರಷ್ಟೆ ? ಹಾಗೆಯೇ ಈ ರಸದಲ್ಲಿ ಮನುಷ್ಯನ ದೇಹವನ್ನು ಚಲ್ಲಿಕೊಟ್ಟರೆ ಅದಾದರೂ ಕುಟ್ಟಿದ ಕೂಡಲೆ ಪುಡಿಪುಡಿಯಾಗಬಹುದಲ್ಲವೆ? "

ಈ ಮಾತು ಕೇಳಿದ ಕೂಡಲೆ ವ್ಯಾಟಸನ್ನನು ಹುಯ್ಯೆಂದು ಹುಚ್ಚನಂತೆ ಕುಣಿದನು. "ತಿಳಿಯಿತು ಶರ್ಲಾಕ್, ಈ ಕಲಬತ್ತಿನಲ್ಲಿಯ ಪುಡಿಯು ಮನುಷ್ಯನ ದೇಹವನ್ನು ಕುಟ್ಟಿ ಮಾಡಿದ ಪುಡಿಯ ಅವಶೇಷವೇ, ಸಂದೇಹವಿಲ್ಲ. ವ್ಹಾಲೆಂಟಾಯಿನ್ ಡಿಗ್ಬಿಯನ್ನು ಕೊಂದು ಅವನ ದೇಹವನ್ನು ಹೀಗೆ ಕುಟ್ಟಿ ಪುಡಿಪುಡಿಯಾಗಿ ಮಾಡಿರುವರಾದೀತೇನು ? "

"ಸಂದೇಹವೇಕೆ ? ಆದರೆ ಇಲ್ಲಿಯ ಜನರು ಡಿಗ್ಬಿಯನ್ನು ಕೊಂದು ಅವನ ದೇಹವನ್ನು ಕುಟ್ಟಿ ಹೀಗೆ ಪುಡಿ ಮಾಡಿರುವರೆಂದು ಸಿದ್ಧಮಾಡಿ ಕೊಡಲು ನಮ್ಮಲ್ಲಿ ಸಾಕಷ್ಟು ಪ್ರಮಾಣಗಳಿಲ್ಲ. ಈ ಗಾಳಿಯ ರಸದ ಬುದ್ದಲಿಕೆಯಲ್ಲಿ ಡಿಗ್ಬಿಯನ್ನು ಕೊಂದು ಹಾಕಿ ಆ ಹೆಣವನ್ನು ಡೋಣಿಯಂತಿರುವ

ಕಲಬತ್ತಿನಲ್ಲಿ ಹಾಕಿ ಕುಟ್ಟಿ ಪುಡಿಮಾಡಿ ಅಕೋ ಅಲ್ಲಿ ಬಿದ್ದಿರುವ ಕೊಗಲ ಕೊಳವೆಯಲ್ಲಿ ಹಾಕಿ ಯಂತ್ರಸಹಾಯದಿಂದ ಆ ಪುಡಿಯನ್ನೆಲ್ಲ ಗಾಳಿಗೆ ತೂರಿಬಿಟ್ಟಿರುವರು. ಇನ್ನು ನಾವು ಈ ಶೋಧನ ಕೆಲಸವನ್ನು ಹೆಚ್ಚಾಗಿ ಈ ಮನೆಯಲ್ಲಿ ನಡಿಸಿದರೆ ಮರವು ನಮ್ಮ ಮೈಮೇಲೆಯೇ ಕಡುಕೊಂಡು ಬೀಳುವದು. ಡಿಯಾನೆಯು ಕಣ್ಣಿಗೆ ಚಲುವೆಯಾಗಿ ಕಂಡಷ್ಟೆಯೇ ಅವಳು ದುಷ್ಟೆಯೂ ನಿರ್ದಯಳೂ ಆಗಿರುವಳು. ವ್ಹಾಲೆಂಟಾಯಿನ ಡಿಗ್ರಿಯು ಅವಳ ಮೋಸಕ್ಕೊಳಗಾಗಿ ವ್ಯರ್ಥವಾಗಿ ಸತ್ತುಹೋದನು. ನನ್ನಂಥವನನ್ನು ಕೂಡ ಸೋಲಿಸುವ ಹೆಂಗಸು ಹುಟ್ಟಿದಳು !

## ಬೆಳ್ಳೀ-ಚಿಕ್ಕೆ

ಸರಲಾಕ್ಷ ಹುಲಿಮೀಸೆ ಎಂಬವನು ಅತಿ ಧೂರ್ತನಾದ ಕಳ್ಳರ ಮಿಂಡನು. ಅವನ ದಕ್ಷತೆಯಿಂದಲೂ ಚಾತುರ್ಯದಿಂದಲೂ ಶೋಧಕ ಶಕ್ತಿಯಿಂದಲೂ ರಾಮರಾಜನ ರಾಜ್ಯದಲ್ಲಿ ನಡೆದುಹೋದ ಅನೇಕವಾದ ಕೊಲೆ ಸುಲಿಗೆ ಮೋಸ ಅಪಹಾರಾದಿ ದುಷ್ಕೃತ್ಯಗಳ ತುಬ್ಬು ತತ್ಕಾಲವೇ ಹತ್ತುತ್ತಿರುವದ್ದರಿಂದ ಆ ರಾಜ್ಯದಲ್ಲಿ ಪಾಪಾತ್ಮರಿಗೆ ಕಾಲೂರಿ ನಿಲ್ಲಲು ಸ್ಥಳ ವಿಲ್ಲದಂತಾಗಿತ್ತು. ಇಂಥ ಸ್ಥಳದಲ್ಲಿ ಇಂಥ ದಿವಸ ಇಂಥದೊಂದು ಅಪಕೃತ್ಯ ವಾಯಿತೆಂಬ ವಾರ್ತೆಯು ಹುಲಿಮೀಸೆಯ ಕಿವಿಗೆ ಬಿದ್ದರಾಯಿತು. ಅದನ್ನು ಮಾಡಿದವರಾರು, ಅವರಾಕೃತ್ಯವನ್ನು ಯಾವ ಚಮತ್ಕಾರವಾದ ರೀತಿಯಿಂದ ಮಾಡಿದರೆಂಬ ಮಾತಿನ ಎಳೆಯನ್ನು ಅವನು ಸಂಗಡಲೇ ಹಿಡಿದುಕೊಂಡನೇ. ರಾಜಧಾನಿಯಲ್ಲಿ ಕಳ್ಳರಾರು ಸುಳ್ಳರಾರು ಮೋಸಗಾರರಾರೆಂಬದರ ಎಣಿಕೆ ಯನ್ನು ನಿರಲಸನಾದ ಆ ಕಾರ್ಯದಕ್ಷನು ಕಟ್ಟಿಕೊಂಡು ಇರುವನು. ಆದರೂ ನಗರರಕ್ಷಕರ ದಕ್ಷತೆಯು ಅಧಿಕಾಧಿಕವಾದಂತೆಯೇ ಕಳ್ಳರಾದರೂ ಹೆಚ್ಚಾದ ಜಾಣ್ಮೆಯಿಂದ ತಮ್ಮ ಕುಕರ್ಮಗಳನ್ನು ನಿರ್ವಿಘ್ನವಾಗಿ ಸಾಧಿಸಿ ಕೊಳ್ಳುವದು ಸಹಜವಾದ ಮಾತೇ. ಕುಕರ್ಮಗಳ ಶೋಧವನ್ನು ಶಾಸ್ತ್ರಾನು ರೋಧವಾಗಿ ನಡಿಸಿದ ಪ್ರಮಾಣದಿಂದಲೇ ಕಳ್ಳರಾದರೂ ರಸಾಯನಶಾಸ್ತ್ರ, ವೈದ್ಯಶಾಸ್ತ್ರ, ಪದಾರ್ಥವಿಜ್ಞಾನಶಾಸ್ತ್ರಗಳ ಸಹಾಯದಿಂದ ತಮ್ಮ ಚೌರ್ಯ ಕರ್ಮಗಳನ್ನು ಲೋಕವು ಬೆರಗಾಗುವಂತೆ ಮಾಡಿ ತೋರಿಸುವರು. ಹುಲಿ ಗಳು ಹೆಚ್ಚಾಗಿರುವ ನಾಡುಗಳಲ್ಲಿಯೇ ಆ ಶ್ವಾಪದಗಳಿಗೆ ಬಾಯ್ತಡೆಯನ್ನು ಮಾಡಬಲ್ಲವರಾದ ನಿಪುಣರು ಹುಟ್ಟುವಂತೆ ರಾಮರಾಜನ ರಾಜ್ಯದಲ್ಲಿ ಕಳ್ಳ ರಿಗೆ ಮಿಂಡನಾದ ಹುಲಿಮೀಸೆಯು ಹುಟ್ಟಿ ಆ ಅಪರಾಧಿಗಳ ಕುಕರ್ಮಗಳ ನ್ನೆಲ್ಲ ಬಯಲಿಗೆ ತಂದು ರಾಜ್ಯವನ್ನು ನಿಷ್ಕಂಟಕವನ್ನಾಗಿ ಮಾಡಿದರು.

ಹುಲಿಮೀಸೆಯು ಅಗಾಧವಾದ ಬುದ್ಧಿಯುಳ್ಳವನು. ಗಣಿತ ರಸಾಯನ ಶಾಸ್ತ್ರಗಳಲ್ಲಿ ಅವನಿಗೆ ಮಿತಿಮೀರಿದ ಮೆಚ್ಚಿಗೆ. ತರ್ಕದಲ್ಲಿಯಾದರೂ ಅವ ನೊಳ್ಳೇ ಗಟ್ಟಿಗನು. ಜನರ ಗುಣಾವಗುಣಗಳನ್ನು ಬಹು ಸೂಕ್ಷ್ಮವಾಗಿ

ನಿರೀಕ್ಷಿಸುವದು ಅವನ ಹುಟ್ಟುಗುಣವೇ ಆಗಿತ್ತು. ತೀವ್ರ ಬುದ್ಧಿಶಕ್ತಿಯವ ನಾಗಿದ್ದರೂ ಅವನು ಸಮರ್ಥನು. ಸರ್ಪದಂತೆ ತೀಕ್ಷ್ಣವಾದ [illegible]ಗಳು ಳ್ಳವನಾದ ಅವನು ಹೋಗಹೋಗುವಾಗಲೇ ಅಲ್ಲಲ್ಲಿಯ [illegible]ಗಳ ಸ್ವರೂಪವನ್ನು ಕಂಡುಕೊಳ್ಳುವನು. ಇಂಥ ಸ್ವತಂತ್ರ [illegible] ಚಿತ್ತವೃತ್ತಿಯು ವಿಲಕ್ಷಣವಾದದ್ದಾಗಿತ್ತೆಂಬುದು ಅಷ್ಟು [illegible] ಆಟ ನೋಟ ವಿನೋದ ಮುಂತಾದವುಗಳು ಅವನಿಗೆ ಸೇರುತ್ತಿದ್ದರೂ ಅವುಗಳಲ್ಲಿ ಅವನು ಹೊತ್ತುಗಳೆದವನಲ್ಲ. ಜನರೊಡನೆ ವಿಶೇಷವಾಗಿ ಕೂಡಿ ಆಡುವವನಲ್ಲ. ಅವನು ದೃಢಾಂಗನಾಗಿದ್ದರೂ ವ್ಯಾಯಾಮಗಳಲ್ಲಿ ಅವನಿಗೆ ಸೇರಿಕೆ ಕಡಿಮೆ. ಯಾವದೊಂದು ದೊಡ್ಡ ವಿಚಾರದಲ್ಲಿ ಅವನು ಮುಳುಗಿದ್ದನೆಂದರೆ ಎಡಬಲ ದಲ್ಲಿ ನಡೆದಿದ್ದ ಸಂಗತಿಗಳ ಅರಿವೇ ಅವನಿಗಿರುತ್ತಿದ್ದಿಲ್ಲ. ಇಂಥ ಸ್ಥಿತಿಯಲ್ಲಿರು ವಾಗ ಹುಲಿವಿಾಸೆಯು ಹೊಗೆಸೊಪ್ಪಿನೊಂದನ್ನು ಮಹಾಶ್ರ ಬಲು ಹುರುಪಿ ನಿಂದ ಸೇದುವನು. ಮನೆಗೆಲ್ಲಿಯೋ ಬೆಂಕಿಹತ್ತಿರುವದೆಂಬಂತೆ ಅವನಿರುವ ಕೋಣೆಯಲ್ಲಿ ದುಂದಾಕಾರವಾಗಿ ಹೊಗೆ ಇಡುಗಿತ್ತೆಂದರೆ ಹುಲಿವಿಾಸೆಯ ತರ್ಕಗಳು ಅವ್ಯಾಹತವಾಗಿ ನಡೆದಿರುವವೆಂಬ ಸೂಚನೆ.

ನಾನು ( ವೈದ್ಯ ವಾತಾತ್ಮಜ ಪಂಡಿತ ) ಶರಲಾಕ್ಷರಾಯನ ಪರಮ ಶಿಷ್ಯನು. ನನ್ನ ಸ್ವಂತ ಉದ್ಯೋಗದಿಂದ ಯೋಗಕ್ಷೇಮವು ಅವಿಚ್ಛಿನ್ನವಾಗಿ ಸಾಗುತ್ತಿದ್ದರೂ ಶರಲಾಕ್ಷನು ಕುಕರ್ಮಗಳ ತುಬ್ಬನ್ನು ಹೇಗೆ ಚಮತ್ಕಾರ ವಾಗಿ ಹಚ್ಚುತ್ತಿರುವನೆಂಬದರ ಅನುಭವವನ್ನು ಕಂಡುಕೊಳ್ಳುವ ಬಯಕೆ ನನಗೆ ಹೆಚ್ಚಾಗಿರುವದರಿಂದ ನಾನು ಅವನ ಅನುಯಾಯಿಯಾಗಿ ಇದ್ದು ಕೊಂಡಿದ್ದೆನು. ಒಂದು ದಿನ ನಾನು ಹುಲಿವಿಾಸೆ ಶರಲಾಕ್ಷನ ಮನೆಗೆ ಹೋದಾಗ ಅವನ ಕೋಣೆಯಲ್ಲಿ ದಟ್ಟವಾದ ಹೊಗೆ ಇಡುಗಿತ್ತು. ಅವನಾ ವದೋ ಗಹನವಾದ ವಿಚಾರದಲ್ಲಿ ನಿಮಗ್ನನಾಗಿರುವನೆಂಬುದು ನಿರ್ವಿವಾದವು. ಒಳಗೆ ಹೋಗಿ ನೋಡಲಾಗಿ ಆ ಮೂರ್ತಿಯು ಸಮಾಧಿಸ್ಥವಾಗಿ ಕುಳಿತಿತ್ತು. ನಾನು ಕ್ಯಾಕರಿಸಿದೆನು, ಹೂಂಕರಿಸಿದೆನು. ಶರಲಾಕ್ಷನು ನನ್ನನ್ನು ಕಣ್ಣೆತ್ತಿ ಕೂಡಾ ನೋಡಲಿಲ್ಲ. ಇತ್ತ ಕಡೆಯ ಪ್ರಜ್ಞೆಯು ಅವನಿಗಿಲ್ಲ. ನೋಡುವನೆಲ್ಲಿಂದ? ನಾನೊಂದು ದಿಂಬಕ್ಕೆ ಆತುಕೊಂಡು ಅರ್ಧಗಳಿಗೆ ಸುಮ್ಮನೆ ಕುಳಿತೆನು. ಹುಲಿವಿಾಸೆಪ್ಪನವರ ಸಮಾಧಿಯು ಬಿಗಿಯು ಕುಸು ಸಡಿಲಾದಂತೆ ಕಂಡಿತು.

"ಯಾಕೆ ರಾಯರೆ, ಗಹನವಾದ ವಿಚಾರವು ನಡೆದಂತೆ ಕಾಣುತ್ತದೆ?" ಎಂದು ನಾನು ಗಟ್ಟಿಸಿ ಕೇಳಿದೆನು.

"ಓ ವೈದ್ಯರಾಜ, ಯಾವಾಗ ಆಗಮನ?" ಎಂದು ಅವನು ತಟ್ಟನೆ ಎಚ್ಚತ್ತವನಾಗಿ ನನ್ನನ್ನು ಕೇಳಿದನು.

"ಬಂದು ಅರ್ಧಗಳಿಗೆಯಾಯಿತು. ಸುಭೇದಾರ ರಾಸಬಿಹಾರಿಯವರ ಕುದುರೆಯ ಪ್ರಕರಣವನ್ನು ಕುರಿತು ಆಲೋಚಿಸುತ್ತಿದ್ದಿರೇನು?"

"ವಾಃ! ವಾತಾತ್ಮಜ ಪಂಡಿತ, ದಿನೇ ದಿನೇ ನಿಮ್ಮ ಬುದ್ಧಿಯು ಒಳ್ಳೇ ಚುರುಕಾಗುತ್ತ ಬಂದಿತು. ನಾನು ರಾಸಬಿಹಾರಿಯ ಕುದುರೆಯ ಪ್ರಕರಣವನ್ನು ಕುರಿತೇ ಆಲೋಚಿಸುತ್ತಿದ್ದೆನು. ಒಳಿತಾಗಿ ಸಿಕ್ಕಿರಿ ನೀವು. ನಾನೀಗಲೆ ವಾತಾಪೀಪುರಕ್ಕೆ ಹೊರಡತಕ್ಕವನು. ನೀವು ನನ್ನೊಡನೆ ಬರುವಿರಷ್ಟೆ?"

"ಗುರುಗಳೆಲ್ಲಿಯೋ ಅಲ್ಲಿ ಶಿಷ್ಯನು, ನಡೆಯಿರಿ." ಎಂದು ನಾನು ನಗುತ್ತ ಒಪ್ಪಿಕೊಂಡೆನು.

"ನಾನು ಧನ್ಯನಾದೆನು. ಈ ಪ್ರಸಂಗದಲ್ಲಿ ವೈದ್ಯರ ಅಭಿಪ್ರಾಯವೂ ಅವಶ್ಯವಾಗಿರುವಂತೆ ತೋರುತ್ತದೆ." ಎಂದು ನುಡಿದು ಸರಲಾಕ್ಷರಾಯನು ತನ್ನ ಗಡಿಯಾರವನ್ನು ತೆಗೆದು ನೋಡಿ, "ಓಹೋ, ಇಲ್ಲಿ ನೋಡಿರಿ ಹತ್ತೂವರೆಯಾಗಿದೆ. ಹನ್ನೊಂದಕ್ಕೆ ಸರಿಯಾಗಿ ಹೊಗೆಬಂಡಿಯು ವಾತಾಪೀಪುರಕ್ಕೆ ಹೊರಡುವದು. ನೀವಿನ್ನು ಮನೆಗೆ ಹೋಗುವ ವಿಚಾರ ಮಾಡದೆ ಹೀಗಿಂದ ಹೀಗೆಯೇ ಸ್ಟೇಶನಕ್ಕೆ ಬರಬೇಕು. ಹೊನ್ನಪ್ಪನು ನಮ್ಮೆರ್ವರಿಗಾಗಿ ಹಾಸಿಗೆ ಬಟ್ಟೆಗಳನ್ನು ಕಟ್ಟಿಕೊಂಡೇ ಕುಳಿತಿರಬಹುದು."

"ಆಗಲಿ!" ಎಂದು ನಾನು ಒಪ್ಪಿಕೊಂಡೆನು.

"ವಾತಾತ್ಮಜ, ಅಲ್ಲಿ ದುರ್ಬಿನು ಇದೆ; ತೆಗೆದುಕೊಳ್ಳಿರಿ. ವಾತಾಪೀಪುರದ ಬಳಿಯಲ್ಲಿರುವ ಪರ್ವತಾವಳಿಯನ್ನೂ ಇನ್ನುಳಿದ ಸೃಷ್ಟಿಸೌಂದರ್ಯವನ್ನೂ ಚನ್ನಾಗಿ ನಿರೀಕ್ಷಿಸಬೇಕಾದರೆ ದುರ್ಬಿನು ಅವಶ್ಯವಾಗಿ ಬೇಕು. ಆ ನಿಮ್ಮ ಚೀಲದಲ್ಲಿ ಹಿಂಗಾಷ್ಟಕವಿರುವದಷ್ಟೆ?" ಎಂದು ಹುಲಿಮೀಸೆಯ ಮುಗುಳುನಗೆ ನಕ್ಕು ಕೇಳಿದನು.

"ಅದೇಕೆ?"

“ ರಾಸಬಿಹಾರಿಯಂಥ ಅತ್ತಕಡೆಯ ಬ್ರಾಹ್ಮಣರು ಪಕ್ವಾನ್ನದ ಅಡಿಗೆಯ ಹೊರತಾಗಿ ಮತ್ತೊಂದು ಅಡಿಗೆಯನ್ನೇ ಅರಿಯರು. ಪಕ್ವಾನ್ನ ಭೋಜನವಿದ್ದಾಗ ನೀವು ಹೊಟ್ಟೆಯ ಅಳತೆಯನ್ನು ಮರೆತೇ ಬಿಡುವಿರಿ. ” ಎಂದು ಹುಲಿಮೀಸೆಯು ಗಹಗಹಿಸಿ ನಗುತ್ತ ನುಡಿದನು.

ಸಮಯವು ಒತ್ತಿ ಬಂದಿದ್ದರಿಂದ ನಾವು ರಥದಲ್ಲಿ ಕುಳಿತು ಸ್ಟೇಶನಕ್ಕೆ ಹೋದೆವು. ಹೊಗೆಬಂಡಿಯು ಸಿದ್ಧವಾಗಿಯೇ ನಿಂತಿತ್ತು. ವಿಲಂಬಮಾಡದೆ ನಾವು ಮೊದಲನೆಯ ತರಗತಿಯ ಬಂಡಿಯಲ್ಲಿ ಯಥಾಸುಖವಾಗಿ ಕುಳಿತುಕೊಂಡು ಗಡಿಯಾರವನ್ನು ತೆಗೆದು ನೋಡುವಷ್ಟರಲ್ಲಿ ಬಂಡಿಯು ಸಾಗಿಯೇ ಬಿಟ್ಟಿತು. ನಾವೀರ್ವರೂ ನಮ್ಮ ತಲೆಯಮೇಲಿನ ರುಮಾಲುಗಳನ್ನು ತೆಗೆದಿಟ್ಟು ಧೂಮ್ರಪಾನದ ಉದ್ಯೋಗವನ್ನು ನಡೆಸಿದೆವು. ಹೊಗೆಬಂಡಿಯಾದರೂ ಒಳ್ಳೇ ರಭಸದಿಂದ ಸಾಗಲಾರಂಭಿಸಿತು. ಹುಲಿಮೀಸೆಯು ತನ್ನ ಕೈಯಲ್ಲಿ ಗಡಿಯಾರವನ್ನು ತೆಗೆದು ಹಿಡಿದು “ ವಾಃ! ಬಂಡಿಯನ್ನು ಒಳ್ಳೇ ವೇಗದಿಂದ ಹೊಡೆಯುತ್ತಿರುವನು. ಗಂಟೆಯೊಂದಕ್ಕೆ ನಾಲ್ವತ್ತು ಮೈಲಿನ ವೇಗವಾಗಿದೆ. ” ಎಂದು ಅವನು ಕಿಟಕಿಯ ಹೊರಗೆ ಮೋರೆ ಹಾಕಿ ನೋಡಿ ನುಡಿದನು.

“ ಮೈಲುಗಲ್ಲುಗಳು ನನಗೆ ಕಾಣಿಸುವದಿಲ್ಲ. ಹೇಗೆ ಹೇಳಲಿ ? ” ಎಂದು ನಾನು ಉತ್ತರವನ್ನಿತ್ತೆನು.

“ ನಾನಾದರೂ ಎಲ್ಲಿ ನೋಡಿದ್ದೇನೆ ? ಈ ಭಾಗದಲ್ಲಿ ಮೈಲೊಂದಕ್ಕೆ ಇಪ್ಪತ್ತು ತಂತಿಯ ಕಂಬಗಳನ್ನು ನಿಲ್ಲಿಸಿರುವರಷ್ಟೆ ? ”

“ ಇಂಥ ಸಂಗತಿಗಳೆಲ್ಲ ನಿಮ್ಮ ಧ್ಯಾನದಲ್ಲಿ ನಿಂತಿರುವದು ಹೆಚ್ಚಿನ ಮಾತು. ”

“ ಈ ಮಾತು ಹಾಗಿರಲಿ. ಆ ಬೆಳ್ಳಿಯ ಚಿಕ್ಕೆಯೆಂಬ ಕುದುರೆಯ ಪ್ರಕರಣದಲ್ಲಿ ಆ ಅಶ್ವಶಿಕ್ಷಕನಾದ ಠಾಕೂರಸಿಂಗನ ಕೊಲೆಯ ಸಂಗತಿಯೂ ಆ ಅಪೂರ್ವವಾದ ಕುದುರೆಯು ಒಮ್ಮಿಂದೊಮ್ಮೆ ಕಾಣದಂತಾಗಿರುವ ಸೋಜಿಗದ ಸಂಗತಿಯೂ ವಿಚಾರಾರ್ಹವಾಗಿವೆ. ” ಎಂದು ಸರಲಾಕ್ಷನು ನುಡಿದನು.

“ ಆ ವೃತ್ತಾಂತವನ್ನೆಲ್ಲ ನಾನು ‘ ವೃತ್ತವಿಪರ್ಯಾಸ ’ ‘ ಸುದ್ದೀಪೂರಕ್ಷ ’ ಎಂಬ ವರ್ತಮಾನಪತ್ರಗಳಲ್ಲಿ ಓದಿರುವೆನು. ಆದರೆ ಇನ್ನೂ

ಕೆಲವು ಪ್ರತ್ಯಕ್ಷ ಪ್ರಮಾಣಗಳು ಸಿಕ್ಕಿದ ಹೊರತು ನಿಶ್ಚಿತವಾದ ಅಭಿಪ್ರಾಯ ವನ್ನು ಹೇಳಲಾಗದು."

"ವೈದ್ಯರೆ, ಸದ್ಯಕ್ಕೆ ಉಪಲಬ್ಧವಾದ ಪ್ರಮಾಣಗಳು ಸಾಕಾಗುವಷ್ಟು ಇವೆಯೆಂದು ನಾನು ಭಾವಿಸುತ್ತೇನೆ. ಅವುಗಳನ್ನು ವಿಂಗಡಿಸಿ ಸುವ್ಯವಸ್ಥಿತ ವಾಗಿ ರಚಿಸಿ ನೋಡಿದರೆ ನಿಜವಾಗಿ ಸಂಭವಿಸಿದ ಸಂಗತಿಗಳಾವವು ? ಅವು ಗಳಿಂದ ನಾವು ಊಹಿಸತಕ್ಕದ್ದೇನೆಂಬದು ಸಹಜವಾಗಿ ತಿಳಿಯುವಂತಿದೆ."

"ಈಗಾಗಲೆ ಠಾಕುರಸಿಂಗನ ಮರಣದ ಕಾರ್ಯಕಾರಣ ಸಂಬಂಧದ ಹೊಂದಿಕೆಯನ್ನು ನೀವು ನಿಮ್ಮ ಮನಸ್ಸಿನಲ್ಲಿ ಕಟ್ಟಿಕೊಂಡಿರುವಿರೇನು ?" ಎಂದು ನಾನು ಕುತೂಹಲವುಳ್ಳವನಾಗಿ ಕೇಳಿದೆನು.

"ಇನ್ನೂ ನಿಶ್ಚಿತವಾಗಿ ಹೇಳಲಾರೆನು. ಕೆಲವು ಸಂಗತಿಗಳು ಸಂದಿಗ್ಧ ವಾಗಿವೆ ನಾವು ದೇವೀಗುಡ್ಡವೆಂಬ ಆ ಗ್ರಾಮಕ್ಕೆ ಹೋಗಿ ಚನ್ನಾಗಿ ಸ್ಥಳ ನಿರೀಕ್ಷಣವನ್ನು ಮಾಡಿಯೂ ಕೆಲವು ಸಂಗತಿಗಳನ್ನು ಪ್ರತ್ಯಕ್ಷವಾಗಿ ರಾಸ ಬಿಹಾರಿಯ ಮುಖದಿಂದ ಕೇಳಿಯೂ ನಿಶ್ಚಯಾತ್ಮಕವಾದ ಅಭಿಪ್ರಾಯವನ್ನು ಹೇಳಬಹುದು. ಒಂದು ತರ್ಕವಂತೂ ನಿಷ್ಫಲವಾದಂತಾಗಿದೆ."

"ಯಾವದದು ?" ಎಂದು ನಾನು ಚಕಿತನಾಗಿ ಕೇಳಿದೆನು. ಹುಲಿ ಮೀಸೆಯ ತರ್ಕವು ನಿಷ್ಫಲವಾಯಿತೆಂದರೆ ನೀಲಿ ಕೆಟ್ಟ ಸುದ್ದಿಯೇ.

"ಮೊನ್ನೆ ಮಂಗಳವಾರ ದಿವಸವೇ ಸುಭೇದಾರ ರಾಸಬಿಹಾರಿಯೂ ಕೊತವಾಲ ಕೃಷ್ಣಭುಜಂಗನೂ ಕೂಡಿ ನೀವು ನಿಲ್ಲದೆ ಬರಬೇಕೆಂದು ನನಗೆ ತಂತಿಯಿಂದ ತಿಳಿಸಿದ್ದರು."

"ಮೊನ್ನೆ ತಂತಿ ಬಂದಿತ್ತೆ? ಇಂದು ಗುರುವಾರ; ನೀವು ಹೋಗದೆ ಎರಡು ದಿವಸ ಹಾಗೆಯೇ ಹೇಗೆ ಕುಳಿತಿರಿ ?"

"ಕಣ್ಣಗೊಂಬೆಯಂತೆ ಎಲ್ಲರ ಕಣ್ಣಲ್ಲಿ ಕಟ್ಟಿರುವ ಬೆಳ್ಳೀಚಿಕ್ಕೆಯಂಥ ಅಶ್ವರತ್ನವನ್ನು ಒಂದೊಪ್ಪತ್ತು ಕೂಡ ಯಾರಾದರೂ ಬಚ್ಚಿಟ್ಟುಕೊಂಡಿರು ವದು ಅಸಂಭವವಾದ ಮಾತು. ಆದಕ್ಕಾಗಿ ಇಂದಿಲ್ಲ ನಾಳಿಗಾದರೂ ಆ ಕುದುರೆಯ ವರ್ತಮಾನವು ಬಯಲಿಗೆ ಬರದೆ ಇರದೆಂದು ನಾನು ತರ್ಕಿಸಿ ಎರಡು ದಿನ ಸುಮ್ಮನೆ ಕುಳಿತು ಬಿಟ್ಟೆನು. ಇದೊಂದು ತಪ್ಪೇ ಆಯಿತು."

"ಕುದುರೆಯ ಸಮಾಚಾರವು ತಿಳಿಯದಿರುವದರಿಂದ ನಿಮ್ಮ ವಿಚಾರ

ಸರಣಿಯಲ್ಲಿ ಹೆಚ್ಚುಕಡಿಮೆಯಾಗಿರುವದೇನು?" ಎಂದು ನಾನು ಕೇಳಿದೆನು.

"ಅದರ ವಿಚಾರವನ್ನು ಮುಂದೆ ಮಾಡೋಣ. ಸದ್ಯಕ್ಕೆ ನೀವೊಂದು ಮಹತ್ವದ ಸಂಗತಿಯನ್ನು ಚೆನ್ನಾಗಿ ಧ್ಯಾನದಲ್ಲಿಟ್ಟುಕೊಳ್ಳಬೇಕು. ಅದೇನೆಂದರೆ, ಪ್ರತಿವರ್ಷ ವಾತಾಪೀಪುರದ ಬಯಲಿನಲ್ಲಿ ನಡೆಯುತ್ತಿರುವ ಕುದುರೆಯ ಶರ್ಯತ್ತುಗಳು (ಜೂಜುಗಳು) ಬಹು ಪ್ರೇಕ್ಷಣೀಯವಾಗಿರುತ್ತವೆ. ಚಪಲಗತಿಯುಳ್ಳವೆಂದು ಹೆಸರಾದ ಕುದುರೆಗಳು ಆ ಶರ್ಯತ್ತಿಗೆ ಬರದೆ ಉಳಿಯುವದಿಲ್ಲ. ಗೆದ್ದ ಕುದುರೆಯ ಯಜಮಾನನು ಹತ್ತು ಹನ್ನೆರಡು ಸಾವಿರ ರೂಪಾಯಿಗಳನ್ನು ಉಡಿಯಲ್ಲಿ ಕಟ್ಟಿಕೊಳ್ಳುವನು. ಇದಲ್ಲದೆ ಹೀಗೆ ಜಿದ್ದಿನಿಂದ ಓಡುತ್ತಿರುವ ಕುದುರೆಗಳಲ್ಲಿ ಯಾವದು ಗೆದಿಯುವದು ಯಾವದು ಬಿಡುವದೆಂಬ ಮಾತಿನ ಬಗ್ಗೆ ಅನೇಕ ಜನ ದುರ್ನೀತರು ಅವಾಂತರವಾದ ಜಿದ್ದುಗಳನ್ನು ಕಟ್ಟುವದುಂಟು."

"ಹೇಗೆ? ಹೇಗೆ?" ಎಂದು ನಾನು ಪ್ರಶ್ನೆ ಮಾಡಿದೆನು.

"ಕೇಳಿರಿ. ಬೆಳ್ಳೀಚಿಕ್ಕೆಯೆಂಬ ಕುದುರೆಯು ಮುಂದೆ ಬರುವದೋ 'ಗಾಳಿಯ ಮಿಂಡ'ನೆಂಬ ಬೇರೊಂದು ಕುದುರೆಯು ಮುಂದೆ ಬರುವದೋ ಎಂಬದೊಂದು ಪ್ರಶ್ನವು. 'ಗಾಳಿಯ ಮಿಂಡನು ಮುಂದೆ ಬರುವನು; ನೂರು ನೂರು ರೂಪಾಯಿ ಜಿದ್ದು' ಎಂದು ಕೆಲವರು ಪ್ರತಿಪಾದಿಸುವರು. 'ಅದೇಕೆ, ಬೆಳ್ಳೀಚಿಕ್ಕೆಯೇ ಮುಂದೆ ಬರುವದು; ಇನ್ನೂರು ಇನ್ನೂರು ರೂಪಾಯಿ ಜಿದ್ದು;' ಎಂದು ಬೇರೆ ಕೆಲವರು ಪ್ರತಿಪಾದಿಸುವರು. ಹೀಗೆ ಅವಾಂತರವಾಗಿ ಜೂಜು ಕಟ್ಟುವವರ ಹೆಸರುಗಳನ್ನೂ ಅವರು ಕಟ್ಟಿದ ಜೂಜಿನ ಹಣದ ಪರಿಮಿತಿಯನ್ನೂ ತಮ್ಮ ಪುಸ್ತಕದಲ್ಲಿ ಬರೆದಿಟ್ಟುಕೊಳ್ಳುವವರಾದ ಪಂಚರೂ ಅಲ್ಲಿ ಸಿದ್ಧರಾಗಿಯೇ ಇರುತ್ತಾರೆ. ಗೆದ್ದವರು ತಮಗೆ ಸಿಕ್ಕ ಹಣದಲ್ಲಿ, ನೂರಕ್ಕೆ ಐದೋ ಹತ್ತೋ ಹೀಗೆ, ಕೆಲವು ಭಾಗವನ್ನು ಪಂಚರ ಮಾನಪಾನವೆಂದು ಕೊಡುವ ಪರಿಪಾಠವೂ ಉಂಟು. ಹೀಗಾಗಿ ಬೆಳ್ಳಿಯ ಚಿಕ್ಕೆಯು ಹಿಂದಾಗಬೇಕೆಂದು ಬಯಸುವವರೂ ಅನೇಕ ಜನ, ಗಾಳಿಯ ಮಿಂಡನು ಹಿಂದಾಗಬೇಕೆಂದು ದೇವರಿಗೆ ಬೇಡಿಕೊಳ್ಳುವವರೂ ಅನೇಕ ಜನ."

"ನಿರುದ್ಯೋಗಿಗಳಿಗೆ ಇದೊಂದು ಉದ್ಯೋಗವೇ ಆಯಿತೆಂದೆನ

ಬೇಕು.” ಎಂದು ನಾನು ಅಭಿಪ್ರಾಯಪಟ್ಟು ನಕ್ಕೆನು.

“ಸರಿ ಸರಿ. ಇಂಥ ಸಂದಿಸಲ್ಲಿ ಪುತ್ತಿನಂತಿರುವ ಆ ಬೆಳ್ಳೀ ಚಿಕ್ಕೆಯು ಅಕಸ್ಮಾತ್ತಾಗಿ ಕಳ್ಳರ ಪಾಲಾಗಿ ಹೋದ ವರ್ತಮಾನವನ್ನು ಕೇಳಿ ಅನೇಕ ಜನರ ಚಿತ್ತಗಳು ಸಂಕ್ಷುಬ್ಧವಾಗಿಹೋಗಿವೆ. ನಾಮಾಂಕಿತವಾದ ಕುದುರೆಯು; ಅದರ ಯಜಮಾನನು ಬಹುಜನಕ್ಕೆ ಬೇಕಾದವನಾದ ಶ್ರೀಮಂತನು. ಶರ್ಯತ್ತುಗಳನ್ನು ನೋಡುವ ಕುತೂಹಲವುಳ್ಳ ಜನರ ಎಣಿಕೆಯಿಲ್ಲ. ಆದ್ದರಿಂದ ಬೆಳ್ಳೀಚಿಕ್ಕೆಯು ಇಲ್ಲದಾದ ಸಂಗತಿಯನ್ನು ಕುರಿತು ಅನೇಕರು ಅನೇಕವಾದ ತರ್ಕಗಳನ್ನು ಕಟ್ಟುವರು. ದ್ವೇಷಗಳನ್ನು ಸಾಧಿಸಿ ಕೊಳ್ಳುವವರು ಇದೇ ಸಮಯವೆಂದರಿತು ಕೆಲಜನರು ತಮಗೆ ಬೇಡಾದ ಜನರ ಮೇಲೆ ಇಲ್ಲದ ಆರೋಪಗಳನ್ನು ಹೊರಿಸಲು ಹಿಂದೆಮುಂದೆ ನೋಡಿಲ್ಲ. ವರ್ತಮಾನಪತ್ರಕಾರರಾದರೂ ತಮ್ಮ ಪತ್ರಗಳಲ್ಲಿ ಹೊಸ ಸುದ್ದಿಯನ್ನು ಕೊಟ್ಟು ಖ್ಯಾತಿಯನ್ನು ಕಟ್ಟಿಕೊಳ್ಳುವ ಅಭಿಲಾಷೆಗಾಗಿ ಅಡಗುಲಜ್ಜಿಯ ಮನೆಯಲ್ಲಿ ಹುಟ್ಟಿದ ಸುದ್ದಿಗಳನ್ನೆತ್ತಿಕೊಂಡು ಅವುಗಳಿಗೆ ಉಪ್ಪುಕಾರ ತಗಲಿಸಿ ಸತ್ಯದ ವಿಪರ್ಯಾಸವನ್ನು ಮಾಡಿಬಿಡುವರು. ತಿಳಿಗೇಡಿಯಾದ ಸ್ನೇಹಿತ ನೊಬ್ಬನು ‘ಸಾಧು ಎಡಿಟರರೆ, ನಿಮ್ಮ ಲೇಖವು ಅಪ್ರತಿಮವಾಗಿದೆ’ ಎಂದು ಎಡಿಟರನಿಗೆ ಪತ್ರವನ್ನು ಬರೆದಿದ್ದರೆ ಆ ಎಡಿಟರನು ಆ ಪತ್ರವನ್ನು ಕಂಡ ಕಂಡವರಿಗೆ ಅಕ್ಕರತೆಯಿಂದ ತೋರಿಸಿ ಜನರಿಂದ ಧನ್ಯವಾದವನ್ನು ಪಡೆಯು ವನು. ಅದಕ್ಕಾಗಿ ‘ವೃತ್ತವಿಪರ್ಯಾಸ’ ‘ಸುದ್ದಿಯ ಸೂರಕ್ಕ’ ಮುಂತಾದ ವರ್ತಮಾನ ಪತ್ರಗಳಲ್ಲಿಯ ಲೇಖಗಳಿಗೆ ಮಹತ್ವವನ್ನು ಕೊಡಲಾಗದು” ಎಂದು ಹೇಳಿ ಹುಲಿಮಿಾಸೆಯು ಹೊಗೆಸೊಪ್ಪಿನ ಬತ್ತಿಗಳನ್ನು ತೆಗೆದು ತಾನೊಂದು ಸೇದಿ ನನಗೊಂದು ಕೊಟ್ಟನು.

ಧೂಮ್ರಪಾನವು ಯಥೇಚ್ಛವಾಗಿ ಸಾಗಿದ ಬಳಿಕ “ನಿಮಗೆ ತಿಳಿದಿರುವ ಸಮಾಚಾರವು ಎಂತಿರುವದು?” ಎಂದು ನಾನು ನನ್ನ ಮಿತ್ರನನ್ನು ಕೇಳಿದನು.

“ಕೇಳಿರಿ: ಸೋಮವಾರ ದಿನ ಸಾಯಂಕಾಲದಲ್ಲಿ ಠಾಕೂರಸಿಂಗನು ಆ ಕುದುರೆಯನ್ನು ಹೊರಗೆ ತೆಗೆದು ಆಡ್ಡಾಡಿಸಿಕೊಂಡು ಬಂದನು. ಬಳಿಕ ಅದರ ಮೈತಿಕ್ಕುವದೂ ಅದಕ್ಕೆ ದಾಣೆ-ಮೇವುಗಳನ್ನಿಡುವದೂ ಆಯಿತು.

ಪ್ರಹರ ರಾತ್ರಿಯಾದ ಬಳಿಕ ಠಾಕೂರಸಿಂಗನು ಕಾವಲುಗಾರರಲ್ಲಿ ಇಬ್ಬರನ್ನು ತನ್ನ ಮನೆಗೆ ಊಟಕ್ಕೆ ಕರಕೊಂಡು ನಡೆದನು. ಕುದುರೆಯ ಲಾಯದ ಮನೆಯಿಂದ ಠಾಕೂರಸಿಂಗನ ಮನೆಯು ಒಂದು ಕೂಗಳತೆಯ ಮೇಲಿತ್ತು. ಇವರು ಹೋದ ಬಳಿಕ ಲಾಯದ ಮನೆಯಲ್ಲಿ ಉಳಿದವನಾದ ಗಂಗಾದೀನನೆಂಬ ಮೂರನೆಯ ಕಾವಲುಗಾರನು ಮನೆಯ ಬಾಗಿಲವನ್ನು ಭದ್ರವಾಗಿ ಇಕ್ಕಿ ಬೀಗವನ್ನು ಜಡೆದನು. ಬೆಳ್ಳೀ ಚಿಕ್ಕೆಯು ಇಲ್ಲಿಯ ವರೆಗೆ ತನ್ನ ಗೋದಲೆಯಲ್ಲಿ ಸುರಕ್ಷಿತವಾಗಿಯೇ ಇತ್ತು. ಠಾಕೂರಸಿಂಗನ ಭೋಜನವಾದ ಬಳಿಕ ಗಂಗಾದೀನನ ತಂಗಿಯಾದ ಮಥುರಾ ಎಂಬ ಹದಿನಾರು ಹದಿನೇಳು ವರ್ಷದ ಹುಡಿಗೆಯು ಕೈಯಲ್ಲಿ ಕಂದೀಲು ಹಿಡಿದುಕೊಂಡು ತನ್ನ ಅಣ್ಣನಿಗಾಗಿ ಬುತ್ತಿಯನ್ನು ತೆಗೆದುಕೊಂಡು ನಡೆದಿದ್ದಳು. ಮಥುರೆಯು ಲಾಯದ ಸಮೀಪಕ್ಕೆ ಬರುವಷ್ಟರಲ್ಲಿ ಯಾವನೋ ಒಬ್ಬ ಮನುಷ್ಯನು ‘ ಹುಡುಗೀ ತುಸು ನಿಲ್ಲು ’ ಎಂದು ಕೂಗಿ ಅವಳನ್ನು ನಿಲ್ಲಿಸಿದನು. ಅವನು ಮುಸಲ್ಮಾನನು. ಅವನ ತುಮಾನ್ (ಚಲ್ಲಣ) ಅವನ ಶೇರವಾನ್ (ಉದ್ದಂಗಿ) ಅವನ ಮುಂದೀಲ (ಮುಂಡಾಸ) ಮುಂತಾದುಗಳನ್ನು ನೋಡಲಾಗಿ ಅವನು ಒಳ್ಳೇ ಮನೆತನಸ್ಥನಾಗಿ ತೋರಿದನು. ಅವನ ವಯಸ್ಸು ಸುಮಾರು ಮೂವತ್ತು ಆದೀತು.

‘ ತಂಗೀ, ಈ ಹಾದಿಯು ಎಲ್ಲಿಗೆ ಹೋಗುತ್ತದೆಂಬುದನ್ನು ನೀನು ಹೇಳಬಲ್ಲಿಯಾ ? ನಾನೊಂದು ಕಡೆಗೆ ಹೊರಟವನು ಹಾದಿಯನ್ನು ಕಳಕೊಂಡು ಹುಚ್ಚನ ಹಾಗೆ ತಿರುಗಾಡುತ್ತಿರುವೆನು ’ ಎಂದು ಆ ಮುಸಲ್ಮಾನನು ಕೇಳಿದನು.

‘ ಇದು ಸುಭೇದಾರ ರಾಸಬಿಹಾರಿಯವರ ಕುದುರೆಯ ಲಾಯಕ್ಕೆ ಹೋಗುವ ಹಾದಿಯು.’

‘ ದೈವವೇ ಕೂಡಿಸಿಕೊಟ್ಟಂತಾಯಿತಲ್ಲ; ನನಗೆ ಅಲ್ಲಿಯೂ ಒಂದು ಕೆಲಸವುಂಟು. ಆ ಲಾಯವನ್ನು ಕಾಯುವದಕ್ಕೆ ಅಲ್ಲಿ ಬೆಳತನಕ ಒಬ್ಬ ಹುಡುಗನು ಮಲಗಿರುವನಂತೆ. ನೀನು ಅವನಿಗಾಗಿ ಬುತ್ತಿಯನ್ನು ತೆಗೆದುಕೊಂಡು ನಡೆದಿರುವಿಯೇನು ? ’

‘ ಅಹುದು; ಅವನು ನನ್ನ ಅಣ್ಣನಾದ ಗಂಗಾದೀನನು. ಅವನಿಗಾಗಿ

ನಾನು ಈ ಬುತ್ತಿಯನ್ನು ಒಯ್ಯುತ್ತಿರುವೆನು.”

‘ ಹಾಗಾದರೆ ನೀನೊಂದು ಕೆಲಸ ಮಾಡುವಿಯಾ ? ಈ ಕಾಗದವನ್ನು ನೀನು ನಿಮ್ಮ ಅಣ್ಣನಿಗೆ ಮುಟ್ಟಿಸಿದರೆ ನಾಳೆ ಮುಂಜಾನೆ ನಾನು ನಿನಗೊಂದು ರೇಸಿಮೆಯ ಅಂಚಿನ ಹೂವಿನ ಸೀರೆಯನ್ನು ಕಾಣಿಕೆಯಾಗಿ ಕೊಡುವೆನು. ಬೇಕಾದರೆ ಹತ್ತು ರೂಪಾಯಿಗಳನ್ನು ಈಗಲೇ ತೆಗೆದುಕೋ, ’ ಎಂದು ಆ ಮುಸಲ್ಮಾನ ಗೃಹಸ್ಥನು ನುಡಿದು ತನ್ನ ಜೇಬಿನೊಳಗಿಂದ ಕಾಗದದ ಚೀಟಿಯನ್ನು ತೆಗೆಯಲಾರಂಭಿಸಿದನು. ಆ ಕಾಗದದ ಬಿಳಿ ಚುಂಗನ್ನು ತಾನು ಪ್ರತ್ಯಕ್ಷವಾಗಿ ನೋಡಿದೆನೆಂದು ಮಥುರೆಯು ಪ್ರಮಾಣ ಮಾಡಿ ಹೇಳಿ ರುತ್ತಾಳೆ.

ಆತನ ನಡೆನುಡಿಗಳನ್ನು ನೋಡಿ ಮಥುರೆಯು ಬೆದರಿ ಲಾಯದ ಕಡೆಗೆ ಓಡುತ್ತ ಹೋಗಿ ಆವಾರದ ಗೋಡೆಯ ಹೊರಗೆ ನಿಂತು ಕಿಟಿಕೆಯಲ್ಲಿಂದ ಬುತ್ತಿಯ ಗಂಟನ್ನು ಒಳಗೆ ಚಾಚಿದಳು. ಕಿಟಕಿಯಲ್ಲಿಯೇ ನಿಂತು ಬುತ್ತಿ ಬರುವ ಹಾದಿಯನ್ನು ನೋಡುತ್ತಿರುವವನಾದ ಗಂಗಾದೀನನು ಆ ಗಂಟನ್ನು ಸಂಗಡಲೇ ಒಳಕ್ಕೆ ಎಳಕೊಂಡನು. ಮಥುರೆಯು ಮುಸಲ್ಮಾನನ ಸುದ್ದಿಯನ್ನು ಹೇಳಲುಪಕ್ರಮಿಸುವಷ್ಟರಲ್ಲಿಯೇ ಅವನಾದರೂ ಅಲ್ಲಿಗೆ ಬಂದುಬಿಟ್ಟನು.

‘ ಸಲಾಮ್ ಗಂಗಾದೀನ. ನಿನ್ನೊಡನೆ ಕೆಲವು ಮಾತನಾಡಬೇಕೆಂದು ನಾನು ಬಂದಿದ್ದೇನೆ ’ ಎಂದು ಮುಸಲ್ಮಾನನು ಕೇಳಿದನು.

‘ ವನ್ನೊಡನೆ ಯಾತರ ಮಾತು ಸಾಹೇಬರೆ ? ’ ಎಂದು ಗಂಗಾದೀನನು ತಿರಸ್ಕಾರದಿಂದ ಕೇಳಿದನು.

‘ ನಿನಗೆ ಹಿತವಾದ ಮಾತು. ಕೈಯಲ್ಲಿ ಹಾಕಿಕೊಳ್ಳಲು ಬೆಳ್ಳಿಯ ಕಡೆ ಸರಪಣಿಗಳು ಸಿಕ್ಕರೆ ಹಿತದ ಮಾತಾಗಲಿಕ್ಕಿಲ್ಲವೆ ? ನಿಮ್ಮಲ್ಲಿ ‘ಬೆಳ್ಳಿಯ ಚಿಕ್ಕೆ’ಯೆಂದೂ ‘ ಕಡಿದ ಬಂಟೆ ’ನೆಂದೂ ಎರಡು ಕುದುರೆಗಳಿವೆಯಷ್ಟೆ? ಬೆಳ್ಳಿಯ ಚಿಕ್ಕೆಯ ತಡಿಯನ್ನು ಕಡಿದ ಬಂಟನಿಗೂ ಕಡಿದ ಬಂಟನ ತಡಿಯನ್ನು ಬೆಳ್ಳಿಯ ಚಿಕ್ಕೆಗೂ ಹಾಕಿದರೆ ಒಂದು ಕೂಗಳತೆ ಓಡುವಷ್ಟರಲ್ಲಿ ಬೆಳ್ಳಿಯ ಚಿಕ್ಕೆಯು ಹಿಂದಾಗುವದೆಂದು ಹೇಳುತ್ತಾರೆ. ಅಹುದೇನು ? ’

‘ ಈ ಉಸಾಬರಿ ನಿಮಗೇಕೆ ಬೇಕು, ಸುಮ್ಮನೆ ಹಾದೀ ಹಿಡಿಯಿರಿ. ’ ಎಂದು ಗಂಗಾದೀನನು ಸಿಟ್ಟುಮಾಡಿದನು.

‘ ಹಾಗಲ್ಲ, ಈ ರಹಸ್ಯವನ್ನರಿತವರು ಬೆಳ್ಳಿಯ ಚಿಕ್ಕೆಯು ಹಿಂದುಳಿಯುವದೆಂದು ಜಿದ್ದು ಕಟ್ಟಿರುವರಂತೆ. ಈ ರಹಸ್ಯವು ನಿಜವಾದದ್ದೋ ? ’

‘ ಓ ! ತಾವು ಜೂಜುಗಾರರ ಒಳಸಂಚಿನವರೋ ? ದಯಮಾಡಿರಿ, ಸಲಾಮ್. ನೀವೀಗಲೆ ಇಲ್ಲಿಂದ ಕಾಲು ತೆಗೆಯದಿದ್ದರೆ ನಾಯಿಯನ್ನು ಛೂ ಬಿಡುವೆನು. ಹೊಟ್ಟೆ ಹರಿಸಿಕೊಂಡು ಸತ್ತೀರಿ, ಎದ್ದೇಳಿರಿ ’ ಎಂದು ನುಡಿದವನೇ ಗಂಗಾದೀನನು ಲಾಯದ ಬಾಗಿಲವನ್ನು ಗಡಕ್ಕನೇ ತೆರೆದು ನಾಯಿಯನ್ನು ಛೂ ಬಿಟ್ಟನು. ಅಷ್ಟರಲ್ಲಿ ಆ ಮುಸಲ್ಮಾನನು ಜಾರಿಕೊಂಡು ಪಾರಾಗಿದ್ದನು. ಗಂಗಾದೀನನು ಅವನನ್ನು ಅತ್ತಿತ್ತ ಹುಡುಕಿದನು. ”

ಸರಲಾಕ್ಷನು ಇಷ್ಟು ಸಂಗತಿಯನ್ನು ಹೇಳಿದ ಕೂಡಲೆ ನಾನು ( ಪಂಡಿತ ವಾತಾತ್ಮಜ ) ಅವನನ್ನು ತಡೆದು “ ನಿಲ್ಲಿರಿ, ನಾನೊಂದು ಮಾತು ಕೇಳುತ್ತೇನೆ : ಗಂಗಾದೀನನು ಆ ಮುಸಲ್ಮಾನನನ್ನು ಹುಡುಕುತ್ತಿರುವಾಗ ಲಾಯದ ಬಾಗಿಲವನ್ನು ತೆರೆದಿಟ್ಟುಬಿಟ್ಟಿದ್ದನೋ; ಜೋಕೆಯಿಂದ ಮುಚ್ಚಿಕೊಂಡಿದ್ದನೋ ? ”

“ ಓ ! ಸಾಧು ಪಂಡಿತರೆ, ಒಳ್ಳೇ ಚಾಣಾಕ್ಷರಂತೆ ಪ್ರಶ್ನೆ ಮಾಡಿದಿರಿ. ನಿನ್ನೆಯೇ ಈ ವಿಚಾರವು ನನಗೆ ತಟ್ಟಿದ್ದರಿಂದ ನಾನು ತಂತಿಯ ಮುಖಾಂತರವಾಗಿ ಈ ಪ್ರಶ್ನದ ಉತ್ತರವನ್ನು ತರಿಸಿಕೊಂಡಿದ್ದೇನೆ. ಗಂಗಾದೀನನು ಬಾಗಿಲವನ್ನು ಮುಚ್ಚಿ ಹೊರಕೀಲಿಯನ್ನು ಹಾಕಿಯೇ ಆ ಮುಸಲ್ಮಾನನ ಶೋಧಕ್ಕಾಗಿ ಅಡ್ಡಾಡಿದನಂತೆ. ಕಿಟಿಕೆಯಲ್ಲಂತೂ ಮನುಷ್ಯನು ಹಿಡಿಸುವ ಹಾಗಿಲ್ಲ. ”

“ ಸಾಗಲಿ ಹಾಗಾದರೆ ನಿಮ್ಮ ಸಮಾಚಾರ, ” ಎಂದು ಹೇಳಿ ನಾನು ಮತ್ತೊಂದು ಬತ್ತಿಯನ್ನು ಹೊತ್ತಿಸಿದೆನು.

“ ಉಳಿದ ಕಾವಲುಗಾರರು ಉಂಡು ಬರುವ ಹಾದಿಯನ್ನು ನೋಡಿ ಗಂಗಾದೀನನು ಅವರೊಡನೆ ನಡೆದ ವರ್ತಮಾನವನ್ನೆಲ್ಲ ಠಾಕೂರಸಿಂಗನಿಗೆ ಹೇಳಿ ಕಳಿಸಿದನು. ಆ ವರ್ತಮಾನವನ್ನು ಕೇಳಿ ಠಾಕೂರಸಿಂಗನಿಗೆ ಪರಮಾವಧಿಯ ಸಂತಾಪವಾಯಿತು. ಮನೆಯಲ್ಲಿಯೇ ಕುಳಿತು ಅವನು ಬಂದ ಹಾಗೆ ಒದರಾಡಿದನು. ಠಾಕೂರಸಿಂಗನ ವಿಲಾಸಿನಿಯಾದ ಭಾರ್ಯೆಯು ಮೋಹಕವಾದ ವಿಲಾಸಚೇಷ್ಟಿತಗಳಿಂದಲೂ ಸಮಾಧಾನದ ಸವಿನುಡಿ

ಗಳಿಂದಲೂ ಗಂಡನ ಮನಸ್ಸನ್ನು ವಿನೋದಕ್ಕೆಳಿಸಬೇಕೆಂದು ಬಹುಪರಿಯಾಗಿ ಯತ್ನಮಾಡಿದರೂ ಪ್ರಯೋಜನವಾಗಲಿಲ್ಲ. ಕುವರಬಾಯಿಯು ಗಂಡನ ಗೊಡವೆಯನ್ನು ಬಿಟ್ಟು ಪಿಯಾನೋದ ಪೇಟಿಯನ್ನು ತೆಗೆದು ಮೆಲ್ಲನೆ ಹಾಡಲಾರಂಭಿಸಿದಳು. ಇತ್ತ ಠಾಕೂರಸಿಂಗನು ವೀರಗಚ್ಚೆಯ ದೋತರವನ್ನುಟ್ಟು ಬೇಟೆಗಾರನ ಪೋಷಾಕು ಮಾಡಿಕೊಂಡು ಮೇಲೆ ದೊಡ್ಡದೊಂದು 'ಜುಬ್ಬಾ' (ದೊಡ್ಡ ಡಗಲೆ)ಯನ್ನು ವೈತುಂಬ ಹೊದ್ದುಕೊಂಡು ರಾತ್ರಿಯ ಮೂರನೆಯ ಯಾಮವು ಅರ್ಧಕಳೆದ ಮೇಲೆ ಮನೆಬಿಟ್ಟು ಹೊರಬಿದ್ದು ಹೋದದ್ದನ್ನು ಕುವರಬಾಯಿಯು ತಾನು ಪ್ರತ್ಯಕ್ಷವಾಗಿ ಕಂಡಿರುವದಾಗಿ ಹೇಳುತ್ತಾಳೆ. ಆಗ ಹೋದ ಠಾಕೂರಸಿಂಗನು ಮರಳಿ ಮನೆಗೆ ಬರಲೇ ಇಲ್ಲ. ಬೆಳಗಾದರೂ ಗಂಡನು ಬರಲಿಲ್ಲವೆಂಬದನ್ನು ಕಂಡು ಕುವರಬಾಯಿಯು ಚಿಂತಾಕ್ರಾಂತಳಾಗಿ ಮಥುರೆಯನ್ನು ಸಂಗಡ ಕರಕೊಂಡು ಲಗಬಗೆಯಿಂದ ಕುದುರೆಯ ಲಾಯಕ್ಕೆ ಬಂದಳು. ಲಾಯದ ಬಾಗಿಲು ಹಾರದೆಗೆದಿತ್ತು. ಒಳೆ ಮಗ್ಗಲು ಪಡಸಾಲೆಯಲ್ಲಿ ಗಂಗಾದೀನನು ಮದ್ದು ತಿಂದವನ ಹಾಗೆ ಪ್ರಜ್ಞೆಯಿಲ್ಲದೆ ಅಸ್ತವ್ಯಸ್ತನಾಗಿ ಬಿದ್ದುಕೊಂಡಿದ್ದನು. ಕಟ್ಟಿದ ಸ್ಥಳದಲ್ಲಿ ಬೆಳ್ಳೀಚಿಕ್ಕೆಯೂ ಇದ್ದಿಲ್ಲ. ಅಶ್ವರಕ್ಷಕನಾದ ಠಾಕೂರಸಿಂಗನ ವಾರ್ತೆಯೂ ಇಲ್ಲ. ಎಚ್ಚರದಿಂದ ಕಾಯುವ ಸರತಿಯಿಲ್ಲದವರಾದ ಬೇರಿಬ್ಬರು ಆಳುಗಳು ಕಡಲೆಯ ಗಳಿಗಳ ಸಂದಿಯಲ್ಲಿ ಸ್ವಸ್ಥವಾಗಿ ಮಲಗಿಕೊಂಡು ನಿದ್ದೆ ಮಾಡುತ್ತಿದ್ದರು. ಅವರನ್ನು ಎಚ್ಚರಿಸಿ ಕೇಳಲಾಗಿ ಅವರು ತಮಗೆ ಏನೂ ಗೊತ್ತಿಲ್ಲವೆಂದು ಹೇಳಿದರು. ಘನನಿದ್ದೆಯವರವರು! ಗಂಗಾದೀನನನ್ನು ಬಡಿದೆಬ್ಬಿಸಿ ನೋಡಿದರು. ಸುತ್ತಿಸುತ್ತಿಕೊಂಡು ಬೀಳುತ್ತಿದ್ದನೇ ಹೊರತಾಗಿ ಜನರು ತನ್ನನ್ನು ಮಾತಾಡಿಸುತ್ತಿರುವರೆಂಬ ಪ್ರಜ್ಞೆಯೇ ಅವನಿಗಿಲ್ಲ. ಅವನ ಹಾದಿಯನ್ನು ಬಿಟ್ಟು ಉಳಿದವರೆಲ್ಲರೂ ಆ ಅಶ್ವಪಾಲಕನ ಶೋಧಕ್ಕಾಗಿ ಕಂಡಕಂಡ ಕಡೆಗೆ ಓಡಲಾರಂಭಿಸಿದರು.

"ಲಾಯದಿಂದ ಸುಮಾರು ಎರಡು ಕೈಗಲ್ಲು ಅಳತೆಯ ಮೇಲೆ ಒಂದು ಆಳವಾದ ಕೊನ್ನಾರವಿತ್ತು. (ದೊಡ್ಡದೊಂದು ತಗ್ಗು) ಆ ಕೊನ್ನಾರದ ದಡದ ಮೇಲಿರುವದೊಂದು ಹುಲಗಲದ ಗಿಡಕ್ಕೆ ಯಾರದೋ ಒಂದು ಡಗಲೆಯು ಜೋತಾಡುತ್ತಿರುವದನ್ನು ಒಬ್ಬನು ಕಂಡನು. ಆದು ಠಾಕೂರ

ಸಿಂಗನ ಡಗಲಿಯೇ ಎಂದು ಗೊತ್ತುಹಿಡಿದು ಆ ಮನುಷ್ಯನು ಅಲ್ಲಿ ನಿಂತು ಸುತ್ತಲೂ ನಿರೀಕ್ಷಿಸಿ ನೋಡಲಾಗಿ ಯಾರದೋ ಒಂದು ಹೆಣವು ಕಂಡಿತು. ಪಾಪ, ಅದು ಠಾಕೂರಸಿಂಗನದೇ. ಬಲವಾದ ಟೊಣಪೆಯಂಥ ಹೊಡೆತದಿಂದ ಠಾಕೂರನ ತಲೆಯು ಒಡೆದು ಚಿಪ್ಪಾಡೆಯಾಗಿತ್ತು. ಚೂರಿಯ ಹೊಡೆತದಿಂದ ಅವನ ತೊಡೆಗಾದರೂ ಒಂದು ಗಾಯವಾಗಿತ್ತು. ಠಾಕೂರಸಿಂಗನಾದರೂ ತನ್ನನ್ನು ಕೊಲ್ಲಬಂದವನನ್ನು ತನ್ನ ಕೈಯಲ್ಲಿರುವ ಚಿಕ್ಕ ಶಸ್ತ್ರದಿಂದ ಇರಿದಿದ್ದನಾಗಿ ತೋರಿತು. ಯಾಕೆಂದರೆ ಅವನ ಕೈಯಲ್ಲಿ ಚಾಕುವಿನಂಥದೊಂದು ತೀಕ್ಷ್ಣವಾದ ಶಸ್ತ್ರವಿಸ್ದು ಅದರ ತುದಿಗೆ ರಕ್ತವು ಮೆತ್ತಿಕೊಂಡು ಕರಣೆಗಟ್ಟಿತ್ತು. ಠಾಕೂರನು ತನ್ನ ಎಡಗೈಯಲ್ಲಿ ರೇಸಿಮೆಯ ಗದ್ದೇಮಡಿಯ ಹೆಗಲವಸ್ತ್ರವನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದನು. ಆ ವಸ್ತ್ರವನ್ನು ಕಂಡಾಕ್ಷಣವೇ ಮಥುರೆಯು ಚಕಿತಳಾಗಿ 'ಅಯ್ಯೋ ಈ ವಸ್ತ್ರವನ್ನು ನಾನು ನಿನ್ನೆ ರಾತ್ರಿ ಆ ಮುಸಲ್ಮಾನನ ಹೆಗಲ ಮೇಲೆ ಕಂಡಿದ್ದೆನು' ಎಂದು ಹೇಳಿದ್ದಲ್ಲದೆ 'ಅವನೇ ಈ ಘೋರವಾದ ಕೃತ್ಯವನ್ನು ಮಾಡಿರಬಹುದು. ಯಾಕೆಂದರೆ ಅವನ ಕೈಯಲ್ಲಿ ಒನಕೆಯಂಥ ಭಾರವಾದ ದೊಣ್ಣೆಯೂ ಇತ್ತು' ಎಂದು ಪ್ರಮಾಣ ಮಾಡಿ ಹೇಳಿದಳು.

"ಈ ವಸ್ತ್ರವೇ ಆ ಮುಸಲ್ಮಾನನ ಹೆಗಲಮೇಲಿತ್ತೆಂದು ಗಂಗಾದೀನನಾದರೂ ನಿಶ್ಚಿತವಾಗಿ ಹೇಳಿದನು. ಅವನೇ ತನ್ನ ಬುತ್ತಿಯಲ್ಲಿ ಮದ್ದು ಕಲಿಸಿರಬಹುದೆಂದು ಕೂಡಾ ಗಂಗಾದೀನನ ನಂಬಿಗೆಯು.

"ಠಾಕೂರಸಿಂಗನ ಕೊಲೆಯಾದ ಸಮಯದಲ್ಲಿ ಕುದುರೆಯು ಅವನ ಬಳಿಯಲ್ಲಿಯೇ ನಿಂತಿತ್ತೆಂದು ಅಲ್ಲಿ ಮೂಡಿರುವ ಹೆಜ್ಜೆಗಳಿಂದ ನಿರ್ವಿವಾದವಾಗಿ ಊಹಿಸಬಹುದು. ಅರ್ಥಾತ್ ಆ ಕುದುರೆಯನ್ನು ಅಪಹರಿಸಿದವನ ಬೆನ್ನಟ್ಟಿ ಹೋಗಿ ಠಾಕೂರಸಿಂಗನು ಪ್ರಾಣವನ್ನು ಕಳಕೊಂಡನೆಂದು ಕೊತವಾಲ ಕೃಷ್ಣಭುಜಂಗನ ತರ್ಕವಾಗಿದೆ. ಅವರು ಆ ಸಂದೇಹದ ಮೇಲಿಂದಲೇ ಪಪ್ಪಳಿ ವಸ್ತ್ರದವನಾದ ಮಹಮ್ಮದ ಇಬ್ರಾಹಿಮನೆಂಬ ಲಬ್ಬೇರವನನ್ನು ಹಿಡಿದು ಕೂಡಿಸಿದ್ದಾರೆ. ಇಷ್ಟು ಸಂಗತಿಗಳೆಲ್ಲ ಸಾಕ್ಷಿಗಳಿಂದ ಸಿದ್ಧವಾಗಿವೆ."

"ತನ್ನ ಮೇಲಿನ ಆರೋಪವನ್ನು ನಿವಾರಿಸಿಕೊಳ್ಳಲು ಮಹಮ್ಮದ ಇಬ್ರಾಹಿಮನು ಏನಾದರೂ ಸಯುಕ್ತಿಕವಾದ ಸಮಾಧಾನಗಳನ್ನು ಹೇಳುವ

ನೇನು ? ” ಎಂದು ನಾನು ಕೇಳಿದೆನು.

“ ಮಹಮ್ಮದ ಇಬ್ರಾಹಿಮನು ಮನೆತನಸ್ಥನೂ ಸುಶಿಕ್ಷಿತನೂ ಆದ ಗೃಹಸ್ಥನು. ಇವನು ಕುದುರೆಗಳ ಶರ್ಯತ್ತಿನಲ್ಲಿ ದುಡ್ಡೆಲ್ಲ ಹಾಳುಮಾಡಿಕೊಂಡು ಈಗೀಗ ಶರ್ಯತ್ತಿನ ಅವಾಂತರ ಜೂಜುಗಾರರ ಪಂಚನಾಗಿ ವ್ಯವಹರಿಸಿ ಅವನು ಹಾಗೂ ಹೀಗೂ ಹೊಟ್ಟೆತುಂಬಿಕೊಳ್ಳುತ್ತಾನೆ. ಬೆಳ್ಳಿಯೂ ಚಿಕ್ಕೆಯೂ ಸೋಲುವದೆಂದು ಪ್ರತಿಪಾದಿಸುವ ಜೂಜುಗಾರರು ಒಟ್ಟಿನಲ್ಲಿ ಐವತ್ತು ಸಾವಿರ ರೂಪಾಯಿಗಳ ಜೂಜುಕಟ್ಟಿರುವದಾಗಿ ಮಹಮ್ಮದ ಇಬ್ರಾಹೀಮನ ಪುಸ್ತಕದ ಮೇಲಿಂದ ಕಂಡುಬರುತ್ತದೆ.

“ ಕೊತವಾಲರ ವಶವಾದ ಬಳಿಕ ಮಹಮ್ಮದ ಇಬ್ರಾಹಿಮನು ತಾನು ಮಥುರೆಯನ್ನು ದಾರಿಯಲ್ಲಿ ಕಂಡದ್ದನ್ನೂ ಗಂಗಾದೀನನೊಡನೆ ಮಾತಾಡಹೋಗಿದ್ದನ್ನೂ ಒಪ್ಪಿಕೊಂಡಿದ್ದಲ್ಲದೆ ಠಾಕೂರನ ಹೆಣದ ಕೈಯ್ದಲ್ಲಿದ್ದ ವಸ್ತ್ರವು ತನ್ನದೇ ಆಗಿದ್ದು ಅದು ತನ್ನ ಹೆಗಲಮೇಲಿಂದ ಜಾರಿಬಿದ್ದು ಹೋದದ್ದು ಠಾಕೂರನ ಕೈಗೆ ಹೇಗೆ ಸಿಕ್ಕಿತೋ ಹೇಳಲಾರೆನೆಂದು ಅವನು ಸೂಚಿಸಿರುವನು.

“ ಠಾಕೂರನ ಕೈಯಲ್ಲಿಯ ಶಸ್ತ್ರಕ್ಕೆ ರಕ್ತವು ಅಂಟಿಕೊಂಡಿದೆ. ಅದರ ಮೇಲಿಂದ ಆತತಾಯಿಯಾದ ಮಹಮ್ಮದ ಇಬ್ರಾಹೀಮನನ್ನು ಆ ಶಸ್ತ್ರದಿಂದ ಇರಿದಿರಬಹುದೆಂಬ ತರ್ಕವಾಗಿದೆ ; ಆದರೆ ಗಾಯವು ಮಹಮ್ಮದ ಇಬ್ರಾಹೀಮನ ಮೈಮೇಲೆ ಇದ್ದಂತೆ ತೋರುವದಿಲ್ಲ ಅರ್ಥಾತ್ ಆ ಮುಸಲ್ಮಾನನ ಮೇಲೆ ಆರೋಪವು ಸ್ಥಾಪಿತವಾಗಲರಿಯದಷ್ಟೆ ? ” ಎಂದು ನಾನು ಕೇಳಿದೆನು.

“ ಸಯುಕ್ತಿಕವಾದ ಪ್ರಶ್ನೆ ಮಾಡಿದಿರಿ ವಾತಾತ್ಮಜ. ಆದರೆ ಠಾಕೂರನು ತನ್ನ ಕೈಚೂರಿಯಿಂದ ಪ್ರತಿಪಕ್ಷಿಯನ್ನು ಇರಿದನೇ ಎಂದು ಗ್ರಹಿಸಲು ಯಾರು ಹೇಳಿರುವರು ? ”

“ ಹಾ ಜ್ಞಾಪಕವಾಯಿತು. ಠಾಕೂರನ ತೊಡೆಗೂ ಒಂದು ಗಾಯವಾಗಿದೆ. ಗುದ್ದಾಟದ ಭರದಲ್ಲಿ ಠಾಕೂರನ ಕೈ ಶಸ್ತ್ರವೇ ಅವನ ತೊಡೆಗೆ ತಗಲಿ ಗಾಯವಾದರೂ ಆಗಿರಬಹುದು. ಹೀಗೆ ತರ್ಕಮಾಡಿದರೆ ಮಹಮ್ಮದ ಇಬ್ರಾಹಿಮನು ತನ್ನ ಮೇಲಿನ ಆರೋಪದ ನಿವಾರಣಾರ್ಥವಾಗಿ

ಮಾಡತಕ್ಕ ವಾದದಲ್ಲಿ ಒಂದು ಮಹತ್ವದ ವಾದವು ನಿರರ್ಥಕವಾಯಿತು ” ಎಂದು ನಾನು ಅಭಿಪ್ರಾಯಪಟ್ಟೆನು.

“ ಹೇಗೆ ತರ್ಕಮಾಡಿದರೂ ಅದಕ್ಕೆ ಸಾಧಕಬಾಧಕಗಳು ಉಂಟೇ ಉಂಟು. ಠಾಕೂರನ ತೊಡೆಗಾದ ಗಾಯವು ಅವನ ಕೈಯಲ್ಲಿರುವ ಶಸ್ತ್ರದಿಂದಲೇ ಆಗಿರಬಹುದೆಂಬ ಮಾತಿನ ವಿಚಾರವನ್ನು ಶವವನ್ನು ಪರೀಕ್ಷಿಸಿದ ಡಾಕ್ಟರನಾಗಲಿ ಕೊತವಾಲರಾಗಲಿ ಮಾಡಿರುವದಾಗಿ ತೋರುವದಿಲ್ಲ. ಇನ್ನು ಅಲ್ಲಿಗೆ ಹೋಗಿ ನಾವು ಹೆಚ್ಚಾಗಿ ಶೋಧಮಾಡಿ ನೋಡಲಾಗಿ ಏನೆಂಬುವದು ತಾನೇ ತೋರುವದು.”

ಪ್ರಹರ ಹೊತ್ತಿರುವದರೊಳಗೆ ನಾವು ವಾತಾಪಿಪುರದ ಸ್ಟೇಶನಕ್ಕೆ ಬಂದೆವು. ಅಲ್ಲಿ ನಮ್ಮ ಸ್ವಾಗತಕ್ಕಾಗಿ ಇಬ್ಬರು ಗೃಹಸ್ಥರು ಬಂದಿದ್ದರು. ಒಬ್ಬನು ಆಜಾನುಬಾಹುವಾದ ಆಳು. ಅವನ ಕಲ್ಲೆಯು ಮೀಸೆಗಳೆಂದರೆ ಎರಡು ಗಂಗಾವನಗಳೇ ಆಗಿದ್ದವು. ಸಶಕ್ತನೂ ತೇಜಸ್ವಿಯೂ ದರ್ಪಶಾಲಿಯೂ ಆಗಿದ್ದ ಆ ಭವ್ಯ ಪುರುಷನ ಮುಖಮುದ್ರೆಯು ಕಿಂಚಿತ್ ಉಗ್ರವಾಗಿ ಕಾಣುತ್ತಿತ್ತು. ಇನ್ನೊಬ್ಬನಾದರೂ ದೃಢಾಂಗನೂ ಎತ್ತರವಾದ ಆಕಾರವುಳ್ಳವನೂ ಆಗಿದ್ದರೂ ಮೊದಲಿನವನ ಮುಂದೆ ಅವನು ಕುರಿಮರಿಯಂತೆ ಕಂಡನು. ಮೊದಲಿನವನೇ ಸುಭೇದಾರ ರಾಸಬಿಹಾರಿಯು. ಮತ್ತೊಬ್ಬನು ಕೊತವಾಲ ಕೃಷ್ಣಭುಜಂಗನು.

“ ರಾಮ ರಾಮ, ಸರಲಾಕ್ಷರಾಯರೆ, ತಮ್ಮ ದರ್ಶನದಿಂದ ನಾನು ಕೃತಾರ್ಥನಾದೆನು. ಇಕೋ ಈ ನನ್ನ ಜೊತೆಗಾರರೇ ಕೃಷ್ಣಭುಜಂಗ ಕೊತವಾಲರು. ಇವರೊಳ್ಳೇ ಸಾಹಸದಿಂದ ನಮ್ಮ ಕುದುರೆಯ ಪ್ರಕರಣದ ಶೋಧವನ್ನು ನಡಿಸಿದ್ದಾರೆ. ನೀವೂ ದಯಮಾಡಿ ಬಂದಿದ್ದೀರಿ. ಹೇಗಾದರೂ ಮಾಡಿ ನಮ್ಮ ಠಾಕೂರಸಿಂಗನನ್ನು ಕೊಂದವನ ಪಾರಿಪತ್ಯವಾಗುವಂತೆಯೂ ಬಂಗಾರದಂತಿರುವ ನನ್ನ ಕುದುರೆಯು ಶೋಧವಾಗುವಂತೆಯೂ ಮಾಡಿರಿ ” ಎಂದು ಸುಭೇದಾರನು ಹೇಳಿದನು.

ಹುಲಿಮೀಸೆಯು ಕೃಷ್ಣಭುಜಂಗನಿಗೆ ಪ್ರಣಾಮಮಾಡಿ “ ಹೊಸ ಶೋಧಗಳೇನಾದರೂ ಆಗಿವೆಯೋ ? ” ಎಂದು ಕೇಳಿದನು.

“ ಹೇಳಿಕೊಳ್ಳುವಂಥ ಹೊಸ ಸಂಗತಿಗಳೇನೂ ಹೊರಬಿದ್ದಿಲ್ಲ.

ಮೊದಲು ಊರಿಗಂತೂ ಹೋಗೋಣ. ಕಣ್ಣು ಬೆಳಕಿರುವಾಗಲೇ ಈ ಪ್ರಾಂತದಲ್ಲಿಯ ಕೆಲವು ರಮಣೀಯ್ಯವಾದ ಪ್ರದೇಶಗಳನ್ನು ಹೋಗಹೋಗುವಾಗ ನೋಡಿಕೊಳ್ಳುವಿರಂತೆ " ಎಂದು ಕೃಷ್ಣಭುಜಂಗನು ಸೂಚಿಸಿದನು.

ಮೇಲ್ಹಟ್ಟು ಇಲ್ಲದ 'ದಮನೀ' ಗಾಡಿಯಲ್ಲಿ ನಾವು ನಾಲ್ವರೂ ಕುಳಿತು ನಡೆದೆವು. ಅಲ್ಲಿಯ ವಿಸ್ತಾರವಾದ ಬೀದಿಯ ಎರಡೂ ಬದಿಗೂ ಬೇವು ಪೆಬ್ಬೇವು ಆಲ ನೇರಿಲ ಮಾಮರ ಮುಂತಾದ ದೊಡ್ಡ ದೊಡ್ಡ ಮರಗಳ ಸಾಲುಗಳು ಅಡವಾಗಿ ಬೆಳೆದು ಬೀದಿಯ ಮೇಲೆ ದಟ್ಟಾದ ನೆಳಲನ್ನು ಕೆಡಹಿದ್ದವು. ಆ ಬೀದಿಯ ಎಡಮಗ್ಗಲಿಗೆ ಗಗನಚುಂಬಿತವಾದ ಕೋಟೆಯ ಗೋಡೆಯಂತೆ ಪರ್ವತಾವಲಿಯು ಅವಿಚ್ಛಿನ್ನವಾಗಿ ಕಾಣುತ್ತಿತ್ತು. ಬಲಗಡೆಗೆ ಸಮತಲವಾದ ಕೆಂಪು ಭೂಮಿಯು ಮಾವು ತೆಂಗು ಈಚಲ ಮುಂತಾದ ಗಿಡಗಳಿಂದ ಬಹು ರಮಣೀಯವಾಗಿ ತೋರುತ್ತಿತ್ತು. ಆಗ ವಸಂತಮಾಸವಿರುವದರಿಂದ ಸಂದಟ್ಟವಾದ ಮಂಜರಿಗಳಿಂದ ಮಾಮರಗಳ ಎಲೆಗಳೆಲ್ಲ ಮುಚ್ಚಿಹೋಗಿದ್ದವು. ಹಸರುಮುರಿಯುವ ಬೇವಿನ ಕೊಂಬೆಗಳಲ್ಲಿ ಸೂಕ್ಷ್ಮವಾಗಿಯೂ ಶುಭ್ರವಾಗಿಯೂ ತೋರುವ ಹೂಗೊಂಚಲುಗಳು ಬಹು ಪ್ರೇಕ್ಷಣೀಯವಾಗಿದ್ದವು. ಬಲಕ್ಕೆ ಆಮ್ರವೃಕ್ಷಗಳಲ್ಲಿ ಕುಳಿತು ಕೂಜಿತವನ್ನು ಮಾಡುವ ಕೋಗಿಲೆಗಳ ಪಂಚಮರಾಗವೂ ಎಡಕ್ಕೆ ಪರ್ವತಾಗ್ರಗಳಲ್ಲಿ ನಿಂತು ನರ್ತಿಸುತ್ತಿರುವ ಮಯೂರಗಳ ಕೇಕೆಯೂ ಬಹು ಚಿತ್ತರಂಜಕವಾಗಿದ್ದವು.

" ಕಣ್ಣುಕಿವಿಗಳೆರಡಕ್ಕೂ ಸಮನಾಗಿ ತೃಪ್ತಿಯುಂಟಾಗಿದೆ " ಎಂದು ನಾನು ಉದ್ಗಾರ ತೆಗೆದೆನು.

" ಮೂಗಿಗಾದರೂ ಅನಾದರವೆಲ್ಲಿ ? ಕವಿಗಳು ಆಮ್ರ ಬಕುಲ ಚಂಪಕ ಮಾಲತಿಗಳ ಸುಗಂಧದ ವರ್ಣನೆಯನ್ನು ಮಾಡಲಿ. ಈ ಬೇವಿನ ಹೂಗಳ ಸುವಾಸವು ನಿಶ್ಚಯವಾಗಿ ಆಹ್ಲಾದಕರವಾಗಿದೆ. ಕಾಲಿದಾಸನಿದ್ದ ಪ್ರಾಂತದಲ್ಲಿ ಈ ಗಿಡಗಳು ಬೆಳೆಯಲಿಲ್ಲವಾಗಿ ತೋರುತ್ತದೆ. ಇದ್ದರೆ ಋತುಸಂಹಾರದ ತುಂಬ ಈ ನಿಂಬಮಂಜರಿಗಳ ಸುಗಂಧವೇ ಇಡುಗುತ್ತಿತ್ತು." ಎಂದು ಸರಲಾಕ್ಷರಾಯನು ಬಣ್ಣಿಸಿ ನುಡಿದನು.

ಹೀಗೆ ಉತ್ಸುಕತೆಯಿಂದ ವನಶೋಭೆಯನ್ನು ನಿರೀಕ್ಷಿಸುತ್ತಲೂ ಅಲ್ಲಲ್ಲಿ

ಎರಳೆ ಹಲ್ಲೆ ನರಿ ಮುಂಗಿಲಿಗಳ ಓಡಾಟಗಳನ್ನು ನೋಡುತ್ತಲೂ ಎರಡು ಗಳಿಗೆ ನಾವು ಪ್ರವಾಸದಲ್ಲಿ ಕಳೆದೆವು. ಅಷ್ಟರಲ್ಲಿ ಹಾದಿಯು ದಕ್ಷಿಣದಿಂದ ಪೂರ್ವಕ್ಕೆ ಒಡೆಯಿತು. ಆಕೋ! ಅಂಬಾರಿಗಳನ್ನು ಹೊತ್ತುಕೊಂಡಿರುವ ಎರಡು ಮದ್ದಾನೆಗಳು ಎದಿರುಬದಿರಾಗಿ ನಿಂತು ಕಾದಲುದ್ಯುಕ್ತವಾಗಿವೆಯೋ ಎಂಬಂತೆ ಇಕ್ಕಟ್ಟಾಗಿ ನಿಂತಿರುವ ಎರಡು ಪರ್ವತಗಳ ಮೇಲೆ ಕಟ್ಟಿರುವ ಎರಡು ಕೋಟೆಗಳು ಶೋಭಿಸಿ ತೋರಿದವು. ಆ ಎರಡು ಪರ್ವತಗಳ ಮಧ್ಯದಲ್ಲಿರುವ ಪ್ರದೇಶದಲ್ಲಿ ವಾತಾಪೀಪುರವನ್ನು ಕಟ್ಟಿದ್ದಾರೆ. ಪುರಾಣ ಪ್ರಸಿದ್ಧವೂ ಇತಿಹಾಸಪ್ರಸಿದ್ಧವೂ ಆಗಿರುವ ಸ್ಥಾನವದು. ಪುರಾಣದಲ್ಲಿಯ ವಾತಾಪೀ ಎಂಬ ರಾಕ್ಷಸನು ತನ್ನ ನಿವಾಸವನ್ನು ಈ ಸ್ಥಾನದಲ್ಲಿ ಮಾಡಿ ಕೊಂಡಿದ್ದನೆಂದು ಇದಕ್ಕೆ ವಾತಾಪೀಪುರವೆಂಬ ಹೆಸರು. ಇಲ್ಲಿಯೇ ಜಗದ್ವಿಖ್ಯಾತನಾದ ಪುಲಿಕೇಶಿ ಸಾರ್ವಭೌಮನು ತನ್ನ ರಾಜಧಾನಿಯನ್ನು ಮಾಡಿಕೊಂಡಿದ್ದನು.

ಸುಭೇದಾರ ರಾಸಬಿಹಾರಿಯ ಮನೆಯು ವಾತಾಪೀಪುರದಲ್ಲಿದ್ದಿಲ್ಲ. ಪರ್ವತವನ್ನು ಎಡಕ್ಕೆ ಸುತ್ತಿ ಕೆಲವು ಹಾದಿಯನ್ನು ನಡೆದ ಮೇಲೆ ನಾವು ನದೀತೀರದಲ್ಲಿರುವ ದೇವಿಯಗುಡ್ಡವೆಂಬ ಗ್ರಾಮಕ್ಕೆ ಬಂದೆವು. ಗ್ರಾಮದ ಸಮೀಪದಲ್ಲಿರುವ ಉನ್ನತವಾದ ಕಲ್ಲುಬಂಡೆಗಳ ಮೇಲಿಂದ ಆ ನದಿಯ ಪ್ರವಾಹವು ತಡಸಲವಾಗಿ ಧಭಧಭಿಸಿ ಬೀಳುತ್ತಿತ್ತು. ಆ ತಡಸಲಿನ ಎದುರಿಗೆಯೇ ರಮ್ಯವಾಗಿ ರಚಿಸಿರುವ ಉದ್ಯಾನದ ಮಧ್ಯದಲ್ಲಿ ಸುಭೇದಾರನ ರಮ್ಯವಾದ ಮಂದಿರವಿತ್ತು. ಉದ್ಯಾನದ ಶೋಭೆಯನ್ನು ನೋಡಲಾಗಿ ಸುಭೇದಾರನು ರಸಿಕನಾಗಿರಬಹುದೆಂದು ಕಂಡಿತು. ಮನೆಯಲ್ಲಿಯ ಸುವ್ಯವಸ್ಥೆಯನ್ನು ಕಂಡು ರಾಸಬಿಹಾರಿಯ ಭಾರ್ಯೆಯು ಜಾಣಳಾದ ಗೃಹಿಣಿಯಾಗಿರಬೇಕೆಂದು ಹುಲಿಮೀಸೆಯು ತರ್ಕಿಸಿದನು.

ಉಪಹಾರವಾದಬಳಿಕ ಮತ್ತೆ ಪ್ರಕರಣದ ವಿಷಯವಾಗಿ ಮಾತುಗಳು ನಡೆದವು.

“ಸುಭೇದಾರ, ಠಾಕೂರಸಿಂಗನು ನಿಮ್ಮಲ್ಲಿ ಎಳೆಂಟುವರ್ಷ ಇದ್ದನೆಂದು ಕೇಳಿದ್ದೇನೆ. ಅವನು ನಂಬಿಗೆಯುಳ್ಳವನಾದ ಸೇವಕನಾಗಿದ್ದನೊ?” ಎಂದು ಹುಲಿಮೀಸೆ ಪರಲಾಕ್ಷನು ಕೇಳಿದನು.

“ ಒಳ್ಳೇ ಮನುಷ್ಯ ಕಂಡಿನಾ ! ” ಎಂದು ರಾಸಬಿಹಾರಿಯು ವ್ಯಸನಾರ್ತನಾಗಿ ಉದ್ಗಾರ ತೆಗೆದನು.

“ ಕೃಷ್ಣಭುಜಂಗರೆ, ಠಾಕೂರಸಿಂಗನ ಹೆಣದ ಮೇಲಿರುವ ವಸ್ತುಗಳ ಟಿಪ್ಪಣಿ ನಿಮ್ಮಲ್ಲಿ ಇರುವದೋ ? ” ಎಂದು ಸರಲಾಕ್ಷನು ಕೇಳಿದನು.

“ ಟಿಪ್ಪಣಿಯೊಂದೇ ಏಕೆ ? ಆ ವಸ್ತುಗಳನ್ನೆಲ್ಲ ಚನ್ನಾಗಿ ಕಾದಿಟ್ಟಿದ್ದೇನೆ. ಅವುಗಳನ್ನು ಪೆಟ್ಟಿಗೆಯಲ್ಲಿ ಹಾಕಿ ಇಲ್ಲಿಯೇ ಹೊರಗಿನ ಕೋಣೆಯಲ್ಲಿಟ್ಟಿದ್ದೇನೆ. ಬೇಕಾದರೆ ತೋರಿಸುತ್ತೇನೆ ಬನ್ನಿರಿ. ”

ನಾವೆಲ್ಲರೂ ಆ ಕೋಣೆಗೆ ಹೋದೆವು. ಕೃಷ್ಣಭುಜಂಗನು ಆ ಪೆಟ್ಟಿಗೆಯೊಳಗಿನ ಜೀನಸುಗಳನ್ನೆಲ್ಲ ಒಂದು ಚಾಪೆಯ ಮೇಲೆ ಸುರಿದು ಟಿಪ್ಪಣಿಯನ್ನು ಓದಲಾರಂಭಿಸಿದನು :

“ ಮೇಣದ ಕಡ್ಡಿಗಳುಳ್ಳ ದೀಪದ ಪೆಟ್ಟಿಗೆಯೊಂದು ; ಮೇಣಬತ್ತಿಯ ಚೂರು ಒಂದು, ಎರಡು ಅಂಗುಲ ಉದ್ದ ; ಹೊಗೆಸೊಪ್ಪು ಸೇದುವ ಬೆಳ್ಳಿಯ ಚಿಲಿಮೆಯೊಂದು ; ಹೊಗೆಸೊಪ್ಪು ಹಾಕುವ ಸುರಿಕೆಯ ಚೀಲ, ಎರಡು ತೊಲೆ ಹೊಗೆಸೊಪ್ಪು ಸಹಿತ; ಬೆಳ್ಳಿಯ ಗಡಿಯಾರ, ಅದಕ್ಕೆ ಚಿನ್ನದ ಸರಪಣಿ, ತೂಕ ಒಂದು ತೊಲೆ; ಇಪ್ಪತ್ತು ರೂಪಾಯಿಯ ನೋಟು ಒಂದು ; ಸೀಸಕಡ್ಡಿ ಒಂದು, ಮೂರು ಅಂಗುಲ ಉದ್ದವಾದದ್ದು ; ಜಂತದ ಹಿಡಿಕೆಯ ಚಾಕುವಿನಂಥ ಶಸ್ತ್ರ ಒಂದು, ಮಡಿಚಲಿಕ್ಕೆ ಬರುವದಿಲ್ಲ, ರಾಜರ್ಸ ಎಂಬ ಶಸ್ತ್ರಕಾರನ ಹೆಸರುಳ್ಳದ್ದು. ಐದು ಕಾಗದಗಳು. ”

“ ಹೊಸ ಮಾದರಿಯ ಚಾಕುವಿದು. ಇದೇ ಠಾಕೂರಸಿಂಗನ ಹೆಣದ ಕೈಯಲ್ಲಿ ಇತ್ತಷ್ಟೆ ? ಇದರಿಂದ ವೈದ್ಯರು ಸೂಕ್ಷ್ಮವಾದ ಶಸ್ತ್ರಕ್ರಿಯೆಯನ್ನು ಮಾಡಬಹುದಲ್ಲವೆ ಪಂಡಿತ ವಾತಾತ್ಮಜ? ” ಎಂದು ಸರಲಾಕ್ಷನು ಆ ಚಾಕುವನ್ನು ಎತ್ತಿ ತೋರಿಸಿ ನನ್ನನ್ನು ಕೇಳಿದನು.

“ ಆಹುದು. ನೇತ್ರರೋಗದಲ್ಲಿ ಉಪಯೋಗಿಸುವ ಶಸ್ತ್ರವಿದು ” ಎಂದು ನಾನು ಹೇಳಿದೆನು. ಸೂಕ್ಷ್ಮವಾದ ಶಸ್ತ್ರಕ್ರಿಯೆಯನ್ನು ಮಾಡಲಿಕ್ಕೆ ಮಾಡಿದ ಸೂಕ್ಷ್ಮತರವಾದ ಶಸ್ತ್ರವಿದು. ಕಳ್ಳರನ್ನು ಬೆನ್ನಟ್ಟಿ ಹೋದವನಾದ ಠಾಕೂರಸಿಂಗನು ಇಂಥ ಶಸ್ತ್ರವನ್ನೇಕೆ ತೆಗೆದುಕೊಂಡು ಹೋದನೋ ಕಾಣೆನು. ಇದನ್ನು ಮಡಿಚಲಿಕ್ಕಾಗದು ಇಂಥದನ್ನು, ಜೇಬಿನಲ್ಲಿಟ್ಟುಕೊಂಡು

ಹೋಗುವವನಿಗೇ ಅಪಾಯವು " ಎಂದು ಹುಲಿವೀಸೆಯು ಅಭಿಪ್ರಾಯ ಪಟ್ಟನು.

" ಅಲಗು ಫಕ್ಕನೆ ಸಟ್ಟೀತೆಂದು ಇದರ ತುದಿಗೆ ಒಂದು ತೊಗಲಿನ ಟೊಪ್ಪಿಗೆಯನ್ನು ಮಾಡಿರುತ್ತಾರೆ. ಆ ಚಿಕ್ಕ ಟೊಪ್ಪಿಗೆಯು ಗುದ್ದಾಟದ ಸ್ಥಳದಲ್ಲಿ ಬಿದ್ದಿತ್ತು. ಇಕೋ ನೋಡಿರಿ" ಎಂದು ಕೃಷ್ಣಭುಜಂಗನು ನುಡಿದು ಟೊಪ್ಪಿಗೆಯನ್ನು ತೋರಿಸಿದನು.

ಆ ಮಾತು ಕೇಳಿ ಹುಲಿವೀಸೆಯು ಮೇಲ್ಗಳಿಪ್ಪಿಯನ್ನಿಟ್ಟು ಧ್ಯಾನಿಸುತ್ತ ಕುಳಿತನು.

" ಈ ಶಸ್ತ್ರವು ಠಾಕೂರಸಿಂಗನ ಮೇಜಿನ ಮೇಲೆ ನಾಲ್ಕಾರು ದಿವಸಗಳಿಂದ ಬಿದ್ದಿತ್ತೆಂದು ಅವನ ಹೆಂಡತಿಯಾದ ಕುವರಬಾಯಿಯು ಹೇಳುತ್ತಾಳೆ. ಆ ದಿವಸ ಠಾಕೂರಸಿಂಗನು ಅಂಥ ಅವಸರದ ಸಮಯದಲ್ಲಿ ಆ ಚಾಕುವು ಸಂಗಡ ಇದ್ದರೂ ಇರಲೆಂದು ಒಯ್ದಿರಬಹುದು " ಎಂದು ಕೃಷ್ಣಭುಜಂಗನು ಸೂಚಿಸಿದನು.

" ನಿಮ್ಮ ಮಾತು ಸೋಪಪತ್ತಿಕವಾಗಿ ತೋರುತ್ತದೆ; ಇನ್ನು ಈ ಕಾಗದಗಳನ್ನು ತೆಗೆಯಿರಿ ನೋಡೋಣ. "

ಕೃಷ್ಣಭುಜಂಗನು ಆ ಕಾಗದಗಳನ್ನು ಒಂದೊಂದಾಗಿ ತೆಗೆದು ಸರಲಾಕ್ಷನ ಕೈಗೆ ಕೊಟ್ಟನು.

ಸರಲಾಕ್ಷನು ಅವುಗಳನ್ನು ನೋಡುತ್ತ ಅಂದದ್ದು: " ಇವು ಮೂರು ಹುಲ್ಲುಗಡಲಿಗಳ ಲೆಕ್ಕದ ಚೀಟಿಗಳು. ಇದು ಕುವರಬಾಯಿಗೆ ಪಿಯಾನೋ ಬಾರಿಸಲಿಕ್ಕೆ ಕಲಿಸಿದವನಾದ ಚಂದೂ ಅಡ್ಡಗಮ್ಮಣ್ಣನವರ ಎಂಬವನು ಬರೆದ ಕ್ಷೇಮಸಮಾಚಾರದ ಪತ್ರವು. ಇದೇನು? ಮಗನೀರಾಮ ಚಂದೂಭಾಯಿ ಎಂಬ ಜವಳೀ ವ್ಯಾಪಾರಸ್ಥನ ಲೆಕ್ಕದ ಪಟ್ಟಿಯು. ಕುವರಬಾಯಿಗಾಗಿ ಗಿಳಿಬಣ್ಣದ ಜರದ ಪತ್ತಲ ಒಂದು, ಬೆಲೆ ಎಪ್ಪತ್ತೈದು ರೂಪಾಯಿ. ಹಸ್ತೆ ಬಾಳೂ ಸಂಗಮ. ಇಷ್ಟು ಬೆಲೆಯ ಸೀರೆ! ಹೋಗಲಿ, ಅವರವರ ಗೃಹಕೃತ್ಯದ ಕೆಲಸವಿದು. ಈ ಕಾಗದಗಳಲ್ಲಿ ವಿಶೇಷವೇನೂ ಇಲ್ಲವೆಂತಾಯಿತು " ಎಂದು ಹೇಳಿ ಸರಲಾಕ್ಷನು ಕೋಣೆಯಿಂದೆದ್ದು ಹೊರಗೆ ನಡೆದನು. ನಾವೆಲ್ಲರೂ ಅವನನ್ನು ಹಿಂಬಾಲಿಸಿನಡೆದೆವು.

ಅಷ್ಟರಲ್ಲಿ ರೂಪವತಿಯೂ ವಿಲಾಸಪ್ರಿಯಳೂ ಆದ ತರುಣಿಯೋರ್ವಳು ಚಿಂತಾಕ್ರಾಂತವಾದ ಮುಖವುಳ್ಳವಳಾಗಿ ನಾವಿದ್ದಲ್ಲಿಗೆ ಬಂದು "ಏನು ಕೊತವಾಲರೆ, ಏನಾದರೂ ಶೋಧವಾಯಿತೆ? ಪರದೇಶಿಯಾದ ನಾನು ಇನ್ನೆಷ್ಟು ದಿವಸ ಇಲ್ಲಿರಲಿ ಹೇಳಿರಿ" ಎಂದು ಚಿಂತೆಯಲ್ಲಿಯೇ ಕಿಂಚಿತ್ ಮಂದಹಾಸಕ್ಕೆ ಅವಕಾಶವನ್ನು ಕೊಟ್ಟು ಕೇಳಿದಳು.

"ಆದೀತು, ಬೇಗನೆ ಶೋಧವಾದೀತು. ಕುವರಬಾಯಿ, ನಾಳೆ ನಿಮಗೆ ಅಪ್ಪಣೆಯಾಗುವದು" ಎಂದು ಕೃಷ್ಣಭುಜಂಗನು ಹೇಳಿ ಬಳಿಕ ಸರಲಾಕ್ಷನನ್ನು ಕುರಿತು "ರಾಯರೆ, ಇವರೇ ಠಾಕೂರಸಿಂಗನ ದುರ್ದೈವಿಗಳಾದ ಪತ್ನಿಯವರು" ಎಂದು ಹೇಳಿಕೊಟ್ಟನು.

ಸರಲಾಕ್ಷನು ಕುವರಬಾಯಿಯ ಮುಖವನ್ನು ದಿಟ್ಟಿಸಿ ನೋಡಿ "ಓ, ಕುವರಬಾಯಿ, ನೀವು ಆಚೀ ವರ್ಷ ಶ್ರಾವಣಮಾಸದಲ್ಲಿ ಲೀಲಾಧರ ಖುಶಾಲಚಂದರೊಡನೆ ಬೆಳಗಾವಿಯಲ್ಲಿ ಪ್ರಮೀಲಾ ಸ್ವಯಂವರ ನಾಟಕವನ್ನು ನೋಡಬಂದಿದ್ದಿಲ್ಲವೆ? ಆಗ ನೀವು ಗಿಳಿಬಣ್ಣದ ಜರದ ಪತ್ತಲವನ್ನುಟ್ಟುಕೊಂಡಿದ್ದಿರಿ." ಎಂದು ಕೇಳಿದನು.

"ಯಾರನ್ನು ನೋಡಿದಿರಿ ನೀವು? ನಾನು ಪ್ರಮೀಲಾ ಸ್ವಯಂವರವೆಂಬ ನಾಟಕವನ್ನೇ ನೋಡಿಲ್ಲ. ಗಿಳಿಬಣ್ಣದ ಸೀರೆಯನ್ನು ನಾನು ಮೊನ್ನೆ ಕೊಂಡಿದ್ದೇನೆ" ಎಂದು ಕುವರಬಾಯಿಯು ಕಿಂಚಿತ್ ಕ್ರುದ್ಧಳಾಗಿ ನುಡಿದಳು.

"ಗಿಳಿ ಬಣ್ಣದ ಸೀರೆಯನ್ನು ನೀವು ಮೊನ್ನೆ ಕೊಂಡಿರೆಂಬದು ಮುಗನೀರಾಮನ ಲೆಕ್ಕವೇ ಹೇಳುತ್ತದೆ. ಅಂಥದೇ ಮತ್ತೊಂದು ಸೀರೆಯನ್ನು ಆಚೆಯ ವರ್ಷ ಕೊಳ್ಳಲಿಕ್ಕೆ ನಿಮಗೆ ಬೇಡೆಂಬುವವರಾರಿದ್ದರು? ಹೋಗಲಿ, ನೀವು ಪ್ರಮೀಲಾನಾಟಕಕ್ಕೆ ಹೋಗಲೇ ಇಲ್ಲವೆಂದು ಹೇಳಿದಬಳಿಕ ವಾದವೇ ಇಲ್ಲ. ಒಬ್ಬರಂತೆ ಒಬ್ಬರಿರುವದನ್ನು ಒಮ್ಮೊಮ್ಮೆ ಕಾಣಬಹುದು. ಕ್ಷಮಿಸಿರಿ. ನಾನು ತಪ್ಪಿದೆನು."

"ತಪ್ಪೇತರದು ರಾಯರೆ? ಬ್ರಾಹ್ಮಣರಾದವರಿಗೂ ಒಮ್ಮೊಮ್ಮೆ ಹುಲಿಮೀಸೆ ಎಂಬ ಹೆಸರು" ಎಂದು ಕುವರಬಾಯಿಯು ಹೊಟ್ಟೆಯೊಳಗಿನ ಸಿಟ್ಟಿನಿಂದ ನುಡಿದಳು.

ಹುಲಿಮೀಸೆಯು ಅವಳ ಮಾತಿಗೆ ನಕ್ಕು "ಕುವರಬಾಯಿ, ನೀವು ವಿನೋದವತಿಯರು. ಹುಲಿಮೀಸೆಯೆಂಬದು ನನ್ನ ಹೆಸರಲ್ಲ. ನನ್ನ ಮುತ್ತಾತರಿಗೆ ಆ ಹೆಸರನ್ನು ಇಟ್ಟಿದ್ದರು. ಆ ಹೆಸರಿನ ಚಮತ್ಕಾರಕ್ಕಾಗಿ ಜನರು ನಮ್ಮ ಮನೆಯವರನ್ನೆಲ್ಲ ಅದೇ ಹೆಸರಿನಿಂದ ಕರೆಯಲಾರಂಭಿಸಿದ್ದರಿಂದ ಹುಲಿಮೀಸೆಯೆಂಬದು ನಮ್ಮ ಅಡ್ಡ ಹೆಸರೇ ಆಗಿಹೋಗಿದೆ" ಎಂದು ಹೇಳಿದನು.

"ಬ್ರಾಹ್ಮಣರಲ್ಲಿ ಹುಲಿಮೀಸೆಯೆಂಬ ಹೆಸರು ಎಲ್ಲಿಯೂ ನಾನು ಕೇಳಿಲ್ಲ. ಅಂಥ ಹೆಸರನ್ನು ನಿಮ್ಮ ಮುತ್ತಾತರಿಗೆ ಹೇಗಿಟ್ಟರು?" ಎಂದು ರಾಸಬಿಹಾರಿಯು ಜಡೆಯಂತಿರುವ ತನ್ನ ಗಲ್ಲೀಮೀಸೆಯ ಮೇಲೆ ಕೈಯಾಡಿಸುತ್ತ ಕೇಳಿದನು.

"ಇಂಥ ಸಮಯದಲ್ಲಿ ಆ ಕಥಾಂತರವನ್ನೇ ಹೇಳಲಿಯಾ? ಆಗಲಿ, ಕೇಳಿರಿ: ವೇಣೀಸಂಹಾರ ನಾಟಕವನ್ನು ಬರೆದ ಭಟ್ಟನಾರಾಯಣನ ವಂಶದವರು ನಾವು. ಆ ಕವಿಗೆ ಮೃಗರಾಜಲಕ್ಷ್ಮ ಎಂಬ ಬಿರುದು. ಮೃಗರಾಜಲಕ್ಷ್ಮವೆಂದರೆ ಸಿಂಹದ ಜಡೆ. ಇನ್ನು ಕನ್ನಡ ಪಂಡಿತರು ಒಮ್ಮೊಮ್ಮೆ ಸಿಂಹಕ್ಕೆ ಹುಲಿಯೆಂದು ಕರೆಯುವದುಂಟು. ಸಿಂಹಕೇಶಿಯಾದ ಚಾಲುಕ್ಯ ಸಾರ್ವಭೌಮನಿಗೆ ಪುಲಿಕೇಶಿ ಎಂದು ಅವರು ಕರೆದರು. ಹಾಗೆಯೇ ನಮ್ಮ ಮುತ್ತಾತನ ಹೆಸರು ಪುಲಿಕೇಶಿ. ಹುಲಿಕೇಶಿ ಶಬ್ದವು ಹೋಗಿ ಹುಲಿಮೀಸೆಯಾಯಿತು." ಎಂದು ಸರಲಾಕ್ಷನು ತನ್ನ ಹೆಸರಿನ ಉತ್ಪತ್ತಿಯನ್ನು ವಿವರಿಸಿ ಹೇಳಿದನು.

ಮರುದಿವಸ ಬೆಳಿಗ್ಗೆ ನಾವು ಠಾಕೂರನ ಕೊಲೆಯಾದ ಸ್ಥಳವನ್ನು ನೋಡಲಿಕ್ಕೆ ಹೊರಟೆವು. ಮಾರ್ಗದಲ್ಲಿ ಸುಭೇದಾರರ ಮಾವಿನ ತೋಟದ ಬಳಿಯಲ್ಲಿದ್ದ ಕುದುರೆಯ ಲಾಯದ ಮನೆಯನ್ನು ನೋಡಿದೆವು. ಆ ಅಶ್ವಶಾಲೆಯ ಹೊರಗೋಡೆಗಳನ್ನು ನೋಡಲಾಗಿ ಅದೊಂದು ಚಿಕ್ಕದಾದ ಕೋಟೆಯೇ ಎಂಬಂತೆ ಕಂಡಿತು. ಒಳಗಿನ ಎರಡು ಕೊಟ್ಟಿಗೆಗಳಲ್ಲಿ ಐದೈದು ಕುದುರೆಗಳನ್ನು ದೂರದೂರಾಗಿ ಕಟ್ಟಿದ್ದರು. ಕಸದ ಕಡ್ಡಿಯಾಗಲಿ, ಲದ್ದಿಯ ಚೂರಾಗಲಿ ಅಲ್ಲಿ ಇದ್ದಿಲ್ಲ. ಎತ್ತ ನೋಡಿದತ್ತ ಸ್ವಚ್ಛತೆಯೇ ಸ್ವಚ್ಛತೆಯು. ಕೊಟ್ಟಿಗೆಯಲ್ಲಿ ವಿಪುಲವಾಗಿ ಗಾಳಿಯಾಡುತ್ತಿತ್ತು. ಬೆಳಕಿಗೂ ಕೊರತೆ

ಯಿಲ್ಲ. ಒಂದೊಂದು ಕುದುರೆಗೆ ಎಷ್ಟು ಹುಲ್ಲು ತೂಗಿ ಹಾಕಿತು, ತಿನ್ನದೆ ಉಳಿಯಿತೆಷ್ಟು ಮುಂತಾದ ಸಂಗತಿಗಳ ಲೆಕ್ಕವನ್ನು ಆಯಾ ಕುದುರೆಯ ಬಳಿಯಲ್ಲಿಟ್ಟ ಹಲಿಗೆಯ ಮೇಲೆ ಕಾಲಕಾಲಕ್ಕೆ ಆಳುಗಳು ಬರೆದಿಟ್ಟಿದ್ದರು. ಬೆಳ್ಳೀಚಿಕ್ಕೆಯನ್ನು ಕಟ್ಟಿರುವ ಸ್ಥಳವು ಪ್ರಥಕ್ಕಾಗಿಯೂ ಅಲ್ಲಿಯ ವ್ಯವಸ್ಥೆಯೂ ವಿಶೇಷವಾಗಿಯೂ ಇರುವಂತೆ ಕಂಡಿತು. ಬೆಳತನಕ ಎಚ್ಚರಿಕೆಯಿಂದ ಕಾದುಕೊಂಡು ಕುಳ್ಳಿರುವ ಆಳಿನ ಸಮೀಪದಲ್ಲಿಯೇ ಎರಡು ಭೀಕರವಾದ ಸೊನಗಗಳನ್ನು ಕಟ್ಟಿದ್ದರು. ಅಲ್ಲಿಯ ವ್ಯವಸ್ಥೆಯನ್ನೆಲ್ಲ ಸೂಕ್ಷ್ಮವಾಗಿ ನಿರೀಕ್ಷಿಸಿ ಹುಲಿಮೀಸೆಯು ಮುಗುಳುನಗೆ ನಕ್ಕು ಕೊಲೆಯ ಸ್ಥಳಕ್ಕೆ ನಮ್ಮನ್ನು ಕರಕೊಂಡು ನಡೆದನು.

ಆಳವಾದ ಹಾಳು ಕೆರೆಯಂತೆ ಕಾಣುವದೊಂದು ವಿಸ್ತಾರವಾದ ತಗ್ಗಿಗೆ ನಾವು ಬಂದೆವು. ಅದೇನು? ಆ ಗಿಡಕ್ಕೆ ಜೋತಾಡುವ ಅಂಗಿ ಯಾರದು? ಅದು ಠಾಕೂರಸಿಂಗನದೇ ಎಂದು ಸುಭೇದಾರನು ಹೇಳಿದನು.

"ಕೊಲೆಯಾದ ರಾತ್ರಿ ಬಿರುಗಾಳಿ ಬಿಟ್ಟಿತ್ತೆ?" ಎಂದು ಹುಲಿ ಮೀಸೆಯು ಕೇಳಲಾಗಿ ಗಾಳಿಯೇ ಇದ್ದಿಲ್ಲವೆಂದು ಉತ್ತರ ಬಂದಿತು.

"ಹಾಗಾದರೆ ಈ ಅಂಗಿಯನ್ನು ಠಾಕೂರನು ತಾನಾಗಿ ಆ ಕೊಂಬೆಗೆ ತೆಗೆದಿಟ್ಟನೆನ್ನಬೇಕು." ಎಂದು ಚಾಣಾಕ್ಷನಾದ ಸರಲಾಕ್ಷನು ಅಭಿಪ್ರಾಯ ಪಟ್ಟನು.

"ಇಕೋ ನೋಡಿರಿ: ಇಲ್ಲಿಯೇ ಹೆಣವು ಅಂಗಾತು ಬಿದ್ದಿತ್ತು. ಇವು ಕುದುರೆಯ ಹೆಜ್ಜೆಗಳು. ಬೆಳ್ಳೀಚಿಕ್ಕೆಯ ಕಾಲಿನ ನಾಲಿಗೂ ಇಲ್ಲಿ ಮೂಡಿದ ನಾಲಿಗೂ ಎಷ್ಟು ಮಾತ್ರವೂ ಹೆಚ್ಚುಕಡಿಮೆಯಿಲ್ಲ. ಹದಿನೈದು ದಿವಸಗಳಾಚೆಗೆ ಆದ ಮಳೆಯಿಂದ ಇಲ್ಲಿ ಕೊಂಚ ಕೆಸರಾಗಿದ್ದರಿಂದ ಹೆಜ್ಜೆಗಳು ಚನ್ನಾಗಿ ಮೂಡಿರುವವು. ಮನುಷ್ಯರ ಹೆಜ್ಜೆಗಳೂ ಇವೆ. ಠಾಕೂರಸಿಂಗನು ಮೆಟ್ಟಿಕೊಂಡ ಜೋಡು ತಂದಿದ್ದೇನೆ ನೋಡಿರಿ. ಇದು ಮಹಮ್ಮದ ಇಬ್ರಾಹೀಮನ ಜೋಡು. ಬೆಳ್ಳೀಚಿಕ್ಕೆಗೆ ಹೊಸ ನಾಲು ಕಟ್ಟಿಸಿದಾಗ ತೆಗೆದಿಟ್ಟ ಹಳೆ ನಾಲು ಇದು." ಎಂದು ಕೃಷ್ಣಭುಜಂಗನು ತಾನು ತಂದಿರುವ ವಸ್ತುಗಳನ್ನು ಹುಲಿಮೀಸೆಗೆ ತೋರಿಸಿದನು.

"ಸಾಧು ಕೃಷ್ಣಭುಜಂಗ! ಕೆಲಸ ಮಾಡಬೇಕು ನೀವೇ" ಎಂದು

ನುಡಿದು ಸರಲಾಕ್ಷನು ಬೊಗ್ಗಿ ಬೊಗ್ಗಿ ಆ ಸ್ಥಳದಲ್ಲಿಯ ಹೆಜ್ಜೆ ನುುಂತಾದವು ಗಳನ್ನು ಒಳ್ಳೇ ಸೂಕ್ಷ್ಮವಾದ ರೀತಿಯಿಂದ ಪರೀಕ್ಷಿಸಿ ನೋಡಿದನು. ಬಳಿಕ ಅವನು ತುದಿ ಬೆರಳುಗಳಿಂದ ಹುಸು ನೆಲ ಕೆದರಿನೋಡಿ "ಓಹೋ, ಇದು ಮೇಣಬತ್ತಿಯ ರಸವಲ್ಲವೆ? ನೋಡಿರಿ ಕೃಷ್ಣಭುಜಂಗ" ಎಂದು ನುಡಿದು ಅವನು ತಾನು ಕೆದರಿಕೊಂಡ ಪದಾರ್ಥವನ್ನು ಕೊತವಾಲನಿಗೆ ತೋರಿಸಿದನು.

"ಅಹುದು ಇದು ಮೇಣಬತ್ತಿಯ ರಸವೇ. ಈ ರಸವು ಇಲ್ಲಿರಬಹು ದೆಂದು ತರ್ಕಿಸಿ ಹಾಗೆ ನೀವು ಕೆದರಿ ನೋಡಿದಿರೇನು? ನನಗಿದು ಆ ದಿವಸ ಕಾಣಿಸಲೇ ಇಲ್ಲ." ಎಂದು ಕೃಷ್ಣಭುಜಂಗನು ಚಕಿತನಾಗಿ ನುಡಿದನು.

"ಇಕೋ, ಇದು ನೋಡಿರಿ. ಕೆರೆವ ದೀಪದ ಕಡ್ಡಿಯ ಚೂರು. ಮೃತನ ಜೇಬಿನಲ್ಲಿಯ ಪೆಟ್ಟಿಗೆಯೊಳಗಿನ ಕಡ್ಡಿಯೂ ಈ ಕಡ್ಡಿಯೂ ಒಂದೇ ಆಗಿ ತೋರುತ್ತದೆ."

"ನಿಶ್ಚಯ. ಎರಡೂ ಕಡ್ಡಿಗಳು ಒಂದೆಯೇ." ಎಂದು ಕೊತ ವಾಲನು ಉದ್ಗಾರ ತೆಗೆದನು.

"ಒಳ್ಳೇದು, ಇಲ್ಲಿಯ ಕೆಲಸವಾಯಿತು. ನಾನೂ ನಮ್ಮ ವಾತಾತ್ಮಜ ಪಂಡಿತರೂ ಕೂಡಿ ಹೀಗೆ ಅಡ್ಡಾಡಿ ಇನ್ನಿಷ್ಟು ಇಲ್ಲಿಯ ವನಶೋಭೆಯನ್ನು ನೋಡಿಕೊಂಡು ಬರುತ್ತೇವೆ. ಕೃಷ್ಣಭುಜಂಗ, ನೀವು ಸುಭೇದಾರರನ್ನು ಕರ ಕೊಂಡು ಮನೆಗೆ ನಡೆಯಿರಿ. ಊಟದ ಸಮಯಕ್ಕೆ ನಾವು ಬಂದೇಬರು ತ್ತೇವೆ. 'ಗಾಳಿಯ ಮಿಂಡ'ನೆಂಬ ಕುದುರೆಯ ಯಜಮಾನನಾದ ಜಾಫರ ಸೇಟನ ಲಾಯದ ಮನೆ ಎತ್ತಕಡೆಗಿರುವದು?" ಎಂದು ಹುಲಿಮೀಸೆಯು ಕೇಳಿದನು. ಅವರು ತೋರಿಸಿದರು.

"ಸರಲಾಕ್ಷರಾವ್, ನೀವು ತಿರುಗಾಡಿಕೊಂಡು ಬನ್ನಿರಿ. ನಾವು ಕುವರಬಾಯಿಯ ಮನೆಯಲ್ಲಿ ಕುಳಿತುಕೊಂಡು ನಿಮ್ಮ ಮಾರ್ಗಪ್ರತೀಕ್ಷೆ ಮಾಡುವೆವು. ಆಮೇಲೆ ಎಲ್ಲರೂ ರಥದಲ್ಲಿ ಕುಳಿತುಕೊಂಡು ಮನೆಗೆ ಹೋಗುವ" ಎಂದು ಹೇಳಿ ರಾಸಬಿಹಾರಿಯು ಕೃಷ್ಣಭುಜಂಗನನ್ನು ಕರ ಕೊಂಡು ನಡೆದನು. ನಾವು ನಮ್ಮ ಹಾದೀ ಹಿಡಿದು ನಡೆದೆವು.

"ಪಂಡಿತರೆ, ಈ ಪ್ರಕರಣದಲ್ಲಿ ಎರಡು ಮಾತಿನ ವಿಚಾರಗಳಿವೆ. ಠಾಕೂರಸಿಂಗನನ್ನು ಕೊಂದವರಾರೆಂಬದು ಒಂದು; ಬೆಳ್ಳೀಚಿಕ್ಕೆ ಎಲ್ಲಿರುವ

ವೆಂಬದು ಮತ್ತೊಂದು. ಆ ಅಶ್ವಶಿಕ್ಷಕನ ಮರಣದ ಕಾರಣದ ಶೋಧದ ಮಾತು ತುಸು ಬಿಕ್ಕಟ್ಟಾದದ್ದು; ಕುದುರೆಯ ಮಾತು ಹಾಗಲ್ಲ. ಕುದುರೆಯನ್ನು ಯಾರೂ ಕೊಂದಿಲ್ಲವೆಂಬದು ಸಿದ್ಧಾಂತವು. ಅದು ಬದುಕಿದ್ದರೆ ಎಲ್ಲಿರಬೇಕು?" ಎಂದು ಹುಲಿಮೀಸೆಯು ಉಪಕ್ರಮಿಸಿದನು.

"ಚಿಗರಿಕಾರರು ಒಯ್ದಿರಲಿ, ಇಲ್ಲವೇ ಮಹಮ್ಮದ ಇಬ್ರಾಹಿಮನೇ ಒಯ್ದಿರಲಿ ಒಯ್ದಿರಬೇಕೆಂದು ಕೃಷ್ಣಭುಜಂಗನು ತರ್ಕಿಸುತ್ತಾನೆ."

"ಎರಡೂ ಸುಳ್ಳು. ಚಿಗರಿಕಾರರು ಒಯ್ದಿಲ್ಲ. ಕುದುರೆಯನ್ನು ಕೊಂದು ಅವರೇನು ತಿನ್ನಬೇಕಾಗಿಲ್ಲ. ಮಾರಿಕೊಳ್ಳುವರೇ, ಬೆಳ್ಳೀಚಿಕ್ಕೆಯೇನು ಮುಚ್ಚುವ ಬದುಕೆ? ಇನ್ನು ಮಹಮ್ಮದ ಇಬ್ರಾಹಿಮನು ಒಯ್ದರೆ ಯಾತಕ್ಕೆ ಒಯ್ಯಬೇಕು? ಕಳವೇ ಅವನ ಉದ್ದೇಶವಾಗಿದ್ದರೆ ಮನೆಗಳಿಗೆ ಕನ್ನವನ್ನಿಕ್ಕಿ ಧನಕನಕಗಳನ್ನು ಕದಿಯುವ ಸುಲಭವಾದ ಸಾಧನವನ್ನು ಬಿಟ್ಟು ಇಂಥ ಗೋಜಿಗೆ ಅವನೇಕೆ ಹೋದಾನು?"

"ಬೆಳ್ಳೀಚಿಕ್ಕೆಯು ನಾಳಿನ ಶರ್ಯತ್ತಿನಲ್ಲಿ ಬರಬಾರದೆಂಬ ಉದ್ದೇಶವು ಅವನದಿದ್ದರೆ ಅವನು ಅದನ್ನು ಬಚ್ಚಿಡಬಾರದೇಕೆ?" ಎಂದು ನಾನು ಕೇಳಿದೆನು.

"ಒಳ್ಳೇ ಪ್ರಶ್ನ. ಆದರೆ ಬೆಳ್ಳೀಚಿಕ್ಕೆಯ ಕಾಲನ್ನೇ ಮುರಿದುಬಿಟ್ಟಿದ್ದರೆ ಮಹಮ್ಮದ ಇಬ್ರಾಹೀಮನ ಕಾರ್ಯವು ಸುಲಭವಾಗಿ ಸಾಧಿಸುತ್ತಿತ್ತಷ್ಟೆ? ಕುದುರೆಯನ್ನು ಕಟ್ಟಿ ಅದಕ್ಕೆ ಕೂಳು ನೀಡಿ, ಕಡೆಗೆ ಕಳವಿನ ಶೋಧವಾದರೆ ಅವನು ಶಿಕ್ಷೆಗೆ ಪಾತ್ರನಾಗುವನಲ್ಲೆ? ಇದು ಮಹಮ್ಮದ ಇಬ್ರಾಹಿಮನ ಕೆಲಸವೇ ಅಲ್ಲ."

"ಹಾಗಾದರೆ ಕುದುರೆಯು ಎಲ್ಲಿಗೆ ಹೋಗಬೇಕು?" ಎಂದು ನಾನು ಒಳ್ಳೇ ಆಥ್ಯತೆಯಿಂದ ಕೇಳಿದೆನು.

"ಕಟ್ಟಿದ ಕುದುರೆಯನ್ನು ಬಿಟ್ಟಕೂಡಲೆ ತನ್ನ ಸ್ವಜಾತೀಯವಾದ ಪ್ರಾಣಿಗಳ ಹಿಂಡಿನಲ್ಲಿ ಸೇರಿಕೊಳ್ಳುವದು ಅದರ ಹುಟ್ಟುಗುಣವು. ಇನ್ನು ಈ ಪ್ರಾಂತದಲ್ಲಿ ಕುದುರೆಗಳ ಹಿಂಡುಗಳೆಂದರೆ ಎರಡೇ ಇರುವವು. ರಾಸಬಿಹಾರಿಯ ಲಾಯದ ಹಿಂಡು ಒಂದು, ಜಾಫರಸೇಟನ ಲಾಯದ ಹಿಂಡು ಮತ್ತೊಂದು. ಬೆಳ್ಳೀ ಚಿಕ್ಕೆಯು ರಾಸಬಿಹಾರಿಯ ಲಾಯಕ್ಕೆ ಬಂದಿಲ್ಲ

ವಾದ ಮೇಲೆ ಅದು ಜಾಫರಸೇಟನ ಲಾಯಕ್ಕೆ ಹೋಗಿರಲಿಕ್ಕೇಬೇಕು."

"ಹಾಗಾದರೆ ಅದು ಅತ್ತ ಹೋಗಿದೆಯೋ ಹೇಗೆ ನೋಡೋಣ ನಡೆ ಯಿರಿ. ಹೆಜ್ಜೆಗಳ ಗುರುತು ಸಿಕ್ಕರೂ ಸಿಕ್ಕಬಹುದು" ಎಂದು ನಾನು ಸೂಚಿಸಿದೆನು

"ನಡೆಯಿರಿ, ಇದು ಬಿರುಸುಭೂಮಿಯು; ಈ ದಿನ್ನೆಯನ್ನಿಳಿಯುವ ವರೆಗೂ ಹೆಜ್ಜೆಗಳ ಗುರುತು ಸಿಕ್ಕಲಾರದು. ಜಾಫರಸೇಟನ ಲಾಯು ಇಲ್ಲಿಂದ ನಟ್ಟಗೆ ಪೂರ್ವಕ್ಕೆ ಇದೆಯಂತೆ. ನಾವು ಪೂರ್ವಾಭಿಮುಖರಾಗಿಯೇ ದಿನ್ನೆಯ ಇಳುಕಲಿನ ವರೆಗೆ ಹೋಗೋಣ. ಅಲ್ಲಿ ಭೂಮಿಯು ಮೆತ್ತಗಾಗಿರಲಿ, ಇಲ್ಲವೆ ಮಳೆನೀರಿನ ಹಸಿ ಇರಲಿ ಇದ್ದರೆ ಹೆಜ್ಜೆಗಳನ್ನು ನಾವು ಕಾಣಬಹುದು. ಕುದುರೆಯಂತೂ ಹೀಗೆಯೇ ಹೋಗಿರಲಿಕ್ಕೆ ಸಾಕು."

ದಿನ್ನೆಯ ಇಳುಕಲಿಗೆ ನಾವು ಬಂದು ನೋಡಲಾಗಿ ಅಲ್ಲಿ ಕುಂಟೆಯಂಥ ತೆಗ್ಗೇ ಇದ್ದು ಅದರಲ್ಲಿಯ ನೆಲವಾದರೂ ಹಸಿಯಾಗಿಯೇ ಇತ್ತು. ಆ ಕುಂಟೆಯ ಒಂದು ದಡವನ್ನು ಹಿಡಿದು ಕುಲಿಮೀಸೆಯು ನಡೆದನು. ನಾನೊಂದು ದಡವನ್ನು ಹಿಡಿದು ಹೆಜ್ಜೆಗಳ ಶೋಧಕ್ಕಾಗಿ ನೆಲವನ್ನು ನೋಡುತ್ತಲೇ ನಡೆದೆನು. ನಾಲ್ಕು ಹೆಜ್ಜೆ ಹೋಗುವಷ್ಟರಲ್ಲಿಯೇ ಶುಭಚಿಹ್ನವೇನೋ ನನಗೆ ಕಂಡಂತಾಯಿತು. ಹೋಗಿ ನೋಡಲಾಗಿ ಕುದುರೆಯ ಹೆಜ್ಜೆಗಳೇ. ಕುದುರೆಯಾದರೂ ಜಾಫರಸೇಟನ ಲಾಯದ ಕಡೆಗೆಯೇ ಹೋಗಿದ್ದಾಗಿ ಕಂಡಿತು. ಹರ್ಷಿತನಾಗಿ ನಾನು ಹುಲಿಮೀಸೆಯನ್ನು ಕೂಗಿ ಚಪ್ಪಳೆ ಹೊಡೆದೆನು. ಚಿಗರೆ ಹಾರಿದಂತೆ ಹಾರುತ್ತ ಸರಲಾಕ್ಷನು ನಾನಿದ್ದಲ್ಲಿಗೆ ಬಂದನು. ಹೆಜ್ಜೆಗಳನ್ನು ನೋಡಿದವನೇ ಅವನು ತನ್ನ ಜೇಬಿನಲ್ಲಿಯ ನಾಲು ತೆಗೆದು ಹೆಜ್ಜೆಯಲ್ಲಿ ಮೂಡಿದ ನಾಲಿಗೆ ಇಟ್ಟು ನೋಡಿದನು. ಕೂದಲೆಳೆಯಷ್ಟು ಬಿಡದೆ ಹೊಂದಿಕೆಯಾಯಿತು.

"ವಾಃ ವಾಃ! ಪಂಡಿತರೆ, ಈ ಪ್ರಕರಣದಲ್ಲಿ ದೈವವು ನಿಮಗೆ ಅನುಕೂಲವಾಯಿತು. ಆಗಲಿ. ಪ್ರತಿಯೊಂದು ಪ್ರಕರಣದಲ್ಲಿಯು ಪ್ರತಿಯೊಂದು ಮಾತಿನ ಶೋಧವು ನನ್ನಿಂದಲೇ ಆಗಬೇಕೆಂದು ಬರಕೊಟ್ಟಿದೆಯೇನು? ಬೆಳ್ಳೀಚುಕ್ಕೆಯು ಜಾಫರಸೇಟನ ಲಾಯದ ಮಾರ್ಗವಾಗಿ ಹೋಗಿದೆಯೆಂಬದರಲ್ಲಿ ಸಂದೇಹವಿಲ್ಲ." ಎಂದು ಸರಲಾಕ್ಷನು ವಿನೋದಗೈಯುತ್ತ ನುಡಿದನು.

" ಮತ್ತೆ ಈ ಏರಿಕೆಯಲ್ಲಿ ಕುದುರೆಯ ಖುರಪುಟಗಳ ಚಿಹ್ನಗಳು ಮೂಡಿದ್ದು ಕಾಣುವದಿಲ್ಲ. " ಎಂದು ನಾನು ನೆಲವನ್ನು ನಿರೀಕ್ಷಿಸುತ್ತ ನುಡಿದೆನು.

" ಈ ದಿನ್ನೆಯ ಇಳಿಕೆಯಲ್ಲಿ ನಾವು ಮತ್ತೆ ಆ ಚಿಹ್ನಗಳನ್ನು ಕಾಣ ಬಹುದು. ನೆಟ್ಟಗೆ ನಾವು ಪೂರ್ವದಿಶೆಯನ್ನು ನೋಡಿಕೊಂಡು ನಡೆವರಾ ಯಿತು. " ಎಂದು ಸರಲಾಕ್ಷನು ನುಡಿದನು.

ನಾವು ದಿನ್ನೆ ಬನ್ನಿಳಿದು ಅದರಡಿಯಲ್ಲಿದ್ದ ತೇವ ಭೂಮಿಗೆ ಬಂದೆವು.

" ನೋಡಿರಿ ರಾಯರೆ, ಇಲ್ಲಿ ಕುದುರೆಯ ಹೆಜ್ಜೆಗಳಿವೆ " ಎಂದು ಹೇಳಿ ನಾನು ಆ ಹೆಜ್ಜೆಗಳನ್ನು ಹುಲಿಮೀಸೆಗೆ ತೋರಿಸಿದೆನು. ಅವುಗಳನ್ನವನು ಕಣ್ಣಿಟ್ಟು ನೋಡಿ,

" ಮತ್ತೊಂದು ಚಮತ್ಕಾರವೇ! ಇಲ್ಲಿ ಕುದುರೆಗಳ ಹೆಜ್ಜೆಗಳೊಡ ನೆಯೇ ಮನುಷ್ಯನ ಹೆಜ್ಜೆಗಳಾದರೂ ಕಾಣುತ್ತವೆ. ಹಿಂದಿನ ಸ್ಥಳದಲ್ಲಿ ನಾವು ಈ ಮನುಷ್ಯನ ಹೆಜ್ಜೆಗಳನ್ನು ಕಾಣಲಿಲ್ಲ. ಅವನೆಲ್ಲಿಂದ ಬಂದನು? " ಎಂದು ಆಲೋಚಿಸುತ್ತ ಅವನು ಆ ಪ್ರದೇಶದಲ್ಲೆಲ್ಲ ಆಡ್ಡಾಡಿ ನೋಡಿದನು.

" ವಾತಾತ್ಮಜ, ಹೀಗೆ ಬನ್ನಿರಿ. ಕುದುರೆಯು ಮೊದಲು ತಾನೊಂದೆ ಯಾಗಿ ಜಾಫರನ ಲಾಯದ ಕಡೆಗೆ ಹೋಗಿದೆ. ಇಕೋ, ಇಲ್ಲಿ ಆ ಕುದು ರೆಯು ಹೊಡಮರಳಿ ಬಂದ ಹೆಜ್ಜೆಗಳಾದರೂ ಇವೆ. ಆಮೇಲೆ ಮನುಷ್ಯ ನೊಬ್ಬನ ಹೆಜ್ಜೆಗಳು ಜಾಫರನ ಲಾಯದಿಂದ ಬಂದಂತೆ ಮೂಡಿವೆ. ಹಿಂದಿ ನಿಂದ ಕುದುರೆಯೂ ಆ ಮನುಷ್ಯನೂ ಕೂಡಿಯೇ ಆ ಲಾಯದ ಕಡೆಗೆ ಹೋದ ಹೆಜ್ಜೆಗಳಿವು. "

" ಇದೆಲ್ಲದರ ಅರ್ಥವೇನು? " ಎಂದು ನಾನು ವಿಚಾರ ಮೂಢನಾಗಿ ಕೇಳಿದೆನು.

" ಅರ್ಥವೇನೆಂದರೆ, ಮೊದಲು ಕುದುರೆಯು ಜಾಫರನ ಲಾಯಕ್ಕೆ ಹೋಯಿತು. ಅಲ್ಲಿಯ ಕಾವಲುಗಾರನು ಆಗಂತುಕವಾದ ಅಶ್ವವನ್ನು ಹಿಂತಿ ರುವಿ ಹೊಡೆದಟ್ಟಿದನು. ಬಳಿಕ ಮತ್ತೊಬ್ಬ ಉಪದ್ವ್ಯಾಪಿಯಾದ ಪುರುಷ ನಿಗೆ ಅಲ್ಲಿ ಬಂದಿರುವ ಕುದುರೆಯು ಬೆಳ್ಳೀಚಿಕ್ಕೆಯೇ ಎಂದು ತಿಳಿದ ಕೂಡಲೆ ಅವನು ಅದನ್ನು ಮತ್ತೆ ಹಿಡುಕೊಂಡು ಹೋಗಿದ್ದಾನೆ. ಕುದುರೆಯು ಜಾಫರ

ಸೇಟನ ಲಾಯದಲ್ಲಿಯಾಗಲಿ, ಅಲ್ಲಿಯೇ ಸಮೀಪದಲ್ಲಿ ಮತ್ತೆಲ್ಲಿಯಾಗಲಿ ಸುರಕ್ಷಿತವಾಗಿವೆ. ನಡೆಯಿರಿ, ಬೇಗ ಬೇಗ ಹೆಜ್ಜೆಗಳನ್ನಿಕ್ಕಿರಿ" ಎಂದು ಹೇಳಿ ಸರಲಾಕ್ಷನು ಪೈಗುವಿನ ವೇಗದಿಂದ ನಡೆಯಲಾರಂಭಿಸಿದನು.

ಜಾಫರನ ಲಾಯಕ್ಕೆ ಬಂದೆವು. ಆಳು ಒಬ್ಬನು ಕೊಡ ತೆಗೆದುಕೊಂಡು ನೀರಿಗೆ ನಡೆದಿದ್ದನು. ನಮ್ಮನ್ನು ಕಾಣುತ್ತಲೆ ಆವನು ಸಟೆಯಿಂದ ನಿಂತುಕೊಂಡು "ಯಾರು ನೀವು? ಯಜಮಾನರಿಗಿಂತ ಯಜಮಾನರಾಗಿ ನಿಮ್ಮಿಚ್ಛೆಯಿಂದಲೇ ಒಳಗೆ ನಡೆದಿರುವಿರಿ?" ಎಂದು ಗ್ರಾಮ್ಯನಿಗುಚಿತವಾದ ಔದ್ಧತ್ಯದಿಂದ ಕೇಳಿದನು. ಆ ಮನುಷ್ಯನ ಬಾಯಿ ಕೇಳುತ್ತಲೆ ಜಾಫರನ ಅಶ್ವಶಿಕ್ಷಕನಂತೆ ಕಾಣುವ ಮನುಷ್ಯನೋರ್ವನು ಕೈಯಲ್ಲಿ ಚಬಕವನ್ನು ತೆಗೆದುಕೊಂಡು ಬಂದು "ಯಾರವರು ಕೆಂಜೆಡೆಯಪ್ಪಾ?" ಎಂದು ಒಳ್ಳೇ ಕೋಪವಶನಾಗಿ ಕೇಳಿದನು.

"ಯಾರೋ ನೀವೇ ನೋಡಿರಿ, ಗುಲಾಮಹುಸೇನಸಾಬರೆ, ಇಲ್ಲಿಯೇ ನಿಂತಿದ್ದಾರೆ." ಎಂದು ಕೆಂಜೆಡೆಯು ಹೇಳಿದನು.

"ಯಾರು ನೀವು? ನಿಮಗೆಷ್ಟು ಪರಿಯಾಗಿ ಹೇಳಿದರೂ ನೀವು ಕೇಳುವದಿಲ್ಲ. ಒಬ್ಬರ ಲಾಯದಲ್ಲಿ ಒಬ್ಬರು ಬಂದು ಕಿಡಿಗೇಡಿತನವನ್ನು ಮಾಡುವಿರಲ್ಲವೆ? ತಡೆಯಿರಿ, ನಾಯಿಗಳನ್ನು 'ಛೂ' ಬಿಟ್ಟು ನಿಮ್ಮ ಕಾಲಿನ ಮೀನಗಂಡಗಳನ್ನು ಹರಿಸಿದಾಗ ಮಾತ್ರ ನಿಮ್ಮ ಕಣ್ಣುಗಳು ತೆರೆಯುವವು." ಎಂದು ನುಡಿದು ಗುಲಾಮಹುಸೇನನು ನಾಯಿಗಳ ಸರಪಣಿಗಳನ್ನು ಬಿಚ್ಚಹೋದನು.

"ಗುಲಾಮಹುಸೇನ್, ಉತ್ತಮವಾದ ಆ ನಾಯಿಗಳನ್ನು ನಮ್ಮ ಮೈಮೇಲೆ ಬಿಡಹೋಗಿ ವ್ಯರ್ಥವಾಗಿ ಅವುಗಳನ್ನು ಕೊಲ್ಲಿಸಬೇಡ. ಇಕೋ ನೋಡು, ನನ್ನ ಕೈಯ್ಯಲ್ಲಿ ಪಿಸ್ತೂಲು ಇದೆ!" ಎಂದು ಹುಲಿಮೀಸೆಯು ಬಹು ಶಾಂತವೃತ್ತಿಯವನಾಗಿ ಗುಲಾಮಹುಸೇನನಿಗೆ ಬುದ್ಧಿಯನ್ನು ಹೇಳಿದನು.

"ಕೊಲ್ಲು ನೋಡುತ್ತೇನೆ," ಎಂದು ಗುಲಾಮಹುಸೇನನಿಯು ಎದೆಯುಬ್ಬಿಸಿಕೊಂಡು ಹಿಂತಿರುಗಿ ಹುಲಿಮೀಸೆಯನ್ನು ನೋಡುತ್ತ ಶಾತ್ಯದಿಂದ ಕೇಳಿದನು.

"ಹಾಗಲ್ಲ ಸಾಬರೆ, ನಾವು ರಾಜಧಾನಿಯ ನಿವಾಸಿಗಳು. ಇಲ್ಲಿಯ

ಉಸಾಬರಿಯನ್ನು ಮಾಡಿ ನಮಗೇನು ಕಟ್ಟಿಕೊಳ್ಳಬೇಕಾಗಿದೆ ?" ಎಂದು ಸವಿಮಾತಾಡುತ್ತ ಸರಲಾಕ್ಷನು ಹುಸೇನಿಯ ರಟ್ಟೆಯಲ್ಲಿ ಕೈಹಾಕಿ ಅವನ ಕಿವಿಯಲ್ಲಿ ಏನೋ ಹೇಳಿದನು.

" ಏನು ? ಏನೆಂದಿರಿ ? "

" ಸುಮ್ಮನಿರು. ಮೂರನೆಯವನ ಕಿವಿಮುಟ್ಟುವಂತೆ ನೀನು ಮಾತಾಡಿದರೆ ಕೋಳದಲ್ಲಿ ನಿನ್ನ ಕೈಸಿಕ್ಕುವದು. ಹೀಗೆ ಏಕಾಂತಕ್ಕೆ ಬಾ." ಎಂದು ಹುಲಿಮೀಸೆಯು ಅವನನ್ನು ಒತ್ತಟ್ಟಿಗೆ ಕರಕೊಂಡು ಹೋಗಿ ಅವನೊಡನೆ ಅರ್ಧಗಳಿಗೆಯ ವರೆಗೆ ಏನೇನೋ ಮಾತಾಡಿದನು. ಗುಲಾಮನು ಜೊಮ್ಮನೆ ಜೋತುಗೊಂಡು ಕೇಳುತ್ತಿದ್ದನು.

ಮಾತು ಮುಗಿದ ಬಳಿಕ ಹುಲಿಮೀಸೆಯು ನನ್ನನ್ನು ಕುರಿತು "ವೈದ್ಯರೆ, ನಡೆಯಿನ್ನು ನಮ್ಮ ಕೆಲಸವಾಯಿತು," ಎಂದು ಸಂತೋಷದಿಂದ ನುಡಿದು ನನ್ನನ್ನು ಕರಕೊಂಡು ನಡೆದನು. ಹೋಗುವಾಗ ಅವನು ಗುಲಾಮಹುಸೇನಿಯನ್ನು ಚದರಿಸಿ "ನೋಡು, ನಾನು ಹೇಳಿದಂತೆ ಮಾಡಲು ತಪ್ಪಿದಿಯಾದರೆ ನಿನ್ನ ಚರ್ಮವನ್ನೇ ಸುಲಿಸುವೆನು" ಎಂದು ಶಾಸನಗೈದನು.

" ಪಂಡಿತ, ನಾವಿನ್ನು ಕುವರಬಾಯಿಯ ಮನೆಗೆ ಹೋಗಬೇಕಲ್ಲವೆ ? ಅವಳು ಎಂಥ ಸ್ವಭಾವದವಳಾದ ತರುಣಿಯೆಂಬದು ನಿಮಗೆ ಅರಿಕೆಯಾಗಿದೆಯೊ ? "

" ನನಗೆ ತಿಳಿದಿಲ್ಲ. ಕುವರಬಾಯಿಯು ಠಾಕೂರಸಿಂಗನ ಹೆಂಡತಿಯೆಂಬದಿಷ್ಟೇ ಸರಿ. "

" ಇರಬಹುದು. ಆದರೆ ಅವಳು ವೇಷ ಒಯ್ಯಾರಗಳಿಂದ ನಟಿಸುತ್ತಿರುವ ದುಂದುಗಾರತಿಯೆಂಬದನ್ನಾದರೂ ನೀವು ಊಹಿಸಬಹುದಲ್ಲವೆ ? "

" ಹಾಗೆ ತೋರುತ್ತದೆ " ಎಂದು ನಾನು ಒಪ್ಪಿಕೊಂಡೆನು.

" ಇಂಥ ಹೆಂಡತಿಯ ಅನುರೋಧದಿಂದ ನಡೆಯುವ ಪತಿಯ ಉತ್ಪನ್ನಕ್ಕಿಂತಲೂ ವೆಚ್ಚವು ಅಧಿಕವಾಗಿಯೇ ಇದ್ದಿರಬೇಕು. ಗಂಡ ಸತ್ತವಳಾದ ಕುವರಬಾಯಿಯ ಆಚರಣವನ್ನು ನೋಡಿ ನೀವು ಹೀಗೆ ಊಹಿಸುವಿರಾದರೆ, ಠಾಕೂರಸಿಂಗನು ಜೀವಂತನಿರುವಾಗ ನೀವು ಅವಳ ನಡಾವಳಿಯನ್ನು ಕಂಡಿದ್ದರೆ ನಿಮ್ಮ ಅಭಿಪ್ರಾಯವು ಏನಾಗುತ್ತಿತ್ತೋ ನೋಡಿಕೊಳ್ಳಿರಿ. ಸದ್ಯಕ್ಕೆ

ಈ ಮಾತು ಸಾಕು. ಇದರ ಸಂದರ್ಭವನ್ನು ನಾನು ನಿಮಗೆ ಒಂದೆರಡು ದಿವಸಗಳಲ್ಲಿಯೇ ಹೇಳುವೆನು.''

ಹೀಗೆ ಮಾತಾಡುತ್ತ ನಾವು ಕುವರಬಾಯಿಯ ಮನೆಗೆ ಬಂದೆವು. ಅಲ್ಲಿ ರಾಸಬಿಹಾರಿಯೂ ಕೃಷ್ಣಭುಜಂಗನೂ ನಮ್ಮ ಮಾರ್ಗಪ್ರತೀಕ್ಷೆ ಮಾಡುತ್ತಲೇ ಕುಳಿತಿದ್ದರು.

'' ಓ! ಸರಲಾಕ್ಷರಾಯರೆ, ಬನ್ನಿರಿ. ಎಲ್ಲೆಲ್ಲಿ ತಿರುಗಾಡಿ ಬಂದಿರಿ? ಈ ಪ್ರಕರಣದ ಸಂಬಂಧವಾಗಿ ಮತ್ತೇನಾದರೂ ಸಂಗತಿಗಳನ್ನು ಕಂಡುಕೊಂಡಿರೋ ? '' ಎಂದು ಕೃಷ್ಣಭುಜಂಗನು ಕೇಳಿದನು.

'' ಹೇಳಿಕೊಳ್ಳುವಂಥ ಸಂಗತಿಗಳೇನು ಕಂಡುಬರಲಿಲ್ಲ '' ಎಂದು ಹುಲಿವಿಲಾಸೆಯು ಮುಗುಳುನಗೆ ನಕ್ಕು ಹೇಳಿದನು.

'' ಉಪಾಯವಿಲ್ಲ ಹುಲಿವಿಲಾಸೆಯವರೆ. ನಾಳಿನ ಶರ್ಯತ್ತಿನಲ್ಲಿ ನಮ್ಮ ಬೆಳ್ಳೀ ಚಿಕ್ಕೆಯ ಚಮತ್ಕಾರವಾದ ಚಾಪಲ್ಯವನ್ನು ಕಂಡು ಕೌತುಕಬಡುವದಕ್ಕಾಗಿ ಅನೇಕ ಸ್ಥಳಗಳಿಂದ ಅಸಂಖ್ಯಾತರಾದ ಜನರು ಬರತಕ್ಕವರು. ಆ ನನ್ನ ಅಶ್ವರತ್ನವು ಸಮಯಕ್ಕೆ ಸಿಕ್ಕದಿರುವದರಿಂದ ಅಷ್ಟೆಲ್ಲ ಜನರು ನಿರಾಶೆಯನ್ನು ಹೊಂದಬೇಕಾಗುವದು. ಆದ ಕಾರಣ ಬೆಳ್ಳೀ ಚಿಕ್ಕೆಯು ಶರ್ಯತ್ತಿಗೆ ಬರುವದಿಲ್ಲವೆಂದು ನಾನು ಇಂದೆಯೇ ಪ್ರಕಟಿಸಿಬಿಡುವೆನು '' ಎಂದು ಸುಭೇದಾರನು ಉತ್ಸಾಹರಹಿತನಾಗಿ ನುಡಿದನು.

'' ಹಾಗೆ ಮಾತ್ರ ಮಾಡಬೇಡಿರಿ. ಬೆಳ್ಳೀ ಚಿಕ್ಕೆಯು ಶರ್ಯತ್ತಿನ ದಿನ ಒಳ್ಳೇ ಸ್ಫೂರ್ತಿಯಿಂದ ಓಡಿ ವಿಜಯಿಯಾಗುವದೆಂದು ನಾನು ಎದೆತಟ್ಟಿ ಹೇಳುವೆನು '' ಎಂದು ಹುಲಿವಿಲಾಸೆಯು ಹಾಗೆ ನಟಿಸಿ ಹೇಳಿದನು.

'' ನನ್ನ ಕುದುರೆಯು ಮತ್ತೆ ಹುಟ್ಟಿ ಬರಬೇಕಾಗಿಲ್ಲವಲ್ಲ! ಏನು ಹೇಳುವಿರಿ ರಾಯರೆ ?''

'' ಸತ್ತದ್ದೇ ನಿಜವಾದರೆ ಬೆಳ್ಳೀ ಚಿಕ್ಕೆಯು ಹುಟ್ಟಿಯಾದರೂ ಬರುವದು. ಬದುಕಿದ್ದರಂತೂ ಬಂದೇ ಬರುವದು. ಹೇಗೆ ಬಂದರೇನು ನಿಮ್ಮ ಕುದುರೆಯೇ ನಾಳಿನ ಶರ್ಯತ್ತನ್ನು ಗೆದ್ದರಾಯಿತು.''

'' ಅಂದರೆ ? ''

''ಅಂದರಿಲ್ಲ, ಬಿಟ್ಟರಿಲ್ಲ. ನಾನು ಹೇಳುವದು ನಿಜವು. ಹೇಗೆಂಬದನ್ನು

ಮಾತ್ರ ಕೇಳಬೇಡಿರಿ.''

ಕುವರಬಾಯಿಯು ಚಹ ಉಪಹಾರಗಳನ್ನು ತರಿಸಿ ನಮ್ಮೆಲ್ಲರಿಗೆ ತೆಗೆದು ಕೊಳ್ಳ ಹೇಳಿದಳು. ಆದಾದ ಬಳಿಕ ನಾವೆಲ್ಲರೂ ರಥದಲ್ಲಿ ಕುಳಿತು ಸುಭೇದಾರರ ಮನೆಗೆ ಬಂದೆವು. ಬಂದ ಕೂಡಲೆ ಹುಲಿಮಿಾಸೆಯು ಗಂಟು ಕಟ್ಟಿಸಿ ಕೊಂಡು ರಾಜಧಾನಿಗೆ ಹೊರಡಲು ಸಿದ್ಧನಾಗಿ ನಿಂತುಕೊಂಡನು. ಭೋಜನ ತೀರಿಸಿಕೊಂಡು ಹೋಗಿರೆಂದು ಸುಭೇದಾರನು ಹೇಳಿಕೊಂಡರೂ ಕೇಳಲಿಲ್ಲ. ರೈಲಿನ ಸಮಯವೇ ಆಗಿತ್ತಾದ್ದರಿಂದ ಭೋಜನಕ್ಕೆ ಅವಕಾಶವಿರಲಿಲ್ಲ.

“ಬರುತ್ತೇನೆ ಸುಭೇದಾರ. ನಾಳಿನ ಶರ್ಯತ್ತಿನ ದಿವಸ ನಾನಿಲ್ಲಿಗೆ ನಿಶ್ಚಯವಾಗಿ ಬರುವೆನು. ಬೆಳ್ಳೀ ಚಿಕ್ಕೆಯ ಹೆಸರು ಬಹಳ ಹೇಳುತ್ತಾರೆ. ಅದರ ಓಡಾಟವನ್ನು ನೋಡುವ ಕುತೂಹಲವು ನನಗಾಗಿದೆ” ಎಂದು ಹೇಳಿದವನೇ ಹುಲಿಮಿಾಸೆಯು ರಥದಲ್ಲಿ ಕುಳಿತನು. ಬಸವನ ಹಿಂದೆ ಬಾಲವೆಂಬಂತೆ ನಾನೂ ಅವನೊಡನೆ ನಡೆದೆನು.

* * * *

ವಾತಾಪೀಪುರದ ಗುಡ್ಡದ ಓರೆಯಲ್ಲಿರುವ ಬಯಲಿನಲ್ಲಿ ಗಾಲಿಯ ಅಂಚಿನಂತೆ ವರ್ತುಲಾಕಾರವಾಗಿ ಒಂದು ಬೀದಿಯನ್ನು ಮಾಡಿದ್ದರು. ಆ ಬೀದಿಯ ಸುತ್ತಲೂ ಕಣಗಟ್ಟಿ ಜನಜಾತ್ರೆ ನೆರೆದಿತ್ತು. ಬೀದಿಯ ಒಳ ಮಗ್ಗಲಿಗಿರುವ ಮಂಡಲಾಕಾರವುಳ್ಳ ಪ್ರದೇಶದ ಮಧ್ಯಭಾಗದಲ್ಲಿ ನಾಲ್ಕಾರು ಭವ್ಯವಾದ ತಂಬುಗಳನ್ನು ಹೊಡೆದಿದ್ದರು. ಗರ್ಭಶ್ರೀಮಂತರಾದ ನರನಾರಿಯರು ಮನದುಬ್ಬಿನಿಂದ ತಂಬುಗಳ ಸುತ್ತಲೂ ಎಡೆಯಾಡುತ್ತಿದ್ದರು. ಬೀದಿಯ ಒಂದು ಮಗ್ಗಲಿಗೆ ಜನಸಂದಟ್ಟಣೆಯಿದ್ದರೆ ಈಚೆಯ ಮಗ್ಗಲು ಕಟ್ಟಿರುವ ಮಂಚಿಕೆಗಳ ಮೇಲೆ ಧನಸಂಪನ್ನರಾದ ಜನರು ಕುಳಿತುಕೊಂಡು ಇನ್ನು ಮೇಲೆ ನಡೆಯತಕ್ಕ ಶರ್ಯತ್ತುಗಳನ್ನು ನೋಡತಕ್ಕವರು. ನೆಲದ ಮೇಲೆ ನಿಲ್ಲಲೊಲ್ಲದೆ ಸ್ಫೂರ್ತಿಯಿಂದ ಅಂತರಗಾಲಿಟ್ಟು ಕುಣಿಯುವ ಕುದುರೆಗಳನ್ನೇರಿಕೊಂಡು ರಾವುತರು ಶರ್ಯತ್ತಿನ ಸಮಯನಿರೀಕ್ಷಣವನ್ನು ಬಹು ಕಷ್ಟದೊಂದಿಗೆ ಮಾಡುತ್ತಿದ್ದರು. “ಅದೋ ನೋಡಿರಿ ‘ಗಾಳಿಯ ಮಿಂಡ,’ ‘ಅದು ಕಡಿದ ಬಂಟ’, ‘ಎಂಥ ಉತ್ತಮವಾದ ತೇಜಿಯಿದು?’, ‘ಬೆಳ್ಳೀ ಚಿಕ್ಕೆ ಎಲ್ಲಿಯೂ ಕಾಣುವದಿಲ್ಲ’” ಹೀಗೆ ನೆರೆದವರಲ್ಲಿ ಅನೇಕರು ಅನೇಕವಾದ

ಉದ್ಗಾರಗಳನ್ನು ತೆಗೆದರು. "ಧಣ್! ಧಣ್! ಧಣ್! ಧಣ್!" ಎಂದು ಝಾಗಟೆಯು ನಾಲ್ಕು ಬಾರಿಸಿತು. ಸಂಗಡಲೆ ಕುದುರೆಗಳೆಲ್ಲ ಬೀದಿಗೆ ಬಂದು, ಸಾಲುಹಿಡಿದು ಓಡಲುದ್ಯುಕ್ತವಾಗಿ ನಿಂತುಕೊಂಡವು. ವಾತಾಪೀಪುರದ ದೇಸಾಯರ ದಳವಾಯಿಯು ಫ್ರೋಂ ಫ್ರೋಂ ಫ್ರೋಂ ಎಂದು ಕಹಳೆಯನ್ನೂದಿದ ಕೂಡಲೆ ಕುದುರೆಗಳೆಲ್ಲ ಆರ್ಭಟಿಯಿಂದ ಹೇಂಕರಿಸಿ ಧಿಂಕಿಟ್ಟು ಓಡಿದವು. "ಗಾಳಿಯ ಮಿಂಡನೇ ಅದು, ಅದೇ ಎಲ್ಲಕ್ಕೂ ಮುಂದೆ ಬರುವದು" ಎಂದು ಕೆಲವರು ಉದ್ಗಾರ ತೆಗೆದರು. "ಅಕೋ ನೋಡಿರಿ, 'ವೀರಕೇಸರಿ'ಯು ಎಲ್ಲ ಕುದುರೆಗಳನ್ನು ಹಿಂದೆ ಹಾಕಿ ಸುಂಟರಗಾಳಿಯ ವೇಗದಿಂದ ನಡೆದಿರುವದು" ಎಂದು ಅನೇಕರು ಒಂದೇ ಧ್ವನಿಗೊಟ್ಟು ಕೂಗಿದರು. "ಕಡಿದ ಬಂಟನ ಕಡಿತವೇ ಯಾರಿಗೂ ತಿಳಿದಿಲ್ಲ. ಈಗ ನೋಡಿರಿ. ಅದೇ ಹೇಗೆ ಚಮತ್ಕಾರವಾಗಿ ಎಲ್ಲ ಕುದುರೆಗಳನ್ನು ಹಿಂದೆ ಹಾಕುವದು" ಎಂದು ಅನೇಕರು ತಮಗೆ ಪರಿಚಿತವಾದ ಕುದುರೆಯ ಗುಣವನ್ನು ಕಂಡವರಾಗಿ ತರ್ಕಿಸಿದರು.

"ಅಬ್ಬಬ್ಬ! ಆ ಕರಿಗುದರಿಯನ್ನು ನೋಡಿರಿ. ಅದೇನು ಕುದುರೆಯೋ ವೇತಾಳವೋ ಕಾಣೆವು. ತಾಯಿಗಂಡನದು ಮೊದಲು ಮೊದಲು ಹಿಂದಕ್ಕುಳಿದಂತೆ ಮಾಡಿ ಈಗ ಹೇಗೆ ಮಿಂಚಿನ ಚಪಲತೆಯಿಂದ ಓಡಿತು. ಅಷ್ಟು ಜನರ ಮಾತೆಲ್ಲ ಸುಳ್ಳು; ಈ ಕರಿಗುದರಿಯೇ ವಿಜಯಿಯಾಗುವದು; ಸಂದೇಹವಿಲ್ಲ" ಎಂದು ನೆರೆದ ಪರಸಿಗೆ ಪರಸಿಯೇ ಉದ್ಗಾರ ತೆಗೆಯಿತು.

ಸಂಗಡಲೆ ಅನೇಕರು ತಮ್ಮ ಕಣ್ಣಿಗೆ ದೃಷ್ಟಿಯಂತ್ರಗಳನ್ನಿಕ್ಕಿಕೊಂಡು ನೋಡಿದರು. ಅನೇಕರು ಹುಬ್ಬುಗೈಯಿಕ್ಕಿ ನೋಡಿದರು. ಚಪಲರಾದ ಹುಡುಗರು ಮರಗಳನ್ನೇರಿಕೊಂಡು ನೋಡಲಾರಂಭಿಸಿದರು. ಅವರು ನೋಡನೋಡುವಷ್ಟರಲ್ಲಿಯೇ ಆ ಕೃಷ್ಣವರ್ಣದ ತುರಂಗವು ಎಲ್ಲ ಕುದುರೆಗಳನ್ನು ಹತ್ತಿಪ್ಪತ್ತು ಮಾರು ಹಿಂದೊಗೆದು ಘಾಜಿಯ ಕಟ್ಟಿಗೆ ಬಂದು ನಿಂತಿತು. ಪ್ರಮುಖರೆಲ್ಲರೂ ಜಯಘೋಷವನ್ನು ಮಾಡಿ ಕುದುರೆಯಿದ್ದಲ್ಲಿಗೆ ಬಂದು ಒಳ್ಳೇ ಅಕ್ಕರತೆಯಿಂದ ಅದರ ಹೆಡಕು ಚಪ್ಪರಿಸಿದರು.

"ಓ! ಹುಲಿಮೀಸೆಯವರೆ, ಯಾವಾಗ ಬಂದಿರಿ? ಎಲ್ಲಿದೆ ನನ್ನ ಜೆಳ್ಳೇ ಚಿಕ್ಕೆ? ಅದೇ ಇಂದಿನ ದಿವಸ ವಿಜಯಿಯಾಗುವದೆಂದು ಎದೆಗೆ ಕಣಕ

ವನ್ನು ಹಚ್ಚಿಕೊಂಡು ಹೇಳಿದ್ದಿರಿ!" ಎಂದು ರಾಸಬಿಹಾರಿಯು ಸರಲಾಕ್ಷನ ಉಪಮರ್ದನವನ್ನು ಮಾಡಿ ನುಡಿದನು.

ಸರಲಾಕ್ಷನು ಒಳಿತಾಗಿ ನಕ್ಕು "ಸುಭೇದಾರರೆ, ನಿಮ್ಮ ಕುದುರೆಯ ಗುರುತು ನಿಮಗಿಲ್ಲದಾಯಿತೆ? ಈ ಬಂಟನಾರು?" ಎಂದು ಆ ಕರಿಗುದುರೆಯನ್ನು ತೋರಿಸಿ ಕೇಳಿದನು.

"ಇದು ನನ್ನ ಕುದುರೆಯೆ? ಇದು ಬೆಳ್ಳೀಚಿಕ್ಕೆಯೇ? ಇದರ ಹಣೆಯ ಮೇಲೆ ಒಂದಾದರೂ ಬಿಳಿಕೂದಲಿಲ್ಲ. ನನ್ನ ಕುದುರೆಯ ಹಣೆಯ ಮೇಲೆ ಚಂದ್ರಮನಷ್ಟು ಥಾಳವಾದ ಹಣೆಚಿಕ್ಕೆಯಿದೆ!" ಎಂದು ಸುಭೇದಾರನು ಶಂಕಾಯುತನಾಗಿ ನುಡಿದನು.

"ಹೀಗೆ ಆ ಕುದುರೆಯನ್ನು ತೆಗೆದುಕೊಂಡು ಒತ್ತಟ್ಟಿಗೆ ಬನ್ನಿರಿ" ಎಂದು ಹೇಳಿ ಹುಲಿಮೀಸೆಯು ಸುಭೇದಾರನನ್ನೂ ಕುದುರೆಯನ್ನೂ ಕಟ್ಟಿಕೊಂಡು ತಂಬುವಿಗೆ ಬಂದನು. ಅಲ್ಲಿ ಆ ಮಹಾಶೋಧಕನು ಟರ್ಪೆಂಟೈ ಎಣ್ಣೆಯಿಂದ ಕುದುರೆಯ ಹಣೆ ತೊಳಿಸಲಾಗಿ ನಿಜವಾಗಿಯೇ ಚಂದ್ರಮನಂತೆ ಥಾಳವಾದ ಹಣೆಚಿಕ್ಕೆಯು ಸುವ್ಯಕ್ತವಾಗಿ ತೋರಿತು. ಸುಭೇದಾರನು ಸಂತೋಷದ ಭರದಲ್ಲಿ ಕುದುರೆಯ ಕೊರಳಿಗೆ ಬಿದ್ದು ಅದನ್ನು ಅಪ್ಪಿಕೊಂಡನು.

"ಸರಲಾಕ್ಷರಾವ್, ಇಂದು ನನಗೆ ಸಿಕ್ಕತಕ್ಕ ಬಹುಮಾನದ ಹಣವೆಲ್ಲ ನಿಮ್ಮದೆ. ಹಾಗೆ ನಗಬೇಡಿರಿ, ನಾನು ಸುಳ್ಳಾಡಿದವನಲ್ಲ. ಇಕೋ ಈ ಪಂಡಿತ ವಾತಾತ್ಮಜರೇ ನನ್ನ ವಚನಕ್ಕೆ ಸಾಕ್ಷಿಗಳಾಗಿದ್ದಾರೆ."

"ಆಗಲಿ, ನಿಮ್ಮ ಮನಸ್ಸಿಗೆ ತಿಳಿದಂತೆ ಮಾಡಿರಿ. ಇಷ್ಟೇ ಹಣ ಬೇಕೆಂದು ನಾನು ಆಗ್ರಹ ತೊಡುವದಿಲ್ಲ." ಎಂದು ಹುಲಿಮೀಸೆಯು ಹೇಳಿದನು.

"ಚತುರರಾದ ನನ್ನ ಮಹಾರಾಯರೆ, ನಿಮ್ಮ ಕೃಪೆಯಿಂದ ನನ್ನ ಅಶ್ವರತ್ನವನ್ನು ನಾನು ಮತ್ತೆ ಕಂಡೆನು. ಆದರೆ ನಮ್ಮ ಠಾಕೂರಸಿಂಗನ ಕೊಲೆ ಮಾಡಿದವನ ಶೋಧವು ಮಾತ್ರ ಇನ್ನೂ ಆಗಲಿಲ್ಲವಾಗಿ ತೋರುತ್ತದೆ" ಎಂದು ಸುಭೇದಾರನು ಕೇಳಿದನು.

"ಶೋಧವಾಗಿದೆ, ಆದರೆ ಆ ಶೋಧದಿಂದ ನಿಮಗೆ ಸಾಕಷ್ಟು

ಸಮಾಧಾನವಾಗಲಿಕ್ಕಿಲ್ಲ. ''

'' ಆಗಲಿ ಆಗದಿರಲಿ, ಠಾಕೂರಸಿಂಗನನ್ನು ಕೊಂದವನಾರು, ಹೇಳಿಬಿಡಿರಿ. ''

'' ಕೊಂದವನು ನನ್ನ ಬಳಿಯಲ್ಲಿಯೇ ನಿಂತಿರುವನು '' ಎಂದು ಪುಲಿವಿಾಸೆಯು ಸುಭೇದಾರನ ಮುಖವನ್ನು ನೋಡಿ ನುಡಿದನು.

'' ಏನೆಂದಿರಿ ? ಇದ್ದ ಮೂರು ಮಂದಿಯಲ್ಲಿ ಕದ್ದವರಾರಂತೆ ! ನೀವು ನಗೆಯಾಡುವದಿಲ್ಲವಷ್ಟೆ?'' ಎಂದು ಸುಭೇದಾರನು ಕಿಂಚಿತ್ ಕ್ರುದ್ಧನಾಗಿಯೂ ಕಿಂಚಿತ್ ಕುತೂಹಲವುಳ್ಳವನಾಗಿಯೂ ಕೇಳಿದನು.

'' ನಾನು ನಗೆಯಾಡುವದಿಲ್ಲ. ಠಾಕೂರಸಿಂಗನನ್ನು ಕೊಂದವನು ನನ್ನಿಂದ ಒಂದು ಮೊಳದ ಅಂತರದಲ್ಲಿಯೇ ನಿಂತಿರುವನು. ''

'' ಹುಲಿವಿಾಸೆ, ನೀವು ನನ್ನನ್ನು ಉದ್ದೇಶಿಸಿ ಹೀಗೆ ಮಾತಾಡಿದ್ದಾದರೆ ನಿಮ್ಮ ನಾಲಿಗೆ ಜೋಕೆ, ಕಂಡಿರಾ ! ''

ಹುಲಿವಿಾಸೆಯು ಸುಭೇದಾರನಿಗೆ ಪ್ರಣಾಮಮಾಡಿ ನಗುತ್ತ "ಕ್ಷಮಿಸಿರಿ ಸುಭೇದಾರರೆ. ನಾನು ನಿಮ್ಮನ್ನುದ್ದೇಶಿಸಿ ಹಾಗೆ ಮಾತಾಡಲಿಲ್ಲ. ಠಾಕೂರಸಿಂಗನ ಕೊಲೆಮಾಡಿದವನು ಈ ನಮ್ಮ ಬೆಳ್ಳೇಚಿಕ್ಕಪ್ಪನು '' ಎಂದು ಬೆಳ್ಳೇಚಿಕ್ಕಿಯ ಜುಟ್ಟುವನ್ನು ಆದರದಿಂದ ತೀಡುತ್ತ ನುಡಿದನು.

'' ಹೇಗೆ ? ಹೇಗೆ ? ಹೇಳಿರಿ. ''

'' ಮೊದಲು ಮನೆಗೆ ಹೋಗೋಣ, ಅಲ್ಲಿ ವಿಶ್ರಬ್ಧವಾಗಿ ಕುಳಿತುಕೊಂಡು ಎಲ್ಲ ಸಮಾಚಾರವನ್ನೂ ಹೇಳುವೆನು. ಕೊತವಾಲ ಕೃಷ್ಣಭುಜಂಗರನ್ನೂ ಹೀಗೆ ಕರೆಯಿರಿ '' ಎಂದು ಹುಲಿವಿಾಸೆಯು ಹೇಳಿದನು.

ನಾವೆಲ್ಲರೂ ರಥದಲ್ಲಿ ಕುಳಿತುಕೊಂಡು ಸುಭೇದಾರರ ಮನೆಗೆ ಹೋದೆವು. ಚಹಾಪಾನವಾದ ನಂತರ ಹುಲಿವಿಾಸೆಯು ತಾನು ಮಾಡಿದ ಶೋಧದ ಸಮಾಚಾರವನ್ನು ಹೇಳಲಾರಂಭಿಸಿದನು.

''ಸುಭೇದಾರ, ನಿಮ್ಮ ಠಾಕೂರಸಿಂಗನು ಅಸಂಭಾವಿತನಾದ ಮನುಷ್ಯನಾಗಿದ್ದನು. ಹೆಂಡತಿಯ ದಂಭಾಚಾರಕ್ಕಾಗಿ ಅವನು ಸಾಲಗೊಯ್ಯನಾದನು. ಅವನಿಗಿರುವ ಸಂಬಳ ಐವತ್ತು. ತಿಂಗಳಾ ಅವನ ವೆಚ್ಚವು ನೂರು ನೂರಿಪ್ಪತ್ತಾಗಿರಬಹುದು. ತನಗಾದ ಸಾಲ ತೀರಿಸುವದಕ್ಕಾಗಿ ಆ ನೀಚನು

ಅನ್ನದಾತರಾದ ನಿಮ್ಮ ಮೇಲೆ ದ್ರೋಹಮಾಡಹೋಗಿ ಜೀವಕ್ಕೆ ಎರವಾದನು."

"ಹೇಗೆ ದ್ರೋಹವನ್ನು ಮಾಡಲೆಸಗಿದನವನು ?" ಎಂದು ಕೃಷ್ಣ ಭುಜಂಗನು ಚಕಿತನಾಗಿ ಕೇಳಿದನು.

"ಬೆಳ್ಳೀಚಿಕ್ಕೆಯು ಶರ್ಯತ್ತಿನಲ್ಲಿ ಮುಂದೆ ಬರಬಾರದೆಂದು ಜಾಫರ ಸೇಟಸೇ ಮೊದಲಾದ ಅನೇಕ ಜನರು ಇಚ್ಛಿಸುವದು ವಿಹಿತವೇ. ಅದಕ್ಕಾಗಿ ಏನಾದರೂ ಮಾಡಿ ಆ ಕುದುರೆಯನ್ನು ಕುಂಟುಗೆಡವಿದರೆ ಠಾಕೂರಸಿಂಗನಿಗೆ ಸಾವಿರಾರು ರೂಪಾಯಿ ಕೊಡುವೆವೆಂದು ಜಾಫರನೇ ಮೊದಲಾದ ಜನರು ಸೂಚಿಸಿದ ಮೇರೆಗೆ ಠಾಕೂರನು ಆ ದುಷ್ಕೃತ್ಯವನ್ನು ಮಾಡಲಿಕ್ಕೆ ಸಿದ್ಧನಾದನು.

"ಸರರಾತ್ರಿಯ ಮೇಲೆ ಅವನು ಲಾಯಕ್ಕೆ ಬಂದು ತನ್ನ ಬಳಿಯಲ್ಲಿರುವ ದೊಂದು ಬೀಗದ ಕೈಯಿಂದ ಬಾಗಿಲನ್ನು ತೆರೆದನು. ಒಳಗಿನ ನಾಯಿಗಳು, ಪರಿಚಯದವನಾದ ಆ ಶಿಕ್ಷಕನನ್ನು ಕಂಡು ಬೊಗಳಲಿಲ್ಲ. ಠಾಕೂರಸಿಂಗನೇ ಗಂಗಾದೀನನ ಭೋಜನದಲ್ಲಿ ಅಫೀಮು ಕಲಿಸಿ ಮೊದಲೇ ಕಳಿಸಿದ್ದನಾದ್ದ ರಿಂದ ಅದನ್ನು ತಿಂದು ಗಂಗಾದೀನನು ಎಚ್ಚರದಪ್ಪಿ ಮಲಗಿಕೊಂಡು ಬಿಟ್ಟಿದ್ದನು.

"ಠಾಕೂರನು ಕುದುರೆಯನ್ನು ಆ ತಗ್ಗಿಗೆ ಒಯ್ದು ತನ್ನ ಉದ್ದಂಗಿ ಯನ್ನು ಗಿಡಕ್ಕೆ ತೂಗಹಾಕಿ ಕಡ್ಡಿಯನ್ನು ಕೊರೆದು ಮೇಣಬತ್ತಿಗೆ ದೀಪ ವನ್ನು ಅಂಟಿಸಿದನು. ಸುಟ್ಟಕಡ್ಡಿಯ ಚೂರನ್ನೂ ಮೇಣಬತ್ತಿಯ ರಸವನ್ನೂ ನೀವೆಲ್ಲರೂ ಆ ಸ್ಥಳದಲ್ಲಿ ಕಂಡಿರುವಿರಷ್ಟೆ ?

"ಬಳಿಕ ಆ ನೀಚನು ಚಾಕುವಿನಂಥ ತೀಕ್ಷ್ಣವಾದ ಶಸ್ತ್ರದಿಂದ ಬೆಳ್ಳೀಚಿಕ್ಕೆಯ ಒಳದೊಡೆಯೊಳಗಿನ ನರಕ್ಕೆ ನೋವು ಮಾಡಹೋದನು. ಕುದುರೆಯು ಬೆದರಿ ಹಾರಾಡಿತು. ಠಾಕೂರನು ತಾನು ತೆಗೆದುಕೊಂಡು ಬಂದ ಗದ್ದೇಮುಡಿಯ ವಸ್ತ್ರದಿಂದ ಕುದುರೆಯ ಹಿಂಗಾಲಿಗೆ ದಳಕಟ್ಟ ಹೋಗ ಲಾಗಿ ಬೆಳ್ಳೀ ಚಿಕ್ಕೆ ಮತ್ತಿಷ್ಟು ಬೆದರಿ ಸರಿದು ನಿಂತು ಒಳಿತಾಗಿ ಒದೆಯಿತು. ನಾಲುಳ್ಳ ಹಿಂಗಾಲಿನ ಖುರದ ಭರದ ಪೆಟ್ಟಿನಿಂದ ಠಾಕೂರಸಿಂಗನ ಹಣೆ ಯೊಡೆದು ಚಿಪ್ಪಾಡಿಯಾಗಿ ಅವನಲ್ಲಿಯೇ ಗತಪ್ರಾಣನಾಗಿ ಬಿದ್ದುಬಿಟ್ಟನು."

"ಮುಹಮ್ಮದ ಇಬ್ರಾಹಿಮನ ಗದ್ದೇಮುಡಿಯ ವಸ್ತ್ರವು ಠಾಕೂರನಿಗೆ

ಹೇಗೆ ಸಿಕ್ಕಿತು ? ” ಎಂದು ಕೃಷ್ಣಭುಜಂಗನು ಕೇಳಿದನು.

“ ಅದನ್ನು ತಾನು ಮಾರ್ಗದಲ್ಲಿ ಕಳಕೊಂಡೆನೆಂದು ಮಹಮ್ಮದನು ಹೇಳಲಿಲ್ಲವೆ ? ಅಕಸ್ಮಾತ್ತಾಗಿ ಸಿಕ್ಕ ವಸ್ತ್ರವು ತನ್ನ ಉಪಯೋಗಕ್ಕೆ ಬರುವದೆಂದು ತಿಳಿದು ಠಾಕೂರನು ಅದನ್ನು ಎತ್ತಿಕೊಂಡನು. ”

“ ಹಾಗಾದರೆ ಮಹಮದ ಇಬ್ರಾಹಿಮನು ನಿರ್ದೋಷಿಯು ? ” ಎಂದು ಕೃಷ್ಣಭುಜಂಗನು ಕೇಳಿದನು.

“ ಸಂದೇಹವೇಕೆ ? ನೀವು ಆ ನಿರಪರಾಧಿಯನ್ನು ನಾಳೆಯೇ ಬಿಟ್ಟು ಬಿಡಿರಿ. ”

# ಮನೋಹರ ಗ್ರಂಥಮಾಲೆ, ಧಾರವಾಡ

ಈ ಗ್ರಂಥಮಾಲೆಯು ೧೯೩೩ನೆಯ ಅಗಸ್ಟ ೧೫ಕ್ಕೆ ಪ್ರಾರಂಭವಾಗಿದೆ.

ಕಾದಂಬರಿ, ಸಣ್ಣಕತೆ, ನಾಟಕ, ಏಕಾಂಕ, ಹರಟೆ, ದಿನಚರಿ ಮೊದಲಾದ ಸರಸಸಾಹಿತ್ಯವನ್ನೆ ಈ ಗ್ರಂಥಮಾಲೆಯು ಪ್ರಕಟಿಸುತ್ತಿದೆ.

ಕಾವ್ಯ-ವಿಮರ್ಶೆ-ವಿಜ್ಞಾನ-ವಿಚಾರ ಸಾಹಿತ್ಯವನ್ನೂ ಗ್ರಂಥಮಾಲೆಯು **ಬಿಡಿಮುತ್ತುಗಳೆಂದು** ಆಗೀಗ ಪ್ರಕಟಿಸುತ್ತಿದೆ.

ಶ್ರೀಯುತರಾದ ದ. ರಾ. ಬೇಂದ್ರೆ, ವಿ. ಕೃ. ಗೋಕಾಕ, ರಂ. ಶ್ರೀ. ಮುಗಳಿ ಇವರು ಈ ಗ್ರಂಥಮಾಲೆಗೆ ಪ್ರಾರಂಭದಿಂದಲೂ ಸಾಹಿತ್ಯವಿಷಯದಲ್ಲಿ ಸಲಹೆಗಾರರಾಗಿ ಮಾರ್ಗದರ್ಶನ ಮಾಡುತ್ತಿದ್ದಾರೆ.

ಇಡಿ ಕನ್ನಡನಾಡಿನ ಸಿದ್ಧಹಸ್ತ ಬರೆಹಗಾರರೆಲ್ಲರೂ ಈ ಗ್ರಂಥಮಾಲೆಗಾಗಿ ಗ್ರಂಥಗಳನ್ನು ಬರೆದುಕೊಟ್ಟು ಇದರ ಗೌರವವನ್ನೂ ಕೀರ್ತಿಯನ್ನೂ ಹೆಚ್ಚಿಸಿದ್ದಾರೆ; ಇದರ ಸಾಹಿತ್ಯಸ್ಥಾನವನ್ನು ಉನ್ನತವಾಗಿಸಿದ್ದಾರೆ.

ಗ್ರಂಥಮಾಲೆಯ ಹೊಸ ವರ್ಷವು **ಅಗಸ್ಟ** ತಿಂಗಳಿಂದ ಪ್ರಾರಂಭವಾಗುತ್ತದೆ; ಜುಲೈ ತಿಂಗಳಿಗೆ ಮುಗಿಯುತ್ತದೆ.

ವರ್ಷದಲ್ಲಿ ಯಾವಾಗ ಬೇಕಾದರೂ ಈ ಗ್ರಂಥಮಾಲೆಗೆ ಹೊಸದಾಗಿ ಚಂದಾದಾರರಾಗಬಹುದು. ಆದರೆ ಆ ಹಿಂದೆ ಪ್ರಕಟವಾದ ಆ ವರ್ಷದ ಗ್ರಂಥಗಳನ್ನು ಮಾತ್ರ ಅಗಸ್ಟದಿಂದಲೆ ಪ್ರಾರಂಭವೆಂದು ತಿಳಿದು—ಅವರಿಗೆ ಕಳಿಸಿಕೊಡಲಾಗುವುದು.

ಚಂದಾಹಣವನ್ನು ಮುಂಗಡವಾಗಿ ಕೆಳಗೆ ಕಾಣಿಸಿದ ವಿಳಾಸಕ್ಕೆ ಮನಿಯಾರ್ಡರ ಮೂಲಕ ಕಳುಹಿಸಿಕೊಡಬೇಕು.

ಗ್ರಂಥಮಾಲೆಯ ನಡೆಯುವ ವರ್ಷದ ಗ್ರಂಥಗಳನ್ನು ಬಿಟ್ಟು ಹಿಂದಿನ ಗ್ರಂಥಗಳಿಗೆ ಚಂದಾಸವಲತ್ತು ಅನ್ವಯಿಸುವುದಿಲ್ಲ. ಅವನ್ನು ಮುಖಬೆಲೆ ಕೊಟ್ಟು ಕೊಳ್ಳಬೇಕಾಗುವುದು.

ಗ್ರಂಥಮಾಲೆಗೆ **ಒಂದೇ ಸಲಕ್ಕೆ ೧೫೦ ರೂಪಾಯಿಗಳನ್ನು** ಸಲ್ಲಿಸಿ ಆಜೀವ ಚಂದಾದಾರರಾಗಬಹುದು. ಅವರಿಗೆ ಅವರ ಆಜನ್ಮಪರ್ಯಂತ ಗ್ರಂಥಮಾಲೆಯಲ್ಲಿ ಪ್ರಕಟವಾಗುವ ಗ್ರಂಥಗಳನ್ನು ಹಾಗೆಯೆ ಸಲ್ಲಿಸಲಾಗುವುದು.

ಗ್ರಂಥಮಾಲೆಯ ಬಿಡಿಪುಸ್ತಕಗಳನ್ನು ವಿಶೇಷ ಸವಲತ್ತಿನಿಂದ ಅವರಿಗೆ ಪೂರೈಸಲಾಗುವುದು.

ಗ್ರಂಥಮಾಲೆಯ ವಾರ್ಷಿಕ ಚಂದಾ **ಎಂಟು ರೂಪಾಯಿ (೮-೦-೦)** ಮಾತ್ರ ಇದೆ.

ಗ್ರಂಥಮಾಲೆಯ ಕಾರ್ಯಾಲಯದಲ್ಲಿಯೆ ಬಂದು ಪುಸ್ತಕಗಳನ್ನು ತೆಗೆದುಕೊಂಡುಹೋಗಲಪೇಕ್ಷೆಯುಳ್ಳವರಿಗೆ ಮಾತ್ರ ಆರು ರೂಪಾಯಿ ಎಂಟಾಣೆ ( ೬-೮-೦ ) ತೆಗೆದುಕೊಳ್ಳಲಾಗುವುದು.

ಗ್ರಂಥಮಾಲೆಯಿಂದ ಒಂದು ವರ್ಷದಲ್ಲಿ ಹೆಚ್ಚುಕಡಿಮೆ ಕ್ರಾ. ಆ. ೧೦೦೦ ಪುಟಗಳಷ್ಟು ಸರಸಸಾಹಿತ್ಯವನ್ನು ಗ್ರಾಹಕರಾದವರಿಗೆ ಸಲ್ಲಿಸಲಾಗುತ್ತದೆ.

ವರ್ಷದಲ್ಲಿ ಪ್ರಕಟವಾಗುವ **ಗ್ರಂಥಗಳ ಸಂಖ್ಯೆಯು ಅವುಗಳ ಪುಟ ಸಂಖ್ಯೆಯಿಂದ** ಹೆಚ್ಚು ಕಡಿಮೆಯಾಗಬಹುದು.

ಹಿಂದಿನ ಗ್ರಂಥಗಳಿಗೆ 'ಬೇಡಿಕೆ'ಯನ್ನು ಕೊಡುವಾಗ **'ಸದ್ಯಕ್ಕೆ ಮಾರಾಟಕ್ಕೆ ದೊರೆಯುವ ಗ್ರಂಥಗಳ'** ಪಟ್ಟಿಯೊಳಗಿಂದಲೇ ಆಯ್ದು ಕೊಡಬೇಕು.

ಪುಸ್ತಕವ್ಯಾಪಾರಿಗಳು ತಮ್ಮ ಬೇಡಿಕೆಯನ್ನು ಕಳಿಸುವದರ ಜೊತೆಗೆ ಮುಂಗಡ ಹಣವನ್ನೂ ಕಳಿಸಬೇಕಾಗುವುದು.

ಅವರ ಬೇಡಿಕೆಯ ಒಟ್ಟು ಬೆಲೆಯ ಮೇಲೆ ೧೮¾% ಕಮಿಶನ್ ಕೊಡಲಾಗುವುದು.

**೧೫೦ ರೂಪಾಯಿಗಳ ಮೇಲ್ಪಟ್ಟು ಬೇಡಿಕೆ ಕಳುಹಿಸಿದಲ್ಲಿ** Free Delivery **ಕೊಡುವ ಸವಲತ್ತಿದೆ.**

ಪ್ಯಾಕಿಂಗ್, ಅಂಚೆವೆಚ್ಚ ಪ್ರತ್ಯೇಕ.

**ವಿಳಾಸ :**

ಸಂಪಾದಕ
**ಮನೋಹರ ಗ್ರಂಥಮಾಲಾ**
**ಧಾರವಾಡ**

# ಸದ್ಯಕ್ಕೆ ಮಾರಾಟಕ್ಕೆ ದೊರೆಯುವ ಗ್ರಂಥಗಳು

## ಕಾದಂಬರಿಗಳು :

| | | | |
|---|---|---|---|
| ೧ | ಧರ್ಮಸೆರೆ | ಜಡಭರತ | .... ೨ ೦ ೦ |
| ೨ | ನಿಸರ್ಗ | ಮಿರ್ಜಿ ಅಣ್ಣಾರಾಯರು | .... ೩ ೮ ೦ |
| ೩ | ರಾಷ್ಟ್ರಪುರುಷ | ,, ,, | .... ೮ ೦ ೦ |
| ೪ | ಅನಂತ | ಸತ್ಯಬೋಧ | .... ೧ ೪ ೦ |
| ೫ | ಭಗ್ನಮಂದಿರ | ಹೇಮಂತ | ... ೪ ೮ ೦ |
| ೬ | ಅನ್ನ | ರಂ. ಶ್ರೀ. ಮುಗಳಿ | .... ೪ ೦ ೦ |
| ೭ | ಕಾರಣಪುರುಷ | ,, ,, | .... ೧ ೮ ೦ |
| ೮ | ಗಂಗಾಸಾನಿ | ವರಗಿರಿ | .... ೧ ೧೪ ೦ |
| ೯ | ಮಾದನ ಮಗಳು | ಎಂ. ವಿ. ಸೀ. | .... ೬ ೦ ೦ |
| ೧೦ | ಮುನಿಯನ ಮಾದರಿ | ಕೆ. ಎ. ಎನ್. ರಾವ್ | .... ೨ ೧೨ ೦ |
| ೧೧ | ಮೇದಿನಾಪುರದ ಮಲ್ಲ | ಗುರುರಾಜ ಜೋಶಿ | .... ೨ ೧೩ ೦ |
| ೧೨ | ಔರಂಗಜೇಬ | ಕೆರೂರ ವಾಸುದೇವಾಚಾರ್ಯರು | ... ೩ ೦ ೦ |
| ೧೩ | ವಾಲ್ಮೀಕಿ ವಿಜಯ | ,, ,, | .... ೧ ೦ ೦ |
| ೧೪ | ಯವನ ಸೈರಂಧ್ರೀ | ,, ,, | .... ೨ ೪ ೦ |
| ೧೫ | ಇಂದ್ರಚಾಪ | ರಂಗರಾವ ತಲಚೇರಕರ | .... ೨ ೮ ೦ |
| ೧೬ | ಎರಡನೆಯ ಸಂಬಂಧ | ಎನ್ಕೆ. ಕುಲಕರ್ಣಿ | .... ೩ ೦ ೦ |
| ೧೭ | ಮರ್ಯಾದೆ-ಮಹಲು | ಅಶ್ವತ್ಥ | .... ೩ ೮ ೦ |

## ನಾಟಕಗಳು :

| | | | |
|---|---|---|---|
| ೧೮ | ಮಿಂಚಿನ ಹುಡಿ | ಕೃಷ್ಣಕುಮಾರ | .... ೨ ೮ ೦ |
| ೧೯ | ಎತ್ತಿದ ಕೈ | ರಂ. ಶ್ರೀ. ಮುಗಳಿ | .... ೧ ೧೪ ೦ |
| ೨೦ | ಯುಗಾಂತರ | ವಿ. ಕೃ ಗೋಕಾಕ | .... ೦ ೧೨ ೦ |
| ೨೧ | ಬಿತ್ತಿದ ಬೆಳೆ | ಶಿವರಾಮ ಕಾರಂತ | .... ೧ ೦ ೦ |
| ೨೨ | ಪರಿವರ್ತನ | ಲ. ಜಿ. ಬೇಂದ್ರೆ | .... ೦ ೧೨ ೦ |
| ೨೩ | ವೇಣುಮಾವ | ಶ್ರೀಮತಿ ಪ. ಸೀತಾದೇವಿ | .... ೦ ೧೨ ೦ |
| ೨೪ | ಮಗು | ಕೆ. ಎ. ಎನ್. ರಾವ | .... ೧ ೮ ೦ |

| | | | |
|---|---|---|---|
| ೨೫ | ಹೊಸ ಸಂಸಾರ | ದ. ರಾ. ಬೇಂದ್ರೆ | ....೨ ೮ ೦ |
| ೨೬ | ಭಾಗ್ಯಶ್ರೀ | ಅ. ಬಿ. ಬೇಂದ್ರೆ | ....೧ ೦ ೦ |
| ೨೭ | ವಿಮರ್ಶಕ ವೈದ್ಯ | ವಿ. ಕೃ. ಗೋಕಾಕ | ....೦ ೬ ೦ |
| ೨೮ | ನಲದಮಯಂತಿ | ಕೆರೂರ ವಾಸುದೇವಾಚಾರ್ಯರು | ....೧ ೮ ೦ |

## ಸಣ್ಣಕತೆ, ಲಲಿತಪ್ರಬಂಧಗಳು :

| | | | |
|---|---|---|---|
| ೨೯ | ಕುರಿಹಿಂಡು | ಜಲಧರ | ....೨ ೮ ೦ |
| ೩೦ | ಹೂಬಾಣಗಳು | ಪ. ರಮಾನಂದ | ....೩ ೦ ೦ |
| ೩೧ | ಜಡಭರತನ ಕನಸುಗಳು | ಜಡಭರತ | ....೧ ೮ ೦ |
| ೩೨ | ಪ್ರೇಮವಿಜಯ | ಕೆರೂರ ವಾಸುದೇವಾಚಾರ್ಯ | ....೨ ೮ ೦ |
| ೩೩ | ಬೆಳಗಿದ ದೀಪಗಳು | ,, ,, | ....೧ ೧೨ ೦ |
| ೩೪ | ತೊಳೆದ ಮುತ್ತು | ,, ,, | ....೩ ೦ ೦ |
| ೩೫ | ಬಹುಮಾನ ಪಡೆದ ಬರಹಗಳು | ವಿವಿಧ ಲೇಖಕರು | ....೧ ೧೨ ೦ |
| ೩೬ | ಚೀನದ ಬಾಳು-ಬದುಕು | ,, ,, | ....೭ ೦ ೦ |
| ೩೭ | ಬಾಳ-ಹೊಳೆ | ಅಶ್ವತ್ಥ | ....೨ ೮ ೦ |

## ಕಾವ್ಯಗಳು :

| | | | |
|---|---|---|---|
| ೩೮ | ಗರಿ | ಅಂಬಿಕಾತನಯದತ್ತ | ಸಾದಾ ೨ ೦ ೦<br>ಒಳ್ಳೆ ಕಾಗದ ೨ ೮ ೦ |
| ೩೯ | ಗಂಗಾವತರಣ | ,, ,, | ಸಾದಾ ೨ ೦ ೦<br>ಒಳ್ಳೇ ಕಾಗದ ೨ ೮ ೦ |
| ೪೦ | ಸಖೀಗೀತ | ,, ,, | ....೨ ೮ ೦ |
| ೪೧ | ಬಾಸಿಗ | ರಂ. ಶ್ರೀ. ಮುಗಳಿ | ....೧ ೪ ೦ |
| ೪೨ | ಸಮುದ್ರ ಗೀತಗಳು | ವಿ. ಕೃ. ಗೋಕಾಕ | ....೧ ೪ ೦ |
| ೪೩ | ಮಹಾಯುದ್ಧ | ಕೆ. ಎ. ಎನ್. ರಾವ | ....೧ ೮ ೦ |

## ವಿಮರ್ಶಾತ್ಮಕ ಗ್ರಂಥಗಳು :

| | | | |
|---|---|---|---|
| ೪೪ | ಸಾಹಿತ್ಯ ಸಂಶೋಧನ | ದ. ರಾ. ಬೇಂದ್ರೆ | ....೨ ೮ ೦ |
| ೪೫ | ಸಾಹಿತ್ಯ ಮತ್ತು ವಿಮರ್ಶೆ | ,, ,, | ....೧ ೮ ೦ |
| ೪೬ | ದತ್ತವಾಣಿ | ಮಿರ್ಜಿ ಅಣ್ಣಾರಾಯರು | ....೧ ೪ ೦ |
| ೪೭ | ಮಾತೃವಾಣಿ | ಶಿಶು ಮಧುರಚೆನ್ನ | ....೧ ೪ ೦ |
| ೪೮ | ಯುಗಪ್ರವರ್ತಕ ಬಸವಣ್ಣ | ಚಿಂತಾಮಣಿ | ....೧ ೦ ೦ |

# ಈ ಮೂರು ವರ್ಷಗಳಲ್ಲಿ ಹೊರಟ ಗ್ರಂಥಗಳು

## ೧೯೪೯ ಅಗಸ್ಟದಿಂದ ೧೯೫೦ ಜುಲೈ ವರೆಗಿನ ಒಂದು ವರ್ಷದಲ್ಲಿ ಶತಗ್ರಂಥಪೂರ್ತಿಯ ನೆನಪಿಗಾಗಿ ಪ್ರಕಟವಾದ ಗ್ರಂಥಗಳು

| | | | | |
|---|---|---|---|---|
| ೧ | ಜಡಭರತನ ಕನಸುಗಳು .... | ಜಡಭರತ | ೧೩೭ | ೧-೮-೦ |
| ೨ | ಗಂಗಾಸಾನಿ (ಕಾದಂಬರಿ) .... | ವರಗಿರಿ | ೧೬೮ | ೧-೧೪-೦ |
| ೩ | ಮಗು (ನಾಟಕ) .... | ಅಶ್ವತ್ಥ | ೧೦೫ | ೧-೮-೦ |
| ೪ | ಜೀವನದ ಬಾಳು-ಬದುಕು (ಕತೆಗಳು) | ಬೇರೆಬೇರೆಯವರು | ೪೩೩ | ೭-೦-೦ |
| ೫ | ಮೇದಿನಾಪುರದ ಮಲ್ಲ (ಕಾದಂಬರಿ) | ಗುರುರಾಜ | ೨೧೭ | ೨-೧೨-೦ |
| ೬ | ಮಾದನ ಮಗಳು (ಕಾದಂಬರಿ) | ಎಂ. ವಿ. ಸೀ. | ೪೦೩ | ೬-೦-೦ |

ಒಟ್ಟು ಕೊಟ್ಟ ಪುಟಗಳು : ೧೪೬೩. ಮುಖಬೆಲೆ ೨೦-೮-೦

## ೧೯೫೦ ಅಗಸ್ಟದಿಂದ ೧೯೫೧ ಜುಲೈವರೆಗಿನ ಒಂದು ವರ್ಷದಲ್ಲಿ ಪ್ರಕಟವಾದ ಗ್ರಂಥಗಳು

| | | | | |
|---|---|---|---|---|
| ೧ | ಹೊಸ ಸಂಸಾರ (ನಾಟಕ) .... | ದ. ರಾ. ಬೇಂದ್ರೆ | ೧೮೬ | ೨-೮-೦ |
| ೨ | ಇಂದ್ರಚಾಪ (ಕಾದಂಬರಿ) .... | ರಂಗರಾವ ತಳ್ಳೇರಿ | ೧೮೮ | ೨-೮-೦ |
| ೩ | ಬಾಳಹೊಳೆ (ಕತೆಗಳು) .... | ಅಶ್ವತ್ಥ | ೨೨೮ | ೨-೮-೦ |
| ೪ | ಭಾಗ್ಯಶ್ರೀ (ನಾಟಕ) .... | ಎಲ್. ಜೆ. ಬೇಂದ್ರೆ | ೭೭ | ೧-೦-೦ |
| ೫ | ಎರಡನೆಯ ಸಂಬಂಧ (ಕಾದಂಬರಿ) | ಎನ್ಕೆ ಕುಲಕರ್ಣಿ | ೨೯೦ | ೩-೦-೦ |

ಒಟ್ಟು ಕೊಟ್ಟ ಪುಟಗಳು : ೯೬೯ ಮುಖಬೆಲೆ ೧೧-೮-೦

## ೧೯೫೧ ಅಗಸ್ಟದಿಂದ ೧೯೫೨ ಜುಲೈ ವರೆಗಿನ ಒಂದು ವರ್ಷದಲ್ಲಿ ಪ್ರಕಟವಾದ ಗ್ರಂಥಗಳು.

| | | | | |
|---|---|---|---|---|
| ೧ | ಮರ್ಯಾದೆ ಮಹಲು (ಕಾದಂಬರಿ).... | ಅಶ್ವತ್ಥ | ೩೫೦ | ೩—೮—೦ |
| ೨ | ಯವನಸ್ವೈರಂಧ್ರೀ .... | ಕೆರೂರ ವಾಸುದೇವಾಚಾರ್ಯ | ೨೨೫ | ೨—೪—೦ |
| ೩ | ಪ್ರೇಮವಿಜಯ (ಐತಿಹಾಸಿಕ ಕಥೆಗಳು) | ,, | ೨೪೬ | ೨—೮—೦ |
| ೪ | ಬೆಳಗಿದ ದೀಪಗಳು (ಚಾರಿತ್ರಿಕ ಕಥೆಗಳು) | ,, | ೧೭೦ | ೧-೧೨-೦ |

ಒಟ್ಟು ಕೊಟ್ಟ ಪುಟಗಳು: ೯೯೧ ಮುಖಬೆಲೆ ೧೦—೦—೦

## ೧೯೫೨ ಅಗಸ್ಟದಿಂದ ೧೯೫೩ ಜುಲೈ ವರೆಗಿನ ಒಂದು ವರ್ಷದಲ್ಲಿಯ ಕೆಲ ಗ್ರಂಥಗಳು.

| | | | | |
|---|---|---|---|---|
| ೧ | ತೊಳೆದ ಮುತ್ತು (ಬೆಳ್ಳೀಚಿಕ್ಕೆ ಸಹಿತ) | ಕೆರೂರರವರು | ೩೧೦ | ೩—೨—೦ |
| ೨ | ಸಮರಸವೇ ಜೀವನ(ಇಜ್ಜೋಡಿನ ಮುಂದಿನ ಭಾಗ) | ಗೋಕಾಕ | ಅಚ್ಚಿನಲ್ಲಿ | |
| ೩ | ಗಾಳಿಯ ಉಡಿಯಲ್ಲಿ (ಪ್ರಬಂಧಗಳು) | ಪ್ರೊ. ಕೆ. ಆರ್. ಮಹಿಷಿ | ,, | |
| ೪ | ಆಶುನಾಟಕಗಳು (ಏಕಾಂಕಗಳು) .... | ಜಿ. ಬಿ. ಜೋಶಿ | ,, | |
| ೫ | ಮೂಕಬಲಿ | ಜಡಭರತ .... | ,, | ,, |